ಫಲಜ್ಯೋತಿಷ್ಯ ಜ್ಯೋತಿರ್ಮಾಲಾ

ನಕ್ಷತ್ರ : ೨

# ಸ್ತ್ರೀ ಜ್ಯೋತಿಷ್ಯ



ಲೇಖಕರ :
ಶ್ರೀ ಎನ್. ಕೆ. ಜೋಗಳೇಕರ
ಧಾರವಾಡ



[ ಬೆಲೆ : ಹತ್ತು ರೂಪಾಯಿ ]

# ಸಮರ್ಪಣ

ಹಿರಿಯ ಸಾಹಿತಿಗಳೂ ಪ್ರಸಿದ್ಧ ಸಂಪಾದಕರೂ ಆದ

## ಕವಿಭೂಷಣ ಶ್ರೀ. ಬೆಟಗೇರಿ ಕೃಷ್ಣ ಶರ್ಮ

ಅವರ

ಆತ್ಮೀಯತೆಯನ್ನೂ, ವಿಶಾಲ ಹೃದಯವನ್ನೂ, ಸೌಹಾರ್ದವನ್ನೂ
ನೆನೆದು ಈ ಕೃತಿಯನ್ನು ಕೃತಜ್ಞತಾಪೂರ್ವಕವಾಗಿ
ಸಮರ್ಪಿಸುತ್ತಿದ್ದೇನೆ.

— ಲೇಖಕ

# ಮುನ್ನುಡಿ

ಶ್ರೀ. ಎನ್. ಕೆ. ಜೋಗಳೇಕರ ಅವರು ತಮ್ಮ 'ಸ್ತ್ರೀ ಜ್ಯೋತಿಷ್ಯ' ಎಂಬ ಪುಸ್ತಕಕ್ಕೆ ಮುನ್ನುಡಿಯಾಗಿ ಎರಡು ಮಾತುಗಳನ್ನು ಬರೆಯಬೇಕು ಎಂದು ಕೇಳಿದರು. ಅವರು ಜ್ಯೋತಿಷ್ಯ ಶಾಸ್ತ್ರದಲ್ಲಿಯ ಪ್ರವೇಶವನ್ನು ತಮ್ಮ ತಂದೆಯವರಿಂದ ಪಡೆದವರು, ಅಲ್ಲದೆ ಒಬ್ಬ ಗುರುವಿನಲ್ಲಿಯೂ ಕಲಿತು ಉಪಾಸನೆಯನ್ನೂ ಮಾಡಿದವರು. ನನಗೆ ಜ್ಯೋತಿಷ್ಯ ಶಾಸ್ತ್ರದ ವಿಷಯ್ವದಲ್ಲಿಯೂ ಫಲ ಜ್ಯೋತಿಷ್ಯದ ವಿಷಯವಾಗಿಯೂ ಸತತವಾದ ಒಂದು ಜಿಜ್ಞಾಸೆಯಿದೆ. ಇದನ್ನು ಅವರು ಬಲ್ಲವರಾಗಿದ್ದರು—ಇದೊಂದೇ ಕಾರಣ ವಲ್ಲದೆ, ನಾನು ಅವರ ಆಪ್ತವರ್ಗಕ್ಕೆ ಸೇರಿದ ಒಬ್ಬ ಹಿರಿಯ. ತಾವು ಮಾಡುತ್ತಿರುವ ಸಂಬಳದ ನೌಕರಿಯನ್ನು ಬಿಟ್ಟು ಈ ವ್ಯವಹಾರ ಮಾಡಬಹುದೇ ? ಎಂದು ಅವರು ನನ್ನನ್ನು ವಿಚಾರಿಸಿದಾಗ ನಾನು ಹೇಳಿದ ಕೆಲವು ಮಾತುಗಳನ್ನು ಅನುಸರಿಸಿ ಅವರು ಕೆಲಮಟ್ಟಿಗೆ ಉದ್ಯೋಗಪರರಾದುದರಿಂದ ಮುನ್ನುಡಿ ಬರೆಯಲು ಒಪ್ಪಿಕೊಳ್ಳಬೇಕಾಯಿತು. ಈ ಮಾರ್ಗದಲ್ಲಿ ಅವರು ಈ ಮೊದಲೇ ಪ್ರಕಟಿಸಿದ 'ವಧೂ-ವರರ ಜ್ಯೋತಿಷ್ಯ' ಎಂಬ ಪುಸ್ತಕದ ಪ್ರಥಮ ಆವೃತ್ತಿ ತೀರಲು ಬಂತು ಎಂದು ಹೇಳಿದಂದಿಂದಲೂ ಅವರ ಬರವಣಿಗೆಗೆ ಸಿಕ್ಕ ಸ್ವಾಗತವನ್ನರಿತು ಆ ಪುಸ್ತಕದ ಮುಂದಿನ ಹೆಜ್ಜೆಯಾದ ಈ ಎರಡನೆಯ ಗ್ರಂಥಕ್ಕೆ ನನ್ನೆರಡು ಆಲೋಚನೆಯ ಮಾತುಗಳನ್ನು ಜೋಡಿಸುತ್ತಿದ್ದೇನೆ.

ಫಲಜ್ಯೋತಿಷ್ಯವು ಕಾಲುಪಾಲು ಶಾಸ್ತ್ರ, ಉಳಿದ ಮುಕ್ಕಾಲು ಪಾಲು ಒಂದು ಬಗೆಯ ವಿಜ್ಞಾನ. ಅದರಲ್ಲಿ ಅಂತರಂಗ ವಿಜ್ಞಾನವೂ ಉಂಟು, ಬಹಿರಂಗ ವಿಜ್ಞಾನವೂ ಉಂಟು. ಶಾಸ್ತ್ರವು ಗಣಿತ ಭಾಗ ನಮ್ಮಲ್ಲಿ ವಿವಿಧ ಪಂಚಾಂಗಗಳ ಸಂಪ್ರದಾಯ ಹುಟ್ಟಿ, ವಿವಿಧ ಕರ್ಣ ಗ್ರಂಥಗಳಿಂದ ಗಣಿತದಲ್ಲಿಯ ತಕ್ಕಮಟ್ಟಿನ ತೊಂದರೆಯುಂಟಾಗಿದೆ. ಸಂಶಯ ಹುಟ್ಟಿದೆ. ಪಾಶ್ಚಾತ್ಯ ದೇಶಗಳಲ್ಲಿಯೂ ಈ ಶಾಸ್ತ್ರದ ಅಭ್ಯಾಸ

ವಿವಿಧ ಮುಖವಾಗಿ ಬೆಳೆಯುತ್ತಿದೆ. ಅದರ ಪ್ರಭಾವವೂ ನಮ್ಮ ಜಿಜ್ಞಾಸೆಗೆ ಅನ್ನವೊದಗಿಸುತ್ತಿದೆ. ಪ್ರಕಾಶಕ್ಕೆ ಬರಬೇಕೆನ್ನುತ್ತಿರುವ ನಾಡಿಗ್ರಂಥಗಳ ರಹಸ್ಯಮಯವಾದ ಪವಾಡದ ಭಾಗ ಇದ್ದೇ ಇದೆ. ಉಪಾಸನಾ ಬಲದಿಂದ ಒಂದು ಬಗೆಯ ಸಿದ್ಧಿಯನ್ನು ಪಡೆದು, ಅಥವಾ ಸತತವಾದ ಸೂಕ್ಷ್ಮಾವಲೋಕನದಿಂದ ವ್ಯಾವಹಾರಿಕ ಜ್ಞಾನಸಂಗ್ರಹ ಮಾಡಿ ಜೀವನಫಲವನೂ ಹೇಳಬಲ್ಲ, ಅದರ ಅಂದಾಜು ಕಟ್ಟಬಲ್ಲ ವಿವಿಧ ವ್ಯಕ್ತಿಗಳೂ ಈಗಲೂ ಇದ್ದಾರೆ. ಜ್ಯೋತಿಷ್ಯದಲ್ಲಿ ತಮಗೆ ನಂಬುಗೆಯಿಲ್ಲ ಎಂದು ರಂಬಾಟಮಾಡಿ ವಿನೋದಕ್ಕಾಗಿ ತಮ್ಮ ಜಾತಕ ಫಲ ತಿಳಿದುಕೊಳ್ಳುತ್ತೇವೆ ಎಂಬ ಡಂಭದವರೂ ಫಲ ಜ್ಯೋತಿಷ್ಯದ ಮೇಲೆ ಒಂದು ಕಣ್ಣಿಟ್ಟಿರುತ್ತಾರೆ. ಎಂಥ ಉದ್ಧಟ ನಾಸ್ತಿಕನೂ ಕತ್ತಲೆಯ ಕಾಲದಲ್ಲಿ ದೇವರಿದ್ದರೆ ಒಳಿತಾಗುತ್ತಿತ್ತು ಎಂದು ಕೊಳ್ಳದೆಯೆ ಇರಲಾರ, ಎಂಬರ್ಥದ ಮಾರ್ಮಿಕೋಕ್ತಿಯನ್ನು ವ್ಯವಹಾರಜ್ಞರು ತಿಳಿದಿರಲು ಸಾಕು. ಅಂತೂ ಫಲ ಜ್ಯೋತಿಷ್ಯದ ವಿರೋಧವಾಗಿ ಶಾಸ್ತ್ರೀಯ ಅಶಾಸ್ತ್ರೀಯ ಎಷ್ಟೇ ಮಾತುಗಳಿದ್ದರೂ ಅದಕ್ಕೆ ಅನುಕೂಲವಾದ ಕೆಲ ಮಾತುಗಳೂ ಇವೆ.

ಪದಾರ್ಥ ವಿಜ್ಞಾನಶಾಸ್ತ್ರಗಳು ನಿಸರ್ಗ ನಿಯಮಗಳನ್ನು ಕಂಡುಹಿಡಿದು ಅದರಿಂದ ವ್ಯವಹಾರಿಕ ಉಪಯೋಗ ಪಡೆಯುತ್ತಿದ್ದುದು ಪ್ರತ್ಯಕ್ಷವೇ ಇದೆ. ಮಾನವನ ದೈವದ ಕಟ್ಟಿಗೂ ನಿಯಮಗಳಿರಬೇಕು ಎಂಬ ಆಸೆ ತೀರ ಅಯುಕ್ತವಾದದ್ದಲ್ಲ. ದೈವ ಅನುಲ್ಲಂಘ್ಯವಾಗಿದ್ದರೆ ಅದನ್ನು ತಿಳಿದೇನು ಫಲ ? ಅದು ಅನುಲ್ಲಂಘ್ಯವಲ್ಲದಿದ್ದರೆ ಅದರ ಉಸಾಬರಿಯಿಂದಾದರೂ ಏನು ಫಲ—ಎಂಬ ಒಂದು ತರ್ಕ ಇದ್ದೇ ಇದೆ. 'ಭವಿಷ್ಯಜ್ಞಾನಿ' ಅಲ್ಲದ ವ್ಯವಹಾರಜ್ಞನು ಅಂದಾಜು ಮಾಡುವ ಗುಣವನ್ನು ಪಡೆಯಬೇಕೆಂದು ಜಾಗರೂಕತೆಯ ಅವಲೋಕನೆಯನ್ನು ಮಾಡುತ್ತಲೇ ಇರುತ್ತಾನೆ. 'ಫಲ ಜ್ಯೋತಿಷ್ಯ'ಕ್ಕೆ ಅಷ್ಟಾದರೂ ಬೆಲೆ ಇದೆ. ಈ ಬೆಲೆಯನ್ನು ಸಾಮಾಜಿಕ ನಿರೀಕ್ಷಣದಿಂದ ಬೆಳೆಸಬಹುದು. ಕೈಬರೆಹದಿಂದ, ತಲೆಬುಂಗುಟಿಗಳಿಂದ, ಮೈಮೇಲಿನ ಚಿಹ್ನೆಗಳಿಂದ, ಒಬ್ಬ ಜಾತಕನ ಗುಣಗಳನ್ನು, ಶಕ್ತಿ-ಅಶಕ್ತಿಗಳನ್ನು ಕಂಡುಹಿಡಿಯಬಹುದೆಂದು ಪ್ರಯತ್ನಪಡುವವರಿದ್ದಾರೆ. ಹೆಬ್ಬೆಟ್ಟಿನ ಗುರುತಿನಿಂದ ಅವ

ರಾಧಿಯನ್ನು ಕಂಡುಹಿಡಿಯುವ ಶಾಸ್ತ್ರವು ಗ್ರಹಾವಲೋಕನ, ವಾಯುಚಲನೆ, ಆಕಾಶ ನಿರೀಕ್ಷಣೆಗಳಿಂದ ಹವಾಮಾನ, ಮಳೆಯ ಲಕ್ಷಣ ಮೊದಲಾದುವನ್ನು ಕಂಡುಹಿಡಿಯಲು ಪ್ರಯತ್ನಿಸುವಂತೆ ಜಾತಕನ ಕುಂಡಲಿಯಿಂದ ಅವನ ಸ್ವಭಾವದ ಕಟ್ಟುನಿಟ್ಟುಗಳನ್ನು ಕಂಡುಹಿಡಿಯಲು ಹವಣಿಸುವದು ವ್ಯರ್ಥವೇನೂ ಅಲ್ಲ, ಅಂತರಿಕ ವಿಜ್ಞಾನವುಳ್ಳ ಋಷಿಮುನಿಗಳಿಂದ ಫಲ-ಜ್ಯೋತಿಷ್ಯಶಾಸ್ತ್ರವು ಬೆಳೆದಿರುವ ಇತಿಹಾಸ ಇರುವದಾದರೂ ವ್ಯವಹಾರಿಕ ಅವಲೋಕನದಿಂದಲೂ ಈ ಶಾಸ್ತ್ರವನ್ನು ಬೆಳೆಸಿದುದಕೆ ಕಂಡುಬರುತ್ತದೆ. ಫಲ-ಜ್ಯೋತಿಷ್ಯಶಾಸ್ತ್ರ ಗ್ರಂಥಗಳಲ್ಲಿ ಕೊಟ್ಟಿರುವ ಅನೇಕ ಯೋಗಗಳಲ್ಲಿ ಕೆಲವಂತೂ ಈ ಬಗೆಯವುಗಳಾಗಿರಲು ಸಾಕು. ಶ್ರೀ ಜೋಗಳೇಕರ ಅವರು ಇಂಥ ಅವಲೋಕನವನ್ನು ಮಾಡಿ ಯೋಗಸಂಗ್ರಹ ಮಾಡಲು ಪ್ರಯತ್ನಿಸುವದಾಗಿ ಹೇಳಿದ್ದಾರೆ ಅರ್ಥಾತ್ ಇಂಥ ಪ್ರಯತ್ನದಲ್ಲಿ ಅನೇಕ ಸಾಮಾಜಿಕರ ಸಹಾಯ ಬೇಕೇ ಬೇಕು. ಅವರ ಗ್ರಂಥಗಳನ್ನು ಓದಿ ಮೆಚ್ಚಿದವರಲ್ಲಿ ಕೆಲವರಾದರೂ ಅವರಿಗೆ ಕುಂಡಲಿಗಳನ್ನೂ ಜೀವನ ಘಟನೆಗಳನ್ನೂ ಒದಗಿಸಿದರೆ ಅದರಿಂದ ಹಲಕೆಲವು ನಿಯಮಗಳನ್ನು ಕಟ್ಟಲು ಅನುವಾಗುವದು.

ನಾನೂ ಕೂಡ ಫಲ-ಜ್ಯೋತಿಷ್ಯ ಗ್ರಂಥಗಳನ್ನು ಓದಿ ಗೊಂದಲಗೆಟ್ಟಿದ್ದೂ ಉಂಟು. ಈ ಶಾಸ್ತ್ರದಲ್ಲಿ 'ಪಂಚ ಭವತಿ ಪಂಚ ನ ಭವತಿ' ಎಂಬ ನ್ಯಾಯವನ್ನೂ ಹೇಳುವದುಂಟು, ಶಾಸ್ತ್ರಜ್ಞನಿಗೂ, ವಿಜ್ಞಾನಿಗೂ 'ಭವತಿ' ಯಷ್ಟೇ 'ನ ಭವತಿ'ಯೂ ಮಾರ್ಗದರ್ಶಕವಾಗುತ್ತದೆ. ನೂರಕ್ಕೆ ತೊಂಬತ್ತರಷ್ಟು ಅಂದಾಜ ವಿಫಲವಾದರೂ ಹತ್ತರ ಅಂದಾಜನ್ನು ಅವು ವ್ಯರ್ಥಗೊಳಿಸಲಾರವು. ಕಣಮಟ್ಟಿ ಸಿಗುವ ಬಂಗಾರದ ರೀತಿಯೇ ಬೇರೆ ಜಾಲಗಾರ ಚಿನಿವಾಲರ ಅಂಗಡಿಯ ಉಸುಕಿನಲ್ಲಿ ಸೋಸಿ ತೆಗೆಯುವ ಬಂಗಾರ ಎಷ್ಟೇ ಕಡಿಮೆಯಿದ್ದರೂ ಅದು ಬಂಗಾರವಲ್ಲ ಎಂದಾಗುವದಿಲ್ಲ. ಕೆಲವರಿಗೆ ಮಾತ್ರ ಹೀಗೆ ಬಂಗಾರ ಹುಡುಕಿ ತೆಗೆಯುವ ತಾಳ್ಮೆ ದಂತ್ತು ಗತ್ತು ಸಾಧ್ಯವಾಗಿರುತ್ತದೆ. "ಕ್ಷಣಶಃ ಕಣಶಃ ಚೈವ ವಿದ್ಯಾಂ ಅರ್ಥಂಚ ಸಾಧಯೇತ್" ವಿದ್ಯೆಯನ್ನೇ ಆಗಲಿ ಅರ್ಥವನ್ನೇ ಆಗಲಿ ಕ್ಷಣಕ್ಷಣಕ್ಕೂ ಗಳಿಸಬೇಕು, ಕಣಕಣವಾಗಿಯೂ ಗಳಿಸಬೇಕು. ಬಂಗಾರದ ಕಣಗಳಲ್ಲಿಯೂ

ಬಂಗಾರಕ್ಕಿಂತ ಕಲ್ಲು-ಮಣ್ಣೇ ಹೆಚ್ಚಾಗಿ ದೊರೆಯುತ್ತದೆ. ಹೀಗೆಂದು ಅದನ್ನು ಯಾರೂ ಅವ್ಯವಹಾರ ಎಂದಿಲ್ಲ. ಮತ್ತೂ ಆ ವ್ಯವಹಾರದಲ್ಲಿ ಸಿಕ್ಕವರಿಗೆ ಕೈಹಾಕಲೂ ಬರುವಂತಿಲ್ಲ. ಆದರೂ ಜಾಲಗಾರನ ಬಂಗಾರವನ್ನೂ ಕಣಿಯ ಬಂಗಾರವನ್ನೂ ಎಂಥ ಭಿಕಾರಿಯೂ ಕೂಡ ಹಣವಿದ್ದರೆ ಕೊಳ್ಳಬಹುದು. ಅದೇಕೆ ಎಂಥ ತುಡುಗನೂ ಕೂಡ ಹಣಕ್ಕೆ ಸರಿಯಾಗಿ ಅದನ್ನು ಪಡೆಯಬಹುದು. ದೈವದ ವ್ಯಾಪಾರಕಟ್ಟೆಯಲ್ಲಿ ಲಕ್ಷಾಧಿಪತಿಯಿಂದ ಭಿಕ್ಷಾಪತಿಯವರೆಗೆ ಎಲ್ಲರೂ ತಮ್ಮ ಮುಂದಿನ ದೈವದ ಕುರುಹು ಕಂಡರೆ ಕಾಣಲಿ ಎಂದು ತಿಣುಕುವದುಂಟು. ಎಂಥ ಕುರುಡನೂ ಕೂಡ ತನ್ನ ಕೈ, ಕಾಲು, ಕಿವಿಗಳ ಸಂವೇದನೆಯಿಂದ ಮುಂದಿನ ಹಾದಿಯನ್ನು ಹುಡುಕಲೇ ಬೇಕಾಗುತ್ತದೆ. ಅದು ಹಾಸ್ಯಾಸ್ಪದವೇನೂ ಅಲ್ಲ. ದೈವದ ವ್ಯೂಹವು ಅಕಸ್ಮಾತ್ತಿನ ಸಂತೆಯಂತೆ ಕಂಡರೂ, ಅದಕ್ಕಾದರೂ ಒಂದು ಸಂಭಾವ್ಯತೆಯ ನಿಯಮ ಇದೆಯೋ ಎಂದು ನಾವು ಅದನ್ನು ಸರಾಸರಿಯ ಲೆಕ್ಕದಿಂದಾದರೂ ಕಂಡುಹಿಡಿಯಲು ಅನೇಕ ವ್ಯವಹಾರಗಳಲ್ಲಿ ಹವಣಿಸುತ್ತೇವೆ. ರಾಜಕೀಯ, ವ್ಯವಹಾರ ಮೊದಲು ಮಾಡಿಕೊಂಡು ಸಫಲತೆ, ವಿಫಲತೆಯ ಸರಿ-ಬೆರಿಕೆ ಎಲ್ಲೆಲ್ಲಿಯೂ ಕಂಡುಬರುತ್ತದೆ. ಅಂತೂ ಏನು ? ಈ ಶಾಸ್ತ್ರದ ಭವಿಷ್ಯದಲ್ಲಿ ನಂಬಿಗೆಯುಳ್ಳವರನ್ನು ನಂಬಿಗೆಯಿಲ್ಲದವರು ಒಲಿಸಿಕೊಳ್ಳುವದು ಕಷ್ಟ. ಎಲ್ಲ ವ್ಯಾಪಾರದ ಸಾಹಸವೂ ಅವರವರ ನಂಬುಗೆಯ ಬಲದಿಂದ ಸಾಗುವದಲ್ಲವೆ, ತಟಸ್ಥರಾಗಿ ಕುಳಿತು ವ್ಯರ್ಥತೆ ವಿಫಲತೆಗಳ ಪಂಚಾಯತಿ ಮಾಡುವದರಿಂದ ಅವು ಸಾಗುವದಿಲ್ಲ.

ಶ್ರೀ. ಜೋಗಳೇಕರ ಅವರು 'ವಧೂವರರ ಜ್ಯೋತಿಷ್ಯ' ದಿಂದ ತಮ್ಮ ಫಲಜ್ಯೋತಿರ್ಮಾಲೆಯನ್ನು ಪ್ರಾರಂಭಿಸಿ 'ಸ್ತ್ರೀ ಜ್ಯೋತಿಷ್ಯ'ಕ್ಕೆ ಕೈ ಇಕ್ಕಿದ್ದಾರೆ. ಈ ವಿಚಾರ ಪರಂಪರೆಯಲ್ಲಿ 'ಸಂತತಿಯ ವಿಚಾರ' 'ಬಾಲಕರ ಜಾತಕ' ಮುಂದಿನ ವಿಷಯವೆಂದು ತಾನೇ ಪ್ರಾಪ್ತವಾಗುತ್ತದೆ, ಹೀಗೆ ಒಂದು ಪದ್ಧತಿ ಕ್ರಮವನ್ನು ಹಿಡಿದು ಹೊರಟಿರುವದರಿಂದಲೇ ಅವರಿಂದ ಏನಾದರೂ ಕಾರ್ಯವಾದೀತೆಂದು ನಾನು ಆಶಿಸಿದ್ದೇನೆ. ವಾಚಕರೂ ಕೂಡ ತಮ್ಮ ಜಾತಕವನ್ನು ಸಿದ್ಧಪಡಿಸಿಟ್ಟುಕೊಂಡು ದಶ-ಮುರ್ದಶೆ ತಿಳಿದುಕೊಂಡು, ತಮ್ಮ

ಜೀವನ ಯಾವ ಘಟನೆಗಳೊಳಗಿಂದ ಮುಂದೆ ಸಾಗುತ್ತಿದೆಯೆಂಬುದನ್ನು ಅವರೂ ನಿರೀಕ್ಷಿಸುವ ಅಭ್ಯಾಸ ಮಾಡಿದರೆ ಅಂಥವರಿಗೂ ಕೂಡ ದೈವದ ಗೆರೆಗಳನ್ನು ಒಂದಿಷ್ಟಾದರೂ ಕಾಣುವ ಚಾತುರ್ಯದೃಷ್ಟಿ ಬರದೇ ಹೋಗದು. ಎಚ್ಚರ, ನಿರೀಕ್ಷಣ, ಅಂದಾಜು, ತಾಳ್ಮೆ, ಪ್ರಯತ್ನ, ಶಕ್ತಿವರ್ಧನ ಇವೆಲ್ಲವುಗಳನ್ನು ಜೀವನದ ಸಾಧಕನು ಮಾಡಲೇಬೇಕು.

ಪ್ರಸ್ತುತ ಗ್ರಂಥದಲ್ಲಿ ಪ್ರೀತಿಯೋಗ, ಘಟಸ್ಫೋಟ, ವೈಧವ್ಯಯೋಗ, ಸ್ತ್ರೀಯರ ಸ್ವಾವಲಂಬನ, ಸಂತತಿಯೋಗ ಇವೇ ಮೊದಲಾದ ವಿಷಯಗಳ ಮೇಲೆ ವಿಶೇಷವಾಗಿ ಬರೆಯಲಾಗಿದೆ. ವಾಚಕರಿಗೆ ಇದರ ಅನುಭವ ಯಾವ ರೀತಿಯಲ್ಲಿ ಬಂದುಬಿಟ್ಟಿತು. ಇದನ್ನು ಗ್ರಂಥಕರ್ತರಿಗೆ ತಿಳಿಸಿದ್ದಾದರೆ ಇಂಥ ಅಂದಾಜಿನ ಶಾಸ್ತ್ರದ ಬುಡಕಟ್ಟಿಗೆ ಭದ್ರತೆ ಬರುತ್ತದೆ. ಅದನ್ನು ವಾಚಕರು ಮಾಡಿಯಾರು ಎಂದು ನಾನು ನಂಬಿದ್ದೇನೆ.

ಸಾಧನಕೇರಿ<br>೭-೭-೧೯೫೮

ದ. ರಾ. ಬೇಂದ್ರೆ

# ಲೇಖಕನ ನಾಲ್ಕು ಮಾತುಗಳು

ನನ್ನ ಪ್ರಥಮ ಕೃತಿಯಾದ 'ವಧೂವರರ ಜ್ಯೋತಿಷ್ಯ' ಪುಸ್ತಕವು ಪ್ರಕಟವಾಗಿ ಏಳೆಂಟು ತಿಂಗಳ ಸಮಯದಲ್ಲಿಯೇ ಎರಡನೆಯ ಕೃತಿಯು ಬೆಳಕಿಗೆ ಬರುತ್ತಿರುವದನ್ನು ಕಂಡಾಗ ನನಗಂತೂ ತುಂಬ ಆನಂದವಾಗುತ್ತದೆ. ಇದು ಫಲಜ್ಯೋತಿಷ್ಯ ಜ್ಯೋರ್ಮಾಲೆಯ ಎರಡನೆಯ ನಕ್ಷತ್ರವಾಗಿದೆ. ನಾನು ಈಗಾಗಲೇ ಪ್ರಕಟಪಡಿಸಿದಂತೆ "ಕುಂಡಲೀ ಗುಣನಿರ್ಣಯ" ಎಂಬ ಗ್ರಂಥ ವನ್ನು ಪ್ರಕಟಿಸಬೇಕಾಗಿತ್ತು. ಆದರೆ ಸ್ತ್ರೀಯರ ಜಾತಕದ ವಿಷಯವನ್ನೇ ಮುಖ್ಯವಾಗಿಟ್ಟುಕೊಂಡು ಪುಸ್ತಕವನ್ನು ಬರೆಯಲು ಸೂಚಿಸಿದ ಕೆಲವು ಮಹಿಳೆಯರೇ ಈ ಕೃತಿಗೆ ಕಾರಣರಾಗಿದ್ದಾರೆ. ಇದಲ್ಲದೆ ಮೊದಲಿನ ಪುಸ್ತಕ ವಾದ 'ವಧೂವರರ ಜ್ಯೊತ್ತಿಷ್ಯಕ್ಕೆ' "ಸ್ತ್ರೀ ಜ್ಯೋತಿಷ್ಯ" ತಕ್ಕ ಪೂರಕ ಪುಸ್ತಕವೆಂದು ಇದನ್ನೇ ಈಗ ಪ್ರಕಟಿಸುವದು ಯುಕ್ತವೆಂದು ತೋರಿತು. ಈ ಸಂದರ್ಭದಲ್ಲಿ ಒಂದು ಹೊಸ ವಿಷಯದ ಬಗ್ಗೆ ಬರೆಯಲು ಪ್ರೋತ್ಸಾಹಿಸಿ ಪತ್ರ ಬರೆದ ಅನೇಕ ಸಹೋದರಿಯರಿಗೆ ನಾನು ಋಣಿ.

ಸ್ತ್ರೀಯರ ಕುಂಡಲಿಯನು ಕೇವಲ ವಿವಾಹವನ್ನು ಹೊಂದಿಸಲು ಮಾತ್ರ ತಯಾರಿಸುತ್ತಾರೆ ಪರೀಕ್ಷಿಸುತ್ತಾರೆ. ವಿವಾಹದ ನಂತರ ಸ್ತ್ರೀಯರ ಕುಂಡಲಿಗಳನ್ನು ಅಭ್ಯಸಿಸಿ ಫಲಜ್ಯೋತಿಷ್ಯ ಶಾಸ್ತ್ರದ ನಿಯಮಗಳಿಗೆ ಹೊಂದಿ ಸುವದು ಅತ್ಯಂತ ಕಠಿಣವಾದ ಕೆಲಸ. ಈ ಪುಸ್ತಕದಲ್ಲಿ ಕೇವಲ ಶಾಸ್ತ್ರೀಯ ವಿವರಣೆ ಅಷ್ಟೇ ಇಲ್ಲ. ಶಾಸ್ತ್ರೀಯ ವಿವೇಚನೆಯು ಕೇವಲ ಅಸ್ಥಿಪಂಜರ ಅದಕ್ಕೆ ಹೊದಿಕೆಯಾಗಿ ರೂಪಧಾರಣ ಮಾಡಿದ್ದು ಸ್ವಾನುಭವ. ಕಳೆದ ಹನ್ನೆರಡು ವರುಷದ ಅನುಭವದಲ್ಲಿ ನಾನು ಸಾವಿರಾರು ಜಾತಕಗಳನ್ನು ಕಂಡಿದ್ದೇನೆ ಅಭ್ಯಸಿಸಿದ್ದೇನೆ. ಯಾವ ಮಾತೇ ಇಂಲಿ ಅದನ್ನು ಹೇಳು ವಾಗ ಹತ್ತಾರು ಸ್ತ್ರೀಯರ ಕುಂಡಲಿಗಳು ಮತ್ತು ಅವರ ಜೀವನದ ಸ್ಥಿತಿಗತಿ ಗಳು ನನ್ನ ಸ್ಮೃತಿ ಪಟಲದ ಮೇಲೆ ಹಾಯ್ದು ಹೋಗುತ್ತವೆ. ಅನುಭವ ದಿಂದ ಸಮೀಕರಣ ಮಾಡಿದಾಗಲೇ ಶಾಸ್ತ್ರವಾಗುವದಿಲ್ಲವೇ ? ಈ ಶಾಸ್ತ್ರ ಬಹಳೇ ಪುರಾತನ ಕಾಲದಿಂದ ನಮ್ಮ ಜನರ ಸಂಸ್ಕೃತಿಯಲ್ಲಿಯೇ ಬೆರತು ಹೋಗಿದೆ. ಹಳ್ಳಿ-ಹಳ್ಳಿಗಳಲ್ಲಿ ಕೂಡ ಇದೊಂದು ಸುಲಭವಾದ ಜೀವನ ಪ್ರಶ್ನೆಗಳನ್ನು ಬಿಡಿಸುವ ಉಪಕರಣವಾಗಿ ಬಿಟ್ಟಿದೆ. ನಾಗರಿಕತೆಯು

ಮುಂದುವರಿದಂತೆ ಅದಕ್ಕೆ ಅನುಗುಣವಾಗಿ ಶಾಸ್ತ್ರ ಬರೆಯುವ ಅವಶ್ಯಕತೆ ಉಂಟು. ಆ ಸಾಹಸವನ್ನು ಕೈಕೊಳ್ಳಲು ಇಲ್ಲಿ ಪ್ರಯತ್ನಿಸಿದ್ದೇನೆಂದು ಭಾವಿಸಿರುವೆ.

ಈ ಪುಸ್ತಕಕ್ಕೆ ಒಂದು ಯೋಗ್ಯವಾದ ಮುನ್ನುಡಿಯನ್ನು ಬರೆದುಕೊಟ್ಟ ಹಿರಿಯರಾದ ಶ್ರೀ. ದ. ರಾ. ಬೇಂದ್ರೆಯವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ನನ್ನ ಪ್ರಥಮ ಕೃತಿಯಾದ 'ವಧೂವರರ ಜ್ಯೋತಿಷ್ಯ' ಉದ್ಘಾಟನಾ ಸಮಾರಂಭವನ್ನು ಜರುಗಿಸಿ ಪ್ರೋತ್ಸಾಹಿಸಿದ್ದರು. ಈಗ ಮುನ್ನುಡಿ ಬರೆದು ಹರಕೆಯಿತ್ತಿದ್ದಾರೆ. ಅವರಿಗಿದ್ದ ಜ್ಯೋತಿಷ್ಯದ ಜ್ಞಾನದ ಬಗ್ಗೆ ನಾನೇನೂ ಬರೆಯಬೇಕಾಗಿಲ್ಲ. ನಮ್ಮ ಫಲಜ್ಯೋತಿಷ್ಯ ಜ್ಯೋತಿರ್ವರ್ಗಳಿಗೆ 'ಆಧ್ಯಾತ್ಮ ಜ್ಯೋತಿಷ್ಯ' ಮತ್ತು 'ಆದಿಭೌತಿಕಶಾಸ್ತ್ರ ಹಾಗೂ ಜ್ಯೋತಿಷ್ಯ' ಎಂಬೆರಡು ಪುಸ್ತಕಗಳನ್ನು ಬರೆದು ಕೊಡುವದಾಗಿ ಹೇಳಿದ್ದಾರೆ. ಈ ಪುಸ್ತಕಗಳು ಬೇಗನೆ ಬೆಳಕಿಗೆ ಬರುವವೆಂದು ಆಶಿಸುತ್ತೇನೆ.

ಈ ಕೃತಿಯನ್ನು ಅರ್ಪಿಸಲು ಅನುಮತಿಯನ್ನು ಕೊಟ್ಟ ಹಿರಿಯರಾದ ಶ್ರೀ. ಬೆಟಗೇರಿ ಕೃಷ್ಣಶರ್ಮರಿಗೆ ನಾನು ಋಣಿಯಾಗಿದ್ದೇನೆ. ಈ ಕೃತಿಯು ಇಷ್ಟು ಬೇಗನೆ ಪ್ರಸಿದ್ಧವಾಗಲು ಮುಖ್ಯ ಹೊಣೆಗಾರರಾದ ಶ್ರೀ. ಸಿ. ಜಿ. ಬೆಂಡಿಗೇರಿ ಬಿ. ಎ. ಎಲ್ ಎಲ್. ಬಿ., ವಕೀಲ ಧಾರವಾಡ ಇವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆ. ಶ್ರೀ. ಬಿ. ಎಸ್. ಕಟ್ಟಿ, ಬಿ. ಇ. ಡೆಪ್ಯುಟಿ ಇಂಜನಿಯರ, ಶ್ರೀ. ವಿ. ಆರ್. ಭಿಂಗೆ, ಶ್ರೀ. ಎಸ್. ವ್ಹಿ. ಗೋಳವಿಲ್ಕರ, ಶ್ರೀ. ಬಿ. ವ್ಹಿ. ರಾಜಾಜ್ಞ, ಶ್ರೀ. ಎಸ್. ವ್ಹಿ. ಅಗ್ನಿಹೋತ್ರಿ ಈ ಎಲ್ಲ ಮಹನೀಯರೂ ಆರ್ಥಿಕ ವಿಷಯದಲ್ಲಿ ನನಗೆ ಬಹಳ ಸಹಾಯ ಮಾಡಿದ್ದಾರೆ. ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ. ಸ್ವಲ್ಪೇ ಸಮಯದಲ್ಲಿ ಅಂದವಾದ ಮುಖಚಿತ್ರವನ್ನು ತೆಗೆದ ಉದಯೋನ್ಮುಖ ಕಲಾವಿದರಾದ 'ಪ್ರಮೀಲ ಆರ್ಟ್ಸ್' ದವರ ಉಪಕಾರವನ್ನೂ ಸ್ಮರಿಸುತ್ತೇನೆ.

ನನ್ನ ಬಾಲ್ಯಸ್ನೇಹಿತರಾದ ಶ್ರೀ. ಜೆ. ವ್ಹಿ. ಕುಲಕರ್ಣಿ ಎಂ. ಎ. ಇವರು ಈ ಪುಸ್ತಕವನ್ನು ಬರೆಯಲು ಬಹಳೇ ಸಹಾಯ ಮಾಡಿದ್ದಾರೆ. ಅನೇಕ ಕಡೆಗಳಲ್ಲಿ ಸೂಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಇದೆಲ್ಲ ಅವರು

ನನ್ನ ಬಗ್ಗೆ ತೋರಿದ ಸ್ನೇಹ ಹಾಗೂ ಅಂತಃಕರಣದ ಫಲವೇ ಆಗಿದೆ. ಇದರ ಕೃತಜ್ಞತೆಯನ್ನು ಮನ್ನಿಸುವದೆಂದರೆ ಔಪಚಾರಿಕವಾಗುವದೆಂದು ಬಗೆದು ಅವರಿಗೆ ಶುಭವನ್ನು ಕೋರುತ್ತೇನೆ.

ಮಿತ್ರರಾದ ಸೂರ್ಯನಾಥ, ಉಪೇಂದ್ರ, ಕಾಮತ, ವೆಂಕಟೇಶ, ಪ್ರಹ್ಲಾದ, ಭುಜಂಗ, ಶಾಮಸುಂದರ, ನರಹರಿ, ಮೋಲ್ಮನಿ, ರಾಮಸಿಂಗ ಎನ್. ಬಿ. (ಬೆಂಗಳೂರು) ಇವರೆಲ್ಲರು ಬಹುವಿಧದಿಂದ ಸಹಾಯ ಸಲ್ಲಿಸಿದ್ದಾರೆ. ಶ್ರೀ. ನಾರಾಯಣರಾವ ಹೊಸಕೇರಿಯವರು ತಮ್ಮ ವೈಯಕ್ತಿಕ ತೊಂದರೆಗಳನ್ನು ಬದಿಗಿರಿಸಿ ಕೇವಲ ನನ್ನ ಮೇಲಿನ ಅಭಿಮಾನಕ್ಕಾಗಿ ಸಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿದ್ದಾರೆ. ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ.

ನನ್ನ ಮೊದಲಿನ ಕೃತಿಯಂತೆಯೇ ಈ ಪುಸ್ತಕವನ್ನು ಕನ್ನಡದ ಸಹೃದಯಿಗಳು ಆದರದಿಂದ ಸ್ವಾಗತಿಸುವರೆಂದು ನಂಬಿದ್ದೇನೆ.

ಧಾರವಾಡ
೮-೭-೧೯೫೮

ತಮ್ಮವನಾದ
ಎನ್. ಕೆ. ಜೋಗಳೇಕರ

## ಎರಡನೇಯ ಆವೃತ್ತಿ ಕುರಿತು

"ಸ್ತ್ರೀ ಜ್ಯೋತಿಷ್ಯ" ಪುಸ್ತಕದ ಮೊದಲ ಮುದ್ರಣದ ಪ್ರತಿಗಳು ಮುಗಿದು ಅನೇಕ ವರ್ಷಗಳಾಗಿದ್ದು, ಅನೇಕ ಜನರಿಂದ ಹೆಚ್ಚಿನ ಪ್ರತಿಗಳಿಗೆ ಬೇಡಿಕೆ ಬಂದಿದ್ದರೂ ಸಹ ಈ ವರೆಗೆ ದ್ವಿತೀಯ ಮುದ್ರಣವನ್ನು ಕೈಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಇದೀಗ ಜನತೆಯ ಅಪೇಕ್ಷೆಯನ್ನು ಈಡೇರಿಸುವ ಸುಯೋಗ ಬಂದುದಕ್ಕಾಗಿ ಹರ್ಷಿಸುತ್ತೇನೆ. ಪ್ರಸ್ತುತ ಪುಸ್ತಕದ ಪರಭಾಗದಲ್ಲಿಯ ಮೊದಲು ೩೨ ಪುಟಗಳನ್ನು ಮುದ್ರಿಸಿಕೊಟ್ಟ ಶ್ರೀ ಎಮ್. ಎ. ಕಾಮತರಿಗೂ, ಉಳಿದ ಪತ್ರಭಾಗವನ್ನು ಮುದ್ರಿಸಿಕೊಟ್ಟ ಶ್ರೀ ಆದ್. ಬಿ. ವೈದ್ಯರಿಗೂ, ರಕ್ಷಾಪತ್ರನ್ನುವ ಮುದ್ರಿಸಿಕೊಟ್ಟ ಶ್ರೀ ಆರ್. ಬಿ. ಘಾಣೇಕರರಿಗೂ ನನ್ನ ನೆನಕೆಗಳು ಸಲ್ಲುತ್ತವೆ.

ಧಾರವಾಡ
೬-೬-೧೯೬೯

ತಮ್ಮವನಾದ
— ಎನ್. ಕೆ. ಜೋಗಳೇಕರ

# ತೃತೀಯಾವೃತ್ತಿಯನ್ನು ಕುರಿತು

'ಸ್ತ್ರೀ ಜೋತಿಷ್ಯ' ಪುಸ್ತಕದ ದ್ವಿತೀಯ ಮುದ್ರಣದ ಪ್ರತಿಗಳು ಮುಗಿದು ಆರು ವರ್ಷಗಳಾಗಿದ್ದು ಅನೇಕ ಜನರಿಂದ ಹೆಚ್ಚಿನ ಪ್ರತಿಗಳಿಗೆ ಬೇಡಿಕೆ ಬಂದಿದ್ದರು ಸಹ ಈ ವರೆಗೆ ಪುನಃ ಮುದ್ರಣ ಕೈಕೊಳ್ಳಲು ಸಾಧ್ಯ ವಿರಲಿಲ್ಲ. ಆದರೆ ಕೃಪಾ ಮುದ್ರಣಾಲಯದ ಒಡೆಯರಾದ ಶ್ರೀ ಎನ್. ಕೆ. ಪೊತ್ನಿಸರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆಸಲ್ಲುತ್ತದೆ.

೧-೧೧-೧೯೮೧

ಎಸ್. ಕೆ. ಜೋಗಳೇಕರ
ತೇಜಸ್ವಿನಗರ, ಧಾರವಾಡ.

# ಪರಿವಿಡಿ

॥ ಶ್ರೀ ॥

# ಸ್ತ್ರೀ ಜ್ಯೋತಿಷ್ಯ

## ವಿಷಯ ಪ್ರವೇಶ



ಫಲ—ಜ್ಯೋತಿಷ್ಯ ಶಾಸ್ತ್ರದಿಂದ ಸ್ತ್ರೀಯರ ಭವಿತವ್ಯದ ಬಗೆಗೆ ಬರೆದ ಗ್ರಂಥಗಳು ಕ್ವಚಿತ್ತಾಗಿವೆ. ಇಂಥ ಗ್ರಂಥಗಳಲ್ಲಿ ವಿವಾಹ, ಸಂತತಿ, ವಂಧ್ಯಾಯೋಗ ಮುಂತಾದ ಕೆಲವೇ ವಿಷಯಗಳ ಬಗೆಗೆ ವಿವೇಚಿಸಿದ್ದಾರೆ. ಆದರೆ ಸ್ತ್ರೀಯರ ಜೀವನದಲ್ಲಿರುವ ನಿತ್ಯ ವ್ಯವಹಾರ, ಬೌದ್ಧಿಕ ಸಾಮರ್ಥ್ಯ, ವಿದ್ಯಾರ್ಜನೆ, ವಿದೇಶಪ್ರಯಾಣ, ಧನಲಾಭ, ಆರ್ಥಿಕಸ್ವಾತಂತ್ರ್ಯ, ಸ್ವಾವಲಂಬನ, ರಾಜ್ಯಪಟುತ್ವ, ಸಮಾಜ ಧುರೀಣತ್ವ ಮುಂತಾದವುಗಳ ಉಲ್ಲೇಖವೇ ಕಂಡುಬರುವದಿಲ್ಲ.

ಇಂದಿನದು ಪ್ರಗತಿಪರ ಇಪ್ಪತ್ತನೆಯ ಶತಮಾನ. ಸಹಜೀವನದ ಕೂಗಿನೊಡನೆ ಸಮಾನ ಅಧಿಕಾರದ ವಾದವನ್ನೂ ಕೇಳುತ್ತಲಿದ್ದೇವೆ, ಇಂದಿನ ಸ್ತ್ರೀಯರು ಹಿಂದಿನವರಿಗಿಂತ ಬಲುಮಟ್ಟಿಗೆ ಸ್ವತಂತ್ರರೇ ಆಗಿದ್ದಾರೆ ಎಂದು ಹೇಳಬಹುದು. ಹಿಂದೂ ಕೋಡ್‌ದಲ್ಲಿ ಕೂಡ ಸ್ತ್ರೀವಾರಸಾ ಹಕ್ಕಿನ ಪ್ರತಿಪಾದನೆಯಿದೆ. "ನಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂಬ ಮಾತು ಕೇವಲ ಹಿಂದಿನಕಾಲದ ಉಕ್ತಿಯಾಗಿದೆ. ಇಂದಿನ ಸ್ತ್ರೀಯರು ಪುರುಷರಂತೆ, ಆಟಗಳಲ್ಲಿ, ನೌಕರಿಗಳಲ್ಲಿ, ರಾಜಕಾರಣದಲ್ಲಿ ಮುಂದುವರಿದಿದ್ದಾರೆ. ಅವರು ಎಲ್ಲ ಖಾತೆಗಳಲ್ಲಿಯೂ ಕೆಲಸಮಾಡಲು ಬಯಸುತ್ತಾರೆ. ಇಂದು ಇಂಜಿನಿಯರ್ ಡಾಕ್ಟರ್, ಗವರ್ನರ್, ರಾಯಭಾರಿ, ಹಾಗೂ ಮಂತ್ರಿ ಪೋಲೀಸ, ಮುಂತಾದ ಹುದ್ದೆಗಳನ್ನವರು ಪಡೆಯುತ್ತಿದ್ದಾರೆ. ವಸ್ತುಸ್ಥಿತಿ

ಹೀಗಿರುವಾಗ ಸ್ತ್ರೀಯರ ಕುಂಡಲಿಯನ್ನು ನೋಡುವವರು ಅವರ ಭವಿತವ್ಯ- ವನ್ನು ಕೇವಲ ಸಪ್ತಮಸ್ಥಾನ ಹಾಗೂ ಪಂಚಮಸ್ಥಾನದಿಂದ ಹೇಳುವದು ಅಸಮಂಜಸವಾಗುವದು. ಪುರುಷರ ಗ್ರಹದಂತೆ, ಸ್ತ್ರೀಯರ ಗ್ರಹಗಳು ಸ್ವತಂತ್ರವಾಗಿದ್ದು, ಪ್ರತ್ಯೇಕವಾಗಿ ಪರಿಣಾಮವನ್ನು ಕೊಡಬಲ್ಲವು ಸ್ತ್ರೀಯರ ಕುಂಡಲಿಗಳನ್ನು ಪ್ರತ್ಯೇಕವಾಗಿ ವಿವರವಾಗಿ ವಿಚಾರಿಸುವದೇ ಈ ಪುಸ್ತಕದ ಉದ್ದೇಶವಾಗಿದೆ.

ಈ ಪುಸ್ತಕವನ್ನು ಹನ್ನೆರಡು ಭಾಗಗಳಲ್ಲಿ ವಿಭಾಗಿಸಲಾಗಿದೆ. ಮೊದಲ ನೆಯ ಪ್ರಕರಣದಿಂದ ಹನ್ನೆರಡನೆಯ ಪ್ರಕರಣದ ವರೆಗೆ ದ್ವಾದಶ ಸ್ಥಾನ ಗಳಿಂದ ದ್ವಾದಶ ಭಾವಗಳನ್ನು ವಿವರವಾಗಿ ವಿಚಾರಿಸಲಾಗಿದೆ.

### ಪಾರಿಭಾಷಿಕ ಶಬ್ದಗಳು

ರಾಶಿಗಳು : — ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ, ಮೀನ ಹೀಗೆ ಹನ್ನೆರಡು ರಾಶಿಗಳಿವೆ. ( " ರಾಶಿಯೆಂದರೇನು " — ಎಂಬ ವಿಷಯಕ್ಕೆ ನಮ್ಮ " ವಧೂವರರ ಜ್ಯೋತಿಷ್ಯ " ಪುಸ್ತಕದ ಪು. ೧೨ ನೋಡಿರಿ ).

| | |
|---|---|
| ಪುರುಷ ರಾಶಿಗಳು : — | ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ. |
| ಸ್ತ್ರೀರಾಶಿಗಳು : — | ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ. |
| ಚರರಾಶಿಗಳು : — | ಮೇಷ, ಕರ್ಕ, ತುಲಾ, ಮಕರ. |
| ಸ್ಥಿರರಾಶಿಗಳು : — | ವೃಷಭ, ಸಿಂಹ, ವೃಶ್ಚಿಕ, ಕುಂಭ. |
| ದ್ವಿಸ್ವಭಾವರಾಶಿಗಳು : — | ಮಿಥುನ, ಕನ್ಯಾ, ಧನು, ಮೀನ. |
| ಅಗ್ನಿರಾಶಿಗಳು : — | ಮೇಷ, ಸಿಂಹ, ಧನು. |
| ಪೃಥ್ವಿರಾಶಿಗಳು : — | ವೃಷಭ, ಕನ್ಯಾ, ಮಕರ. |
| ವಾಯುರಾಶಿಗಳು : — | ಮಿಥುನ, ತುಲಾ, ಕುಂಭ. |
| ಜಲರಾಶಿಗಳು : — | ಕರ್ಕ, ವೃಶ್ಚಿಕ, ಮೀನ |

ರಾಶಿಗಳ ದಿಕ್ಕುಗಳು :— ಪೂರ್ವ—ಮೇಷ, ಸಿಂಹ, ಧನು
ಪಶ್ಚಿಮ—ಮಿಥುನ, ತುಲಾ, ಕುಂಭ
ಉತ್ತರ—ಕರ್ಕ, ವೃಶ್ಚಿಕ, ಮೀನ
ದಕ್ಷಿಣ—ವೃಷಭ, ಕನ್ಯಾ, ಮಕರ.

ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ, ಮೀನ ಈ ರಾಶಿಗಳಿಗೆ ಹಗಲಿನಲ್ಲಿ ಬಲವು.

ಮೇಷ, ವೃಷಭ, ಮಿಥುನ, ಕರ್ಕ, ಧನು, ಮಕರ ಈ ರಾಶಿಗಳಿಗೆ ರಾತ್ರಿಯಲ್ಲಿ ಬಲವು.

**ರಾಶಿ ಹಾಗೂ ರಾಶ್ಯಾಧಿಪರು** :— ಮೇಷ, ವೃಶ್ಚಿಕ ರಾಶಿಗಳಿಗೆ ಮಂಗಳ, ವೃಷಭ, ತುಲಾ ರಾಶಿಗಳಿಗೆ ಶುಕ್ರ ಮಿಥುನ, ಕನ್ಯಾ ರಾಶಿಗಳಿಗೆ ಬುಧ, ಧನು, ಮೀನ ರಾಶಿಗಳಿಗೆ ಗುರು, ಮಕರ, ಕುಂಭ ರಾಶಿಗಳಿಗೆ ಶನಿ, ಕರ್ಕ ರಾಶಿಗೆ ಚಂದ್ರ, ಸಿಂಹ ರಾಶಿಗೆ ರವಿ.

ಗ್ರಹಗಳು :— ರವಿ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು ಹೀಗೆ ಒಂಬತ್ತು ಗ್ರಹಗಳಿವೆ.

ಶುಭ ಗ್ರಹಗಳು :— ಬುಧ, ಗುರು, ಶುಕ್ರ ಹಾಗೂ ಬಲಿಷ್ಠ ಚಂದ್ರ

ಪಾಪಗ್ರಹಗಳು :— ರವಿ, ಮಂಗಳ, ಶನಿ, ರಾಹು, ಕೇತು, ಪಾಪಗ್ರಹ ಯುಕ್ತ ಬುಧ ಹಾಗೂ ಕ್ಷೀಣ ಚಂದ್ರ.

ಪುರುಷಗ್ರಹ :— ರವಿ, ಮಂಗಳ, ಗುರು.

ಸ್ತ್ರೀಗ್ರಹ :— ಚಂದ್ರ, ಶುಕ್ರ

ನಪುಂಸಕಗ್ರಹ :— ಬುಧ, ಶನಿ

## ಗ್ರಹಗಳ ಉಚ್ಚ ನೀಚತ್ವ ಹಾಗೂ ಮೂಲ ತ್ರಿಕೋಣ

೧) **ಸೂರ್ಯನಿಗೆ** ಸಿಂಹರಾಶಿಯ ಮೊದಲನೆಯ ೨೦ ಭಾಗ ಮೂಲ ತ್ರಿಕೋಣ, ಉಳಿದ ಹತ್ತು ಭಾಗ ಸ್ವಕ್ಷೇತ್ರ ಮೇಷರಾಶಿಯ ಮೊದಲನೆಯ ಹತ್ತು ಭಾಗ ಉಚ್ಚ, ಅದರಲ್ಲಿಯೂ ಹತ್ತನೆಯ ಅಂಶ ಪರಮೋಚ್ಚ ತುಲಾ ರಾಶಿಯು ನೀಚರಾಶಿ.

೨) ಚಂದ್ರನಿಗೆ ಕರ್ಕ ರಾಶಿಯು ಸ್ವಗೃಹ, ವೃಷಭ ರಾಶಿಯು ಉಚ್ಚ ರಾಶಿಯು. ಅದರಲ್ಲಿಯೂ ಮೂರು ಭಾಗ ಪರಮೋಚ್ಚ, ಉಳಿದ ೨೭ ಭಾಗ ಮೂಲ ತ್ರಿಕೋಣ. ವೃಶ್ಚಿಕವು ನೀಚರಾಶಿಯು. ಅದರಲ್ಲಿಯ ಮೊದಲನೆಯ ಮೂರು ಭಾಗ ಪರಮನೀಚ.

೩) ಮಂಗಳನಿಗೆ ಮೇಷ, ವೃಶ್ಚಿಕ ಸ್ವಕ್ಷೇತ್ರವು. ಮೇಷದಲ್ಲಿಯ ಮೊದಲನೆಯ ಹನ್ನೆರಡು ಭಾಗ ಮೂಲ ತ್ರಿಕೋಣ. ಕೊನೆಯ ಹದಿನೆಂಟು ಭಾಗ ಸ್ವಕ್ಷೇತ್ರ. ಮಕರ ರಾಶಿಯು ಉಚ್ಚರಾಶಿಯು. ಅದರಲ್ಲಿ ೨೮ ಭಾಗ ಪರಮೋಚ್ಚ. ಕರ್ಕರಾಶಿಯು ನೀಚರಾಶಿಯು. ಅದರಲ್ಲಿ ೨೮ ಭಾಗ ಪರಮನೀಚ.

೪) ಬುಧನಿಗೆ ಮಿಥುನ, ಕನ್ಯಾ ಸ್ವಕ್ಷೇತ್ರವು. ಕನ್ಯಾದಲ್ಲಿಯ ಮೊದಲನೆಯ ೧೫ ಭಾಗ ಉಚ್ಚ. ಉಳಿದ ೫ ಭಾಗ ಮೂಲತ್ರಿಕೋಣ ಕೊನೆಯ ೧೦ ಭಾಗ ಸ್ವಕ್ಷೇತ್ರ. ಮೀನರಾಶಿಯು ನೀಚರಾಶಿಯು.

೫) ಗುರುವಿಗೆ ಧನು ಮೀನ ಸ್ವಕ್ಷೇತ್ರವು. ಅದರಲ್ಲಿಯೂ ಧನುವಿನ ಮೊದಲನೆಯ ೧೦ ಭಾಗ ಮೂಲ ತ್ರಿಕೋಣ. ಕೊನೆಯ ೨೦ ಭಾಗ ಸ್ವಕ್ಷೇತ್ರ. ಕರ್ಕ ರಾಶಿಯು ಉಚ್ಚವು. ಅದರಲ್ಲಿಯೆ ಮೊದಲನೆಯ ೫ ಭಾಗ ಪರಮೋಚ್ಚ. ಮಕರ ರಾಶಿಯು ನೀಚ ರಾಶಿಯು ಅದರಲ್ಲಿಯ ಮೊದಲನೆಯ ೫ ಭಾಗ ಪರಮನೀಚ.

೬) ಶುಕ್ರನಿಗೆ ವೃಷಭ ತುಲಾ ಸ್ವಕ್ಷೇತ್ರವು. ಅದರಲ್ಲಿಯ ತುಲಾ ರಾಶಿಯ ಮೊದಲನೆಯ ೧೫ ಭಾಗ ಮೂಲ ತ್ರಿಕೋಣ ಅದರಲ್ಲಿಯೂ ಕೊನೆಯ ೧೫ ಭಾಗ ಸ್ವಕ್ಷೇತ್ರವು. ಮೀನರಾಶಿಯು ಉಚ್ಚ ರಾಶಿಯು ಅದರಲ್ಲಿಯ ಮೊದಲನೆಯ ೨೭ ಭಾಗ ಪರಮೋಚ್ಚವು. ಕನ್ಯಾರಾಶಿಯು ನೀಚರಾಶಿಯು. ಅದರಲ್ಲಿಯ ೨೭ ನೆಯ ಭಾಗ ಪರಮನೀಚ.

೭) ಶನಿಗೆ ಮಕರ ಕುಂಭ ಸ್ವಕ್ಷೇತ್ರವು. ಅದರಲ್ಲಿಯು ಕುಂಭ ರಾಶಿಯು ಮೊದಲನೆಯ ೨೦ ಭಾಗ ಮೂಲ ತ್ರಿಕೋಣವು. ಕೊನೆಯ ೧೦ ಭಾಗ ಸ್ವಕ್ಷೇತ್ರ, ತುಲಾ ರಾಶಿಯು ಉಚ್ಚರಾಶಿಯು. ಅದರಲ್ಲಿಯ ೨೦ ಭಾಗ ಪರಮೋಚ್ಚ. ಮೇಷರಾಶಿಯು ನೀಚ. ಅದರಲ್ಲಿಯ ೨೦ ಭಾಗ ಪರಮನೀಚ.

೮) ರಾಹುವಿಗೆ ಕನ್ಯಾ ಸ್ವಕ್ಷೇತ್ರ, ಮಿಥುನ ಉಚ್ಚರಾಶಿ. ಧನು ನೀಚರಾಶಿ.

೯) ಕೇತುವಿಗೆ ಮೀನ ಸ್ವಕ್ಷೇತ್ರ. ಧನು ಉಚ್ಚರಾಶಿ. ಮಿಥುನ ನೀಚರಾಶಿ. ಹೀಗೆ ಗ್ರಹಗಳ ಬಲಾಬಲವನ್ನು ನಿರ್ಧರಿಸಬಹುದು.

ಗ್ರಹಗಳ ದೃಷ್ಟಿ :— ರವಿ-ಮಂಗಳರು ಊರ್ಧ್ವ ದೃಷ್ಟಿಯವರು ಬುಧ-ಶುಕ್ರರು ತಿರ್ಯಕ್ ದೃಷ್ಟಿಯವರು. ಚಂದ್ರ-ಗುರು ಸಮದೃಷ್ಟಿಯವರು. ರಾಹು-ಶನಿ ಅಧೋದೃಷ್ಟಿಯವರು.

ರವಿ, ಚಂದ್ರ, ಬುಧ, ಶುಕ್ರ ಈ ಗ್ರಹಗಳು ಎಲ್ಲಿ ಇರುವರೋ ಆ ಸ್ಥಾನದಲ್ಲಿಯೂ ಮತ್ತೂ ಆ ಸ್ಥಾನದಿಂದ ೭ ನೆಯ ಸ್ಥಾನದ ಮೇಲೆಯೂ ಅವರ ಸಂಪೂರ್ಣ ದೃಷ್ಟಿಯಿರುತ್ತದೆ. ಮಂಗಳನು ತಾನಿದ್ದ ಸ್ಥಳದಿಂದ ೪, ೭, ೮ ನೆಯ ಸ್ಥಾನವನ್ನೂ ನೋಡುತ್ತಾನೆ. ಶನಿಯು ತಾನಿರುವ ಸ್ಥಾನದಿಂದ ೩, ೭, ೧೦ ನೆಯ ಸ್ಥಾನವನ್ನೂ ನೋಡುತ್ತಾನೆ. ಗುರು ತಾನಿರುವ ಸ್ಥಾನದಿಂದ ೫, ೭, ೯ ನೆಯ ಸ್ಥಾನವನ್ನೂ ನೋಡುತ್ತಾನೆ. ಪ್ರತಿಯೊಂದು ಗ್ರಹವೂ ೭ ನೆಯ ಸ್ಥಾನವನ್ನು ಸಂಪೂರ್ಣ ದೃಷ್ಟಿಯಿಂದ ನೋಡುತ್ತವೆ. ಗ್ರಹಗಳ ಬಲಾಬಲದಂತೆ ಅವುಗಳ ದೃಷ್ಟಿಯ ಬಲಾಬಲವು ಇರುತ್ತವೆ.

ಲಗ್ನ :— ಯಾವುದೇ ವ್ಯಕ್ತಿಯು ಜನಿಸಿದ ಕಾಲಕ್ಕೆ ಪೂರ್ವ ಕ್ಷಿತಿಜದ ಮೇಲೆ ಉದಿತವಾದ ರಾಶಿಗೆ ಲಗ್ನವೆನುತ್ತಾರೆ.

ಕೇಂದ್ರಸ್ಥಾನಗಳು :— ಕುಂಡಲಿಯಲ್ಲಿಯ ಲಗ್ನ, ಚತುರ್ಥ, ಸಪ್ತಮ, ದಶಮ ಇವು ಕೇಂದ್ರ ಸ್ಥಾನಗಳು.

ತ್ರಿಕೋಣಸ್ಥಾನಗಳು :— ಪಂಚಮ ಹಾಗೂ ನವಮಸ್ಥಾನಗಳು.

ಪಣಫರಸ್ಥಾನಗಳು :— ದ್ವಿತೀಯ, ಪಂಚಮ, ಅಷ್ಟಮ, ಏಕಾದಶ ಸ್ಥಾನಗಳು.

ಆಪೋಕ್ಲೀಮಸ್ಥಾನಗಳು :— ತೃತೀಯ, ಷಷ್ಠ, ನವಮ, ದ್ವಾದಶ ಸ್ಥಾನಗಳು.

ಉಪಚಯಸ್ಥಾನಗಳು :— ತೃತೀಯ, ಷಷ್ಠ, ದಶಮ ಮತ್ತೂ ಏಕಾದಶ ಸ್ಥಾನಗಳು.

ಆಯುಷ್ಯಸ್ಥಾನ :— ಅಷ್ಟಮ, ತೃತೀಯ ಸ್ಥಾನಗಳು.

ಮಾರಕಸ್ಥಾನ :— ದ್ವಿತೀಯ, ಸಪ್ತಮ ಸ್ಥಾನಗಳು.

ಯುತಿ :— ಎರಡು ಗ್ರಹಗಳ ಅಂತರ '0' ಅಂಶದಲ್ಲಿದ್ದರೆ ಯುತಿ ಎನ್ನುತ್ತಾರೆ.

೧) ಎರಡು ಶುಭಗ್ರಹಗಳ ಯುತಿ ಶುಭ ಪರಿಣಾಮಮವನ್ನು ಉಂಟು ಮಾಡುತ್ತದೆ.

೨) ಒಂದು ಶುಭ ಇನ್ನೊಂದು ಅಶುಭವಾಗಿದ್ದರೆ ಆ ಯುತಿ ಅಶುಭ ಪರಿಣಾಮವನ್ನುಂಟುಮಾಡುತ್ತದೆ.

೩) ಎರಡೂ ಅಶುಭ ಗ್ರಹಗಳ ಯುತಿ ಹೆಚ್ಚು ಅಶುಭ ಫಲವನ್ನು ಕೊಡುತ್ತದೆ,

ಗುರು–ಚಂದ್ರ, ಶುಕ್ರ–ಚಂದ್ರ, ಬುಧ–ಶುಕ್ರ, ಗುರು–ಮಂಗಳ, ರವಿ–ಮಂಗಳ. ಶುಭ ಪರಿಣಾಮ.

ಶನಿ–ಮಂಗಳ, ರವಿ–ಶನಿ, ಚಂದ್ರ–ಶನಿ, ಚಂದ್ರ–ರಾಹು, ರವಿ–ಕೇತು. ಅಶುಭ ಪರಿಣಾಮ.

ತ್ರಿಕೋಣ ಅಥವಾ ನವಪಂಚಮ :— ಒಂದು ಗ್ರಹದಿಂದ ಇನ್ನೊಂದು ಗ್ರಹ ಪಂಚಮ ಹಾಗೂ ನವಮ ಇದ್ದರೆ, ಅಥವಾ ಎರಡು ಗ್ರಹಗಳ ಅಂತರ ೧೨೦ ಅಂಶ ಇದ್ದರೆ ನವಪಂಚಮ ಯೋಗವೆನ್ನುತ್ತಾರೆ.

ಸಮಸಪ್ತಕ :— ಎರಡು ಗ್ರಹಗಳು ಎದುರುಬದುರಾಗಿದ್ದರೆ, ಅಥವಾ ಎರಡು ಗ್ರಹಗಳ ಅಂತರ ೧೮೦ ಅಂಶ ಇದ್ದರೆ ಸಮಸಪ್ತಕ ಯೋಗವೆನ್ನುತ್ತಾರೆ. ಇದು ಶುಭಗ್ರಹಗಳಿಗೆ ಶುಭದಾಯಕವೂ ಪಾಪಗ್ರಹಗಳಿಗೆ ಅಶುಭದಾಯಕವೂ ಇರುತ್ತದೆ.

ಷಡಾಷ್ಟಕ :— ಒಂದು ಗ್ರಹದಿಂದ ಇನ್ನೊಂದು ಗ್ರಹ ಷಷ್ಠ ಹಾಗೂ ಅಷ್ಟಮ ಇದ್ದರೆ ಅಥವಾ ಎರಡು ಗ್ರಹಗಳ ಅಂತರ ೧೫೦ ಅಂಶ ಇದ್ದರೆ ಷಡಾಷ್ಟಕ ಯೋಗವೆಂದೆನ್ನುತ್ತಾರೆ. ಇದು ಪಾಪಗ್ರಹಗಳಿಗೆ ಅಶುಭದಾಯಕವು.

ಕೇಂದ್ರಯೋಗ :— ಎರಡು ಗ್ರಹಗಳು ಕೇಂದ್ರದಲ್ಲಿದ್ದರೆ ಅಥವಾ ಎರಡು ಗ್ರಹಗಳ ಅಂತರ ೯೦ ಅಂಶವಿದ್ದರೆ ಕೇಂದ್ರಯೋಗವೆನ್ನುತ್ತಾರೆ.

**ದ್ವಿದ್ವಾದಶ** :— ಎರಡು ಗ್ರಹಗಳು ದ್ವಿತೀಯ ದ್ವಾದಶದಲ್ಲಿದ್ದರೆ ಅಥವಾ ಎರಡು ಗ್ರಹಗಳ ಅಂತರ ೩೦ ಅಂಶವಿದ್ದರೆ ದ್ವಿದ್ವಾದಶಯೋಗ ವೆನ್ನುತ್ತಾರೆ.

**ತ್ರಿರೇಕಾದಶ** :— ಎರಡು ಗ್ರಹಗಳು ತೃತೀಯ – ಏಕಾದಶದಲ್ಲಿದ್ದರೆ ಅಥವಾ ಎರಡು ಗ್ರಹಗಳ ಅಂತರ ೬೦ ಅಂಶವಲ್ಲಿದ್ದರೆ ತ್ರಿರೇಕಾದಶಯೋಗ ವೆನ್ನುತ್ತಾರೆ.

**ಸ್ಥಾನಗಳು** :— ೧) ತನು ೨) ಧನ ೩) ಸಹಜ (ಪರಾಕ್ರಮ) ೪) ಸುಖ ೫) ಸುತ ೬) ರಿಪು ೭) ಜಾಯಾ ಪತಿ ೮) ಮೃತ್ಯು ೯) ಧರ್ಮ ೧೦) ಕರ್ಮ ೧೧) ಆಯ ೧೨) ವ್ಯಯ–ಹೀಗೆ ಹನ್ನೆರಡು ಸ್ಥಾನಗಳಿವೆ.

| | | | |
|---|---|---|---|
| ವ್ಯಯ | ತನು | ಧನ | ಸಹಜ |
| ಲಾಭ | | | ಸುಖ |
| ಕರ್ಮ | | | ಸುತ |
| ಧರ್ಮ | ಮೃತ್ಯು | ಜಾಯಾ | ರಿಪು |

**ಅನುದಿತ ಹಾಗೂ ಉದಿತ :—**

**ಅನುದಿತ** :— ಅರ್ಧ ತನು ಸ್ಥಾನದಿಂದ ಅರ್ಧ ಜಾಯಾ ಸ್ಥಾನದ ಭಾಗಕ್ಕೆ ಅನುದಿತ ಗೋಲಾರ್ಧವೆನ್ನುವರು.

**ಉದಿತ** :— ಅರ್ಧ ಜಾಯಾ ಸ್ಥಾನದಿಂದ ಅರ್ಧ ತನು ಸ್ಥಾನದ ವರೆಗಿನ ಭಾಗಕ್ಕೆ ಉದಿತ ಗೋಲಾರ್ಧವೆನ್ನುವರು.

ಮೇಲೆ ತೋರಿಸಿದ ಹನ್ನೆರಡು ಸ್ಥಾನಗಳನ್ನು ಪ್ರತ್ಯೇಕವಾಗಿ ಇನ್ನು ಮುಂದೆ ಚರ್ಚಿಸಲಾಗುವುದು.

# ೧

# ತನುಸ್ಥಾನ

ಜನ್ಮ-ಲಗ್ನ ಅಥವಾ ಕುಂಡಲಿಯಲ್ಲಿಯ ತನುಸ್ಥಾನದಿಂದ ಸ್ತ್ರೀ, ಪುರುಷರ ಶರೀರ, ಪ್ರಕೃತಿ, ಸ್ವಭಾವ, ಶೀಲ, ಮನಸ್ಸು, ದೈಹಿಕ ಸೌಖ್ಯ, ಸೌಂದರ್ಯ ಬಣ್ಣ ರೋಗಬಾಧೆ ಮುಂತಾದ ಸಂಗತಿಗಳನ್ನು ನೋಡಬಹುದು. ಈ ವಿಷಯಗಳನ್ನು ಹೇಗೆ ಸ್ತ್ರೀಯರಿಗೆ ಅನ್ವಯಿಸಿ ನೋಡಬೇಕೆಂಬುದನ್ನು ಇಲ್ಲಿ ವಿಚಾರಿಸುವಾ.

## ಸ್ತ್ರೀಯ ಸ್ವಭಾವ

ಹನ್ನೆರಡು ರಾಶಿಗಳಲ್ಲಿ ೧, ೩, ೫, ೭, ೯, ೧೧ (ಮೇಷ, ಮಿಥುನ ಸಿಂಹ, ತುಲಾ, ಧನು,) ಇವು ಪುರುಷ-ರಾಶಿಗಳಾಗಿವೆ. ಮತ್ತು ೨, ೪, ೮, ೧೦, ೧೨ (ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ) ಈ ರಾಶಿಗಳು ಸ್ತ್ರೀ-ರಾಶಿಗಳಾಗಿವೆ. ಪುರುಷ ರಾಶಿಗಳು ಧನ ವಿದ್ಯುತ್ತಿನಂತೆ ಸ್ತ್ರೀ-ರಾಶಿಗಳು ಋಣ ವಿದ್ಯುತ್ ಇದ್ದಂತೆ.

ಯಾವ ಸ್ತ್ರೀಯ ಜನ್ಮ ಸ್ತ್ರೀರಾಶಿಯಲ್ಲಿದ್ದು ಅವಳ ಜಾತಕ (ಕುಂಡಲಿ) ದಲ್ಲಿಯ ಲಗ್ನ ಹಾಗೂ ಲಗ್ನಾಧೀಶ ಸ್ತ್ರೀ ರಾಶಿಯಲ್ಲಿ ಇರುವದೊ ಅಂಥ ಸ್ತ್ರೀಯು ನೈಸರ್ಗಿಕವಾಗಿ ಸೌಂದರ್ಯ, ವಿನಯ, ಲಜ್ಜೆಯಿಂದ ಕೂಡಿದವಳಾಗಿರುತ್ತಾಳೆ. ಕೋಮಲ ಹೃದಯ, ಹಾಗೂ ಒಳ್ಳೆಯ ಸ್ವಭಾವದವಳಾಗಿರುತ್ತಾಳೆ. ಇಂತಹ ಮಹಿಳೆಯು ಚಿಕ್ಕಂದಿನಲ್ಲಿ ತಂದೆ-ತಾಯಿಗಳಿಗೂ, ಯೌವ್ವನದಲ್ಲಿ ಪತಿಗೂ, ಮುಪ್ಪಿನಕಾಲದಲ್ಲಿ ತಮ್ಮ ಪರಿವಾರಕ್ಕೂ ಸುಖವನ್ನು ಕೊಡಬಲ್ಲಳು.

ಜನ್ಮ ಲಗ್ನವು ಪುರುಷರಾಶಿಯಲ್ಲಿದ್ದು (ವಿಷಮ ರಾಶಿ) ಲಗ್ನೇಶನು ಪುರುಷರಾಶಿಯಲ್ಲಿಯೂ ಮತ್ತು ಜನ್ಮರಾಶಿಯು ಪುರುಷರಾಶಿಯಾಗಿರುವ ಸ್ತ್ರೀಯರ ಸ್ವಭಾವವು ಪುರುಷರಂತೆ ಇರುತ್ತದೆ. ಅರ್ಥಾತ್ ನಡೆನುಡಿಯಲ್ಲಿ ಧಿಟ್ಟತನ ಕಠೋರ ಹೃದಯಗಳಿದ್ದು, ಯಾರ ಅಜ್ಞೆಗೂ ಒಳಗಾಗಿರುವದಿಲ್ಲ.

ಇಂತಹ ಸ್ತ್ರೀಯ ಪತಿಯ ಕುಂಡಲಿಯಲ್ಲಿ ಲಗ್ನದಲ್ಲಿ ಮಂಗಳ, ರವಿ, ಗುರು, ಶನಿ ಇವರು ಬಲಿಷ್ಠರಾಗಿದ್ದರೆ ಮಾತ್ರ ಬುದ್ಧಿಯ, ವಿದ್ಯೆಯ ಧನದ ಅಥವಾ ಅಧಿಕಾರದ ವರ್ಚಸ್ಸಿನೊಳಗಾಗಿ ಅವರು ತಮ್ಮ ಪತಿಯ ಆಜ್ಞೆ-ಗೊಳಗಾಗಿರುತ್ತಾರೆ.

ಜನ್ಮ ಲಗ್ನವು ಪುರುಷರಾಶಿಯಲ್ಲಿದ್ದು ಲಗ್ನೇಶ ಮತ್ತು ಚಂದ್ರರ ಪುರುಷರಾಶಿಯಲ್ಲಿದ್ದರೆ-ಇಂಥ ಸ್ತ್ರೀಯರು ವಿವಾಹವನ್ನು ಮಾಡಿಕೊಳ್ಳದೇ ಇರುವದೇ ವಿಹಿತ. ಅವರ ಸಂಸಾರಿಕ ಜೀವನ ಸುಗಮವಾಗಿ ಸಾಗುವದಿಲ್ಲ. ಈ ಸ್ತ್ರೀಯರಲ್ಲಿ ಪ್ರೇಮ, ಸಹನಶೀಲತೆ, ಆಜ್ಞಾಪಾಲನೆ, ವಿಶಾಲಹೃದಯ ಗಳಿಲ್ಲದಿರುವದರಿಂದ ಪತಿಯೊಡನೆ ಸಾಮರಸ್ಯದಿಂದ ನಡೆದುಕೊಳ್ಳಲಾರರು. ಇಂಥ ಸ್ತ್ರೀಯರು ವಿಷಯ ತೃಪ್ತಿ ಬಯಸುತ್ತಾರೆ. ಸಂತತಿಯ ಅಪೇಕ್ಷೆ ಕಡಿಮೆಯಾಗಿದ್ದು ಹಿರಿಯರಿಗೂ ಪತಿಗೂ ವಿಧೇಯರಾಗಿವದಿಲ್ಲ. ಇವರು ಮಕ್ಕಳೊಂದಿಗೆ ಕೂಡ ಹೊಂದಿಕೊಂಡು ನಡೆಯದೇ ಭಿನ್ನಾಭಿಪ್ರಾಯದಿಂದ ಬೇರೆ ಬೇರೆಯಾಗಿರುವದೂ ಕಂಡುಬರುತ್ತದೆ. ಆದ್ದರಿಂದ ಇಂಥ ಯೋಗ ವಿದ್ದ ಸ್ತ್ರೀಯರು ಪ್ರಾಧ್ಯಾಪಕರು, ಸುಧಾರಕರು, ನರ್ಸ, ಡಾಕ್ಟರ, ಪೋಲೀಸ, ಕ್ಲಾರ್ಕ ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಈ ಜನರು ಸ್ವತಂತ್ರವೃತ್ತಿ ಮೆಚ್ಚುತ್ತಾರೆ. ಇಂತಹರು ಚುನಾವಣೆ ಮುಂತಾದವು ಗಳಲ್ಲಿ ಸ್ಪರ್ಧಿಸಿ ಆರಿಸಿ ಬಂದು ಅಧ್ಯಕ್ಷ, ರಾಯಭಾರಿ, ಮಂತ್ರಿ ಮುಂತಾದ ಗೌರವ ಹುದ್ದೆಗಳನ್ನೂ ದೊರಕಿಸಬಲ್ಲರು. ಕೆಲವರು ಆಜನ್ಮ ಕುಮಾರಿ ಯಾಗಿಯೇ ಉಳಿಯುತ್ತಾರೆ. ಕೆಲವರು ವಿವಾಹ ವಿಚ್ಛೇದನಕ್ಕೂ ಒಲಿಯು ತ್ತಾರೆ. ಇಂಥ ಸ್ತ್ರೀಯರ ಸೌಂದರ್ಯ ೩೦-೩೩ ವರುಷಗಳ ವರೆಗೆ ಇದ್ದು ಮುಂದೆ ಇಳಿಮುಖವಾಗುತ್ತದೆ.

ಸೌಂದರ್ಯ : — ಲಗ್ನದಲ್ಲಿ ಪೃಥ್ವಿರಾಶಿ ಇಲ್ಲವೆ ವಾಯುರಾಶಿ ಗಳಿದ್ದ ಸ್ತ್ರೀಯರಿಗೆ ಸೌಂದರ್ಯದ ದೃಷ್ಟಿಯಿಂದ ಒಳ್ಳೇಯದು. ಪೃಥ್ವಿ ರಾಶಿಯಲ್ಲಿ ಜನಿಸಿದ ಸ್ತ್ರೀಯರು ಗೌರವರ್ಣದವರೂ ರೂಪವತಿಯರೂ ಇರುತ್ತಾರೆ. ಕನ್ಯಾರಾಶಿಯ (ಕನ್ಯಾಲಗ್ನ) ಪೃಥ್ವಿರಾಶಿಯಲ್ಲಿ ಅತ್ಯುತ್ತಮ ವಾದದ್ದು. ಯಾಕೆಂದರೆ ಕನ್ಯಾರಾಶಿಯು ಸೃಷ್ಟಿದೇವತೆಯ ಪ್ರತ್ಯಕ್ಷ ಕನ್ಯೆಯೇ ಇರುತ್ತಾಳೆ. ಇಂಥ ಲಗ್ನದಲ್ಲಿ ಹಾಗೂ ಇಂಥ ರಾಶಿಯಲ್ಲಿ

ಜನಿಸಿದ ಸ್ತ್ರೀಯರು ರೂಪವತಿಯರೂ ಗುಣವತಿಯರೂ ಇರುತ್ತಾರೆ. ಇಂಥ ಸ್ತ್ರೀಯರಿಗೆ ೬೦ ೬೫ ವರುಷಗಳಾದರೂ ಅವರ ಕೇಶಗಳು ಬೆಳ್ಳಗಾಗುವದಿಲ್ಲ, ಮುಪ್ಪಿನ ಕಳೆ ಕಂಡುಬರುವದಿಲ್ಲ ಹಾಗೂ ಪ್ರಾಯ ಮೀರಿದರೂ ಯುವತಿಯರಂತೆಯೇ ಕಾಣುತ್ತಾರೆ. ವೃಷಭಲಗ್ನದ ಸ್ತ್ರೀಯರು ಕನ್ಯಾರಾಶಿಯ ಲಗ್ನದವರಕ್ಕಿಂತ ಅಧಿಕ ಗೌರವರ್ಣದವರೂ, ಕಾಂತಿಯುಕ್ತರೂ, ದುಂಡಾದ ಮುಖವುಳ್ಳವರೂ ಇರುತ್ತಾರೆ. ಇವರ ತುಟಿಗಳು ದಪ್ಪವಾಗಿರುತ್ತವೆ. ಇವರು ವಿಲಾಸಪ್ರಿಯರು. ಈ ಲಗ್ನದಲ್ಲಿ ಜನಿಸಿದ ಸ್ತ್ರೀಯರು ವಿಶೇಷವಾಗಿ ವೇಷ ಭೂಷಣಗಳಲ್ಲಿ ಆಸಕ್ತರಾಗಿ ಶೃಂಗಾರದಲ್ಲಿ ಕಾಲ ಕಳೆಯುತ್ತಾರೆ. ಕನ್ಯಾಲಗ್ನದಲ್ಲಿ ಜನಿಸಿದ ಸ್ತ್ರೀಯರು ನೈಸರ್ಗಿಕವಾಗಿಯೇ ರೂಪವತಿಯರಾಗಿರುತ್ತಾರೆ. ಎಂಥ ಬಡ ಮನೆತನದಲ್ಲಿ ಬೆಳೆದರೂ, ಬಾಳಿದರೂ ಇವರ ರೂಪ ಅಚ್ಚಳಿಯದೇ ಇರುತ್ತದೆ. ಹಾಗೂ ಪತಿಯೊಂದಿಗೆ ಸಾದಾ ಜೀವನವನ್ನು ಸಾಗಿಸಬಲ್ಲರು. ಆದರೆ ವೃಷಭಲಗ್ನದಲ್ಲಿ ಜನಿಸಿದ ಸ್ತ್ರೀಯರು ಬಡವನೊಂದಿಗೆ ಸಹಕರಿಸಲಾರರು. ಅವರಿಗೆ ವಿಶೇಷವಾಗಿ ವಸ್ತ್ರ-ಒಡವೆಗಳು, ಶೃಂಗಾರ-ವಿಲಾಸಗಳು ಬೇಕು.

ಮಕರಲಗ್ನದಲ್ಲಿ ಜನಿಸಿದ ಸ್ತ್ರೀಯರು ರೂಪದಲ್ಲಿ ಮಧ್ಯಮರಿರುತ್ತಾರೆ. ಆದರೆ ಅಚ್ಚುಕಟ್ಟಾಗಿರುತ್ತಾರೆ. ಉದ್ಯೋಗ ವ್ಯವಹಾರದಲ್ಲಿ ಸರಳರಿದ್ದು ಕರ್ತವ್ಯದಕ್ಷರಾಗಿರುತ್ತಾರೆ. ಇಂಥ ಸ್ತ್ರೀಯರ ಜನ್ಮ ಮಧ್ಯಮವಾಗಿರುತ್ತದೆ. ಇವರು ಯೋಗ್ಯ ಗೃಹಿಣಿಯರಾಗಿರುತ್ತಾರೆ.

ಬುದ್ಧಿ ಮತ್ತೆಯ ದೃಷ್ಟಿಯಿಂದ ವಿಚಾರಿಸಿದರೆ ಪೃಥ್ವಿರಾಶಿಯ ಸ್ತ್ರೀಯರಿಗಿಂತ ವಾಯುರಾಶಿಯ ಸ್ತ್ರೀಯರು ಹೆಚ್ಚು ಪ್ರಾವೀಣ್ಯತೆ ಪಡೆದಿರುತ್ತಾರೆ. ಪೃಥ್ವಿರಾಶಿಯ ಸ್ತ್ರೀಯರು ಅಲ್ಪಸಂತುಷ್ಟರಿದ್ದು ಯಾವಾಗಲೂ ಆನಂದದಿಂದ ಇರುತ್ತಾರೆ. ವಾಯು ರಾಶಿಗಳಾದ ಮಿಥುನ, ತುಲಾ, ಕುಂಭ ಇವುಗಳಲ್ಲಿ ಮಿಥುನ, ಕುಂಭ ಈ ಲಗ್ನದಲ್ಲಿ ಜನಿಸಿದ ಸ್ತ್ರೀಯರು ಬಹಳ ಬುದ್ಧಿವಂತರಿರುತ್ತಾರೆ. ಮತ್ತೂ ಮಿಥುನ ಲಗ್ನದಲ್ಲಿ ಜನಿಸಿದ ಸ್ತ್ರೀಯರನ್ನು ಬೇಗ ಗುರುತಿಸಬಹುದು. ಮಿಥುನ ಲಗ್ನದಲ್ಲಿ ಜನಿಸಿದ ಸ್ತ್ರೀಯರು ಮಧ್ಯಮ ವರ್ಣದವರಿದ್ದು ನೀರಿನಿಂದ ತುಂಬಿದ ಕಣ್ಣುಗಳುಳ್ಳವರಾಗಿರುತ್ತಾರೆ. ಇವರು ಸ್ವಭಾವದಲ್ಲಿ ಗಂಭೀರರು ಮಿತಭಾಷಿಗಳೂ ಇದ್ದು ಮುತ್ಸದ್ದಿಗಳ

ತ್ತಾರೆ. ಕುಂಭಲಗ್ನದಲ್ಲಿ ಜನಿಸಿದ ಸ್ತ್ರೀಯರು ಬುದ್ಧಿವಂತರಿದ್ದು ರಮಾರ್ಥದಂತೆ ಒಲವು ಉಳ್ಳವರಾಗಿರುತ್ತಾರೆ. ವಿಚಾರವಾದಿಗಳೂ ಪರೋಪ ರಗಳೂ ಆಗಿರುತ್ತಾರೆ. ಇವರು ನೈಸರ್ಗಿಕವಾಗಿ ರೂಪವತಿಯರಾಗಿದ್ದು ರೆಯುವರ ಮೇಲೆ ತಮ್ಮ ವರ್ಚಸ್ಸನ್ನು ಬೀರಬಲ್ಲವರಾಗಿರುತ್ತಾರೆ. ಈ ದಲ್ಲಿಯ ಸ್ತ್ರೀಯರ ವೈಶಿಷ್ಟ್ಯವೆಂದರೆ—ಸಾರ್ವಜನಿಕ ಕಾರ್ಯ ಹಾಗೂ ವ ಧರ್ಮ ಕಾರ್ಯದಲ್ಲಿ ಮುಂದವರಿದವರಿರುತ್ತಾರೆ ಅಲ್ಲದೆ ಈ ಲಗ್ನದ ೀಯರಿಗೆ ಸಂತಾನ ಕಡಿಮೆಯಿರುತ್ತದೆ.

ತುಲಾ ಲಗ್ನದಲ್ಲಿ ಜನಿಸಿದ ಸ್ತ್ರೀಯರು ಮಿಥುನ ಲಗ್ನದಲ್ಲಿ ಜನಿಸಿದ ೀಯರಿಗಿಂತ ರೂಪವತಿಯರಾಗಿತ್ತಾರೆ. ಆದರೆ ಮಿಥುನಲಗ್ನದ ೀಯರಷ್ಟು ಬುದ್ಧಿವಂತರಾಗಿರುವದಿಲ್ಲ. ಹಾಗೂ ಇವರು ಎತ್ತರವಾಗಿಯೂ ಗಾಗಿಯೂ ಇರುತ್ತಾರೆ. ಇವರು ಕಲಾವಂತರಿದ್ದು ನ್ಯಾಯಪ್ರಿಯರಿ ತ್ತಾರೆ ಮಿಥುನಲಗ್ನದ ಸ್ತ್ರೀಯರಿಗೆ ಬುದ್ಧಿವಂತಿಕೆಯ ಗರ್ವವಿರು ದೆ—ಆದರೆ ಇವರಿಗಿರುವದಿಲ್ಲ ಮಿಥುನಲಗ್ನದ ಸ್ತ್ರೀಯರಂತೆ ಇವರು ಸ್ವಪಟುಗಳೂ ಗಂಭೀರರೂ ಚೇಷ್ಟೆಗಾರರೂ ಇರುವದಿಲ್ಲ ಇವರು ಮಾದ ಹಾಗೂ ಅಪ್ತೇಷ್ಟರಲ್ಲಿ ಪ್ರೀತಿಗೆ ಪಾತ್ರರಾಗಿರುತ್ತಾರೆ. ವಿಲಾಸ ಗೂ ಶೃಂಗಾರದಲ್ಲಿ ಈ ಲಗ್ನದ ಸ್ತ್ರೀಯರು ಹೆಚ್ಚು ಆಸಕ್ತರಾಗಿರುತ್ತಾರೆ. ಲಗ್ನದ ಸ್ತ್ರೀಯರನ್ನು ಬೇಗನೆ ಗುರುತಿಸಬಹುದು. ತೆಳ್ಳಗಾದ ಟ್ಟಿದ ತುಟಿ, ಉದ್ದವಾದ ಮೂಗು ಅಗಲವಾದ ಕಣ್ಣುಗಳಿರುತ್ತವೆ.

ಅಗ್ನಿರಾಶಿಗಳಾದ ಮೇಷ, ಸಿಂಹ, ಧನು ಲಗ್ನದಲ್ಲಿ ಜನಿಸಿದ ಸ್ತ್ರೀಯರು ಷ ರೂಪವತಿಯರಾಗಿರುವದಿಲ್ಲ. ಮೇಷ ಲಗ್ನದಲ್ಲಿ ಜನಿಸಿದ ಸ್ತ್ರೀಯರು ಹದಿಂದ ಕುಳ್ಳರಾಗಿರುತ್ತಾರೆ. ಮೇಷ ಲಗ್ನದ ೧೫ ಅಂಶದ ಒಳಗೆ ದ್ದ ಸ್ತ್ರೀಯರಂತೂ ಬಹಳ ಕುಳ್ಳರೂ ಇರುತ್ತಾರೆ ಹದಿನೈದು ಅಂಶದ ಂದೆ ಇವರು ಸ್ತ್ರೀಯರು ಅಷ್ಟೊಂದು ಕುಳ್ಳರಾಗಿರುವದಿಲ್ಲ. ಈ ಲಗ್ನದ ೀಯರು ಉತ್ಸಾಹಿಗಳೂ ಬುದ್ಧಿವಂತರೂ ಇದ್ದು ಏಕಾಂತಪ್ರಿಯರಾಗಿರು ರೆ. ಯಾವ ಕೆಲಸಕ್ಕೂ ತಾವಾಗಿಯೇ ಮುಂದುವರಿಯುವ ಪ್ರವೃತ್ತಿ ರುವದಿಲ್ಲ. ಇವರು ತಮ್ಮ ಗುಣ ಮತ್ತು ಬುದ್ಧಿವಂತಿಕೆ ಪ್ರದರ್ಶನ ಡಲಾರರು. ಇವರು ಮಿತಭಾಷಿಗಳೂ ಲಜ್ಜಾವತಿಯರೂ ಇರುತ್ತಾರೆ.

ಸಿಂಹಲಗ್ನದಲ್ಲಿ ಜನಿಸಿದ ಸ್ತ್ರೀಯರ ಲಕ್ಷಣವನ್ನು ಈ ರೀತಿ ವಿವರಿಸಬಹುದು. ದುಂಡಾದ ಮುಖ, ಅಗಲವಾದ ಕಣ್ಣು, ವಿಶಾಲವಾದ ಹಣೆ, ಎತ್ತರವಾದ ಹುಬ್ಬು, ದಪ್ಪವಾದ ದೇಹ, ಮತ್ತು ವಿಷಮ ಪ್ರಮಾಣದ ಅಂಗರಚನೆ ಇದ್ದು-ಧಿಟ್ಟರೂ, ನಿರ್ದಾಕ್ಷಿಣ್ಯ ಸ್ವಭಾವಿಗಳೂ, ಸತತೋದ್ಯೋಗಿಗಳೂ, ಕರ್ತವ್ಯದಕ್ಷರೂ, ನಿರ್ವ್ಯಸನಿಗಳೂ ಆಗಿದ್ದು ಸಂಸಾರಿಕ ಜೀವನದಲ್ಲಿ ಅಸುಖಿಗಳಾಗಿರುತ್ತಾರೆ. ಹಾಗೂ ಇಂಥ ಸ್ತ್ರೀಯರ ವರ್ಚಸ್ಸು ಪತಿಯ ಮೇಲಿರುವದು ಕಂಡುಬರುತ್ತದೆ. ಧನುಲಗ್ನದ ಸ್ತ್ರೀಯರ ಲಕ್ಷಣವನ್ನು ಈ ರೀತಿ ವಿವರಿಸಬಹುದು. ಇವರು ಗರ್ವಿಷ್ಠರೂ, ಉದಾರಿಗಳೂ; ಅಹಂಭಾವಿಗಳೂ ಆಗಿರುತ್ತಾರೆ. ಧನು ರಾಶಿಯು ಪುರುಷರಾಶಿಯಾಗಿರುವದರಿಂದ ಇವರ ಸ್ವಭಾವವು ಪುರುಷರಂತೆ ಇರುತ್ತದೆ. ಈ ಲಗ್ನದ ಸ್ತ್ರೀಯರು ಪ್ರಕೃತಿಯಲ್ಲಿ ಉತ್ತಮರಿದ್ದು, ಮಿಲಿಟರಿ, ಪೋಲೀಸ್, ಸರ್ಕಸ್, ಇವುಗಳಲ್ಲಿ ಉತ್ತಮ ಕೆಲಸಮಾಡುವರಲ್ಲದೆ ಆಟಪಾಟ ಕ್ರೀಡಾರಂಗಗಳಲ್ಲಿಯೂ ಪ್ರಾವೀಣ್ಯತೆ ಪಡೆಯುತ್ತಾರೆ. ಇವರ ಶರೀರವು ಎತ್ತರವೂ ಪುಷ್ಟವೂ ಆಗಿರುತ್ತದೆ. ಈ ಲಗ್ನದ ಸ್ತ್ರೀಯರು ಮೋಟಾರ, ಸೈಕಲ್ ನಡೆಸುವದರಲ್ಲಿ, ಕುದುರೆ ಹತ್ತುವದು, ಈಸುವದರಲ್ಲಿ ಪ್ರಾವೀಣ್ಯತೆ ಪಡೆಯುವರಲ್ಲದೆ ಎಂತಹ ಪತಿಯೊಂದಾದರೂ ಹೊಂದಿಕೊಂಡು ಹೋಗಬಲ್ಲರು. ಆದರೆ ಇಂತಹರನ್ನು ಗುಲಾಮರಂತೆ ನಡೆಸಕೂಡದು. ಇವರು ಹಣದ ವಿಷಯದಲ್ಲಿ ಉದಾರಿಗಳಾಗಿರುತ್ತಾರೆ.

ಕರ್ಕ, ವೃಶ್ಚಿಕ, ಮೀನ ಮುಂತಾದ ಜಲರಾಶಿಯ ಲಗ್ನದಲ್ಲಿ ಜನಿಸಿದ ಸ್ತ್ರೀಯರು ಬಹಳ ಬಡಕರಾಗಿರುತ್ತಾರೆ. ಕರ್ಕ ಲಗ್ನದ ಸ್ತ್ರೀಯರು ತಕ್ಕಮಟ್ಟಿಗೆ ಎತ್ತರವಾಗಿರುತ್ತಾರೆ. ಕರ್ಕ ಲಗ್ನದ ೨೦ ಅಂಶದ ಮೇಲೆ ಇದ್ದ ಸ್ತ್ರೀಯರಂತೂ ಬಹಳ ಎತ್ತರವಾಗಿರುತ್ತಾರೆ. ಎಂಥ ಕಪ್ಪು-ಬಣ್ಣದ ದಂಪತಿಗಳಲ್ಲಿ ಜನಿಸಿದಾಗಲೂ ಕರ್ಕ-ಲಗ್ನದ ಸ್ತ್ರೀಯರು ಗೌರವರ್ಣದವರಾಗಿರುತ್ತಾರೆ. ಈ ಲಗ್ನದಲ್ಲಿ ಜನಿಸಿದವರು ಭಾವನಾಜೀವಿಗಳೂ ಆಗಿರುತ್ತಾರೆ. ಇವರ ಮನಸ್ಸು ಚಂಚಲವಾಗಿದ್ದು, ತಮ್ಮ ಅಭಿಪ್ರಾಯವನ್ನು ಮೇಲಿಂದ ಮೇಲೆ ಬದಲಿಸುತ್ತಾರೆ. ಇಲ್ಲವೆ ಒಳ್ಳೆಯದನ್ನಾಗಲಿ ಕೆಟ್ಟದನ್ನಾಗಲೀ ತೀವ್ರವಾಗಿ ಅನುಭವಿಸಿ ತಮ್ಮ ಸ್ಪಂದನವನ್ನು ಸೂಚಿಸುತ್ತಾರೆ.

ರ ದಂತಪಂಕ್ತಿಗಳು ಸಣ್ಣ ಹಾಗೂ ಸರಳವಾರುತ್ತವೆ. ಆದರೆ ಇದೇ ಕರ್ಕ ದಲ್ಲಿ ಶನಿ-ಕೇತು ಇವರ ಯುತಿ ಇದ್ದರೆ ದಂತಪಂಕ್ತಿಗಳು ವಕ್ರವಾಗಿರು ).

ವೃಶ್ಚಿಕಲಗ್ನದಲ್ಲಿ ಜನಿಸಿದ ಸ್ತ್ರೀಯರಲ್ಲಿ ಕಪ್ಪುಬಣ್ಣದವರು ಸಿಗುವದೇ ತ. ಇವರು ದಷ್ಟಪುಷ್ಟರಾಗಿದ್ದು, ಉದ್ದ ಹಾಗೂ ಚೌಕು ಮುಖ ವರಿದ್ದು, ಮುಖದಲ್ಲಿ ದರ್ಪ— ಭಯಾನಕ ಲಕ್ಷಣಗಳಿರುತ್ತವೆ. ಅವರು -ಅನೀತಿ, ಸತ್ಯ-ಅಸತ್ಯ, ಸದ್ಗುಣ-ದುರ್ಗುಣ ಇವುಗಳ ಮಿಶ್ರ ಸ್ವಭಾವ ರಿರುತ್ತಾರೆ. ಪ್ರಸಂಗಕ್ಕೆ ತಕ್ಕಂತೆ ಹೊಂದಿಕೊಳ್ಳುವವರು. ಆದರೆ ವಾದ ಮನಸ್ಸು ಮತ್ತು ದಿಟ್ಟತನದವರಿರುತ್ತಾರೆ.

ಕರ್ಕಲಗ್ನದವರು ಭಾವನಾಪ್ರಧಾನರಾಗಿದ್ದರೆ ವೃಶ್ಚಿಕ ಲಗ್ನದವರು ೀರರೂ ಹಾಗೂ ದೃಢಮನಸ್ಕರೂ ಇರುತ್ತಾರೆ. ಕರ್ಕಲಗ್ನದ ಸ್ತ್ರೀಯರು ೀರ ಮಾತುಗಳಿಂದ ಮುಳುಮುಳು ಅಳತೊಡಗುವರು ಆದರೆ ವೃಶ್ಚಿಕ ದ ಸ್ತ್ರೀಯರು ಅಪಮಾನ ಹಾಗೂ ಅವಾಚ್ಯ ಶಬ್ದಗಳನ್ನು ಸಹಿಸಬಲ್ಲರು. ೂ ಏನೂ ಆಗಿರದಂತೆ ಮುಖದಲ್ಲಿ ಗಾಂಭೀರ್ಯವನ್ನು ತರಬಲ್ಲವ ರುತ್ತಾರೆ.

ಮೀನರಾಶಿಯು ರಾಶಿಚಕ್ರದಲ್ಲಿ ಕೊನೆಯದು. ಈ ಲಗ್ನದಲ್ಲಿ ಜನಿಸಿದ ಯರು ಕುಳ್ಳರಿದ್ದು ಕೈಕಾಲಿನ ಬಟ್ಟುಗಳು ಗಿಡ್ಡ ಹಾಗೂ ದಪ್ಪವಾಗಿರ್ರು ೆ. ಇವರ ದಂತಪಂಕ್ತಿಗಳು ಸರಳ ಹಾಗೂ ಸುಂದರವಾಗಿರುತ್ತವೆ. ರು ಯಾವಾಗಲೂ ಹಸನ್ಮುಖಿಗಳಾಗಿರುತ್ತಾರೆ. ಇಂಥವರು ಚಿಕ್ಕ ಯಸ್ಸಿನಲ್ಲಿ ಸುಂದರರಾಗಿ ಕಂಡರೆ ತಾರುಣ್ಯದಲ್ಲಿ ಗಿಡ್ಡ ಹಾಗೂ ದಪ್ಪವಾಗಿರು ರೆ. ಇವರು ಯಾವುದೇ ಕಾರ್ಯದಲ್ಲಿ ಆಲಸಿಗಳಾಗಿರುತ್ತಾರೆ. ಈ ದ ಸ್ತ್ರೀಯರು ಸಮಾಧಾನ ಪ್ರವೃತ್ತಿಯುಳ್ಳವರು ಆದ್ದರಿಂದ ಪೆಟ್ಟನೆ ಸಾಹಸಕೆ ಾಕುವದಿಲ್ಲ. ಇದೇ ಈ ಲಗ್ನದವರ ವೈಶಿಷ್ಟ್ಯ.

## ದೈಹಿಕ ಲಕ್ಷಣಗಳು

ದೈಹಿಕ ಲಕ್ಷಣಗಳನ್ನು ವಿಚಾರಿಸುವಾಗ ಕೆಳಗಿನ ವಿಷಯವನ್ನು ಾನದಲ್ಲಿಡಬೇಕು ಒಬ್ಬ ಸ್ತ್ರೀಯು ಎತ್ತರ, ಮಧ್ಯಮ ಹಾಗೂ ಕುಳ್ಳ

ವಾಗಿದ್ದಾಳೆ ಎಂದನ್ನಬೇಕಾದರೆ ಆಯಾ ದೇಶ ಹಾಗೂ ಪ್ರಾಂತಗ ವೈಲಕ್ಷಣ್ಯವನ್ನು ಗಮನಿಸಬೇಬೇಕು. ಉದಾಹರಣೆಗಾಗಿ– ಪಂಜಾಬದಲ್ಲಿ ಸ್ತ್ರೀಯರು ಬಹಳ ಎತ್ತರವಾಗಿರುತ್ತಾರೆ ಆದ್ದರಿಂದ ದೈಹಿಕ ಲಕ್ಷಣವನ ಆಯಾ ಪ್ರಾಂತಗಳಿಗೆ ಅನುಗುಣವಾಗಿ ಹೇಳಬೇಕು. ರಾಶಿ ಚಕ್ರದಲ್ಲಿ ಮೇಷ ವೃಷಭ, ಮೀನ ಈ ರಾಶಿಯ ಸ್ತ್ರೀಯರು ಕುಬ್ಜರಾಗಿರುತ್ತಾರೆ; ಸಿಂಹ, ಕನ್ಯಾ ಧನು, ಕುಂಭ ಈ ರಾಶಿಯ ಸ್ತ್ರೀಯರು ಬಹಳ ಎತ್ತರವಾಗಿರುತ್ತಾರೆ. ಉಳಿ ರಾಶಿಯ ಸ್ತ್ರೀಯರು ಸರ್ವಸಾಧಾರಣವಾಗಿರುತ್ತಾರೆ ಪ್ರತಿಯೊಂದು ರಾ ಯಲ್ಲಿ ಎರಡು ಭಾಗಗಳನ್ನು ಮಾಡಬೇಕು. ಒಂದು ಅಂಶದಿಂದ ೧೫ ಅಂಶಗ ವರೆಗೆ ಒಂದು ಭಾಗ, ೧೬ ರಿಂದ ೩೦ ರ ವರೆಗೆ ಎರಡನೆಯ ಭಾಗ. ಉದಾ ಕುಂಭರಾಶಿಯ ಮೊದಲನೆಯ ೧೫ ಅಂಶದ ಒಳಗೆ ಇದ್ದರೆ ಎತ್ತರ ಪ್ರಮಾ ಬಹಳವಿರುತ್ತದೆ. ಆದರೆ ಅದೇ ಕುಂಭ ರಾಶಿಯ ಎರಡನೆಯ ಭಾಗದಲ್ಲಿದ್ದ ಎತ್ತರ ಪ್ರಮಾಣ ಕಡಿಮೆ ಇರುತ್ತದೆ. ಹೀಗೆ ಆಯಾ ಎತ್ತರ ಪ್ರಮಾ ಕಡಿಮೆ ಇರುತ್ತದೆ. ಹೀಗೆ ಆಯಾ ರಾಶಿಯ ಅಂಶಗಳನ್ನು ಸಹಿ ನೋಡಬೇಕು.

ಇನ್ನು ಗ್ರಹಗಳ ಸ್ಥಿತಿಯನ್ನು ವಿಚಾರಿಸಲಾಗಿ ರವಿ–ಮಂಗಳ ಹಾಗು ಪುರುಷರಾಶಿಯಲ್ಲಿಯ ರಾಹು ಎತ್ತರ ಪ್ರಮಾಣ ಬಹಳ ತೋರುತ್ತವ ಸ್ತ್ರೀರಾಶಿಯ ರಾಹು. ಯಾವುದೇ ರಾಶಿಯ ಕೇತು, ರವಿ ವಿರಹಿತ ಬುಧನು ಕ್ಷೀಣಚಂದ್ರನು, ಮೀನ, ಮೇಷ, ವೃಷಭ ರಾಶಿಯ ಶನಿಯೂ ಕುಳ್ಳತನವನ್ನು ತೋರಿಸುತ್ತವೆ. ಆದರೆ ಲಗ್ನದಲ್ಲಿದ್ದ ರಾಶಿಯು ವಿಶೇಷ ಫಲವನ ಕೊಡುತ್ತದೆಂಬುದನ್ನು ಲಕ್ಷದಲ್ಲಿಡಬೇಕು. ಹಾಗೂ ಅಂಶದ ಕಡೆಗು ಗಮನಕೊಡಬೇಕು ಉದಾ- ಕುಂಭರಾಶಿಯ ೨೦ ಅಂಶದಲ್ಲಿ ಒಬ್ಬ ಸ್ತ್ರೀಯ ಜನನವಾಗಿದೆಯೆಂದು ತಿಳಿದರೆ ಮೀನರಾಶಿಯ ೨೦ ಅಂಶಗಳ ಕೆಲ ಗುಣಧರ್ಮಗಳು ಬರುತ್ತವೆ. ಇಲ್ಲಿ ಕುಂಭರಾಶಿಯಂತೆ ಎತ್ತ ಪ್ರಮಾಣವಿರದೆ ಮೀನರಾಶಿಯಂತೆ ಕುಳ್ಳ ಪ್ರಮಾಣವಿರುತ್ತದೆ ಗುರ ಶುಕ್ರ ಗ್ರಹಗಳು ಮಧ್ಯಮ ಎತ್ತರವನ್ನು ಸೂಚಿಸುತ್ತವೆ. ಆದರೆ ಇವ ಗ್ರಹಗಳು ರವಿ ಮಂಗಳರೊಂದಿಗಿದ್ದರೆ ಎತ್ತರ ಪ್ರಮಾಣದ ಆಧಿಕ್ಯವನ್ನೂ ಸೂಚಿಸುತ್ತವೆ. ಆದರೆ ಅದೇ ಗುರು ಶುಕ್ರರು ಶನಿ, ಬುಧ, ಸ್ತ್ರೀರಾಶಿಯ

ರಾಹು, ಕ್ಷೀಣಚಂದ್ರ ಇವರೊಂದಾಗಿದ್ದರೆ ಕುಳ್ಳತನವನ್ನು ಸೂಚಿಸುತ್ತವೆ. ಉದಾ— ಸಿಂಹರಾಶಿಯು ಲಗ್ನದಲ್ಲಿ ರವಿ-ಶನಿಗಳು ಇದ್ದಾರೆಂದು ತಿಳಿಯೋಣ ಇಲ್ಲಿ ಸಿಂಹರಾಶಿಯ ರವಿಯ ವಿಶೇಷ ಪರಿಣಾಮವನ್ನು ಸೂಚಿಸುತ್ತದೆ. ಆದುದರಿಂದ ಎತ್ತರ ಪ್ರಮಾಣ ಬಹಳ ವಿರುದ್ಧವಿದೆ. ಆದರೆ ಅದೇ ತುಲಾ ಲಗ್ನದಲ್ಲಿದ್ದರೆ ಶನಿಯಂತೆ ವಿಶೇಷವಾಗಿ ಕುಳ್ಳತನ ಪ್ರಮಾಣವನ್ನು ಕೊಡುತ್ತದೆ. ಆದ್ದರಿಂದ ಯಾವುದೇ ಸ್ತ್ರೀಯರ ಎತ್ತರ ಕುಳ್ಳತನಗಳ ಬಗ್ಗೆ ಹೇಳಬೇಕಾದಾಗ ಲಗ್ನ, ರಾಶಿ, ಅಂಶ, ಗ್ರಹ ಹಾಗೂ ಆಯಾ ಪ್ರದೇಶಗಳನ್ನು ಸೂಕ್ಷ್ಮವಾಗಿ ನೋಡಿ ವಿಚಾರಿಸಬೇಕು.

## ದೇಹದ ವರ್ಣ

ಸ್ತ್ರೀಯರ ಬಣ್ಣದ ಬಗೆಗೆ ವಿಚಾರಿಸುವಾಗ್ಗೆ ಆಯಾ ಪ್ರಾಂತಗಳ ಸ್ಥಿತಿಗತಿ, ಜಾತಿ ಪಂಥಗಳ ವೈಶಿಷ್ಟ್ಯ ಮತ್ತು ಹವಾಮಾನಗಳನ್ನು ಲಕ್ಷಿಸಿ ಹೇಳಬೇಕಾಗುತ್ತದೆ. ಕರ್ನಾಟಕ, ಆಂಧ್ರ, ಮದ್ರಾಸದವರು ಕಪ್ಪುವರ್ಣದವರು, ಪಂಜಾಬ ಗುಜರಾತದವರು ಗೋದಿಯ ವರ್ಣದವರು, ಮಹಾರಾಷ್ಟ್ರದವರು ಕೆಂಪುಬಣ್ಣದವರು ಯುರೋಪದವರು ಬಿಳಿಯ ಬಣ್ಣದವರು ಇರುತ್ತಾರೆ. ಇನ್ನು ಸ್ತ್ರೀಯರ ಬಣ್ಣವನ್ನು ಗ್ರಹಗಳಿಂದ ಹೇಗೆ ತಿಳಿಯಬಹುದೆಂಬುದನ್ನು ವಿಚಾರಿಸುವಾ.

ಚಂದ್ರ, ಶುಕ್ರ, ಗುರು ಇವರು ಗೌರವರ್ಣವನ್ನು ಕೊಡತಕ್ಕ ಗ್ರಹಗಳು. ಇವರಲ್ಲಿ ಯಾರೊಬ್ಬರು ಲಗ್ನದಲ್ಲಿದ್ದರೆಂದರೆ ಆ ಸ್ತ್ರೀಯರು ಗೌರವರ್ಣದವರಾಗಿರುತ್ತಾರೆ. ಈ ಮೂರು ಗ್ರಹಗಳು ಕೂಡಿ ಲಗ್ನದಲ್ಲಿದ್ದರೆ ನಿಶ್ಚಿತವಾಗಿ ಗೌರವರ್ಣದವರಾಗಿರುತ್ತಾರೆ. ಈ ಗ್ರಹಗಳೊಂದಿಗೆ ರವಿ, ಮಂಗಳರು ಇದ್ದರೂ ಗೌರವರ್ಣ ಕೆಲಮಟ್ಟಿಗಿರುತ್ತದೆ. ಆದರೆ ಈ ಯಾವುದೇ ಗ್ರಹಗಳೊಂದಿಗೆ ಶನಿ, ಬುಧ, ರಾಹು, ಕೇತು, ಕ್ಷೀಣ-ಚಂದ್ರ ಇದ್ದರೆ ಗೌರವರ್ಣವಿರಲಾರದು. ಲಗ್ನದಲ್ಲಿ ಒಬ್ಬನೇ ಕೇತು ಇದ್ದುದಾದರೆ ಸೌಂದರ್ಯಕ್ಕೆ ಹಾನಿಯಾಗುವದು. ರವಿ ಮಂಗಳರು ಮಧ್ಯಮ ಗೌರವರ್ಣದವರು. ಸ್ವಲ್ಪ ಕೆಂಪು ಛಾಯೆಯನ್ನು ಕೊಡಬಹುದು. ರವಿ ಮಂಗಳರು ಲಗ್ನದಲ್ಲಿದ್ದ ಸ್ತ್ರೀಯರು ಗೋದಿಬಣ್ಣದವರಿರುತ್ತಾರೆ. ಆದರೆ ಇವರೊಂದಿಗೆ

ಶನಿ, ಬುಧ, ಕೇತು, ರಾಹು ಗ್ರಹಗಳಿದ್ದರೆ ಮಾತ್ರ ಕಪ್ಪು ಬಣ್ಣದವರಾಗುತ್ತಾರೆ. ಚಂದ್ರ, ಶುಕ್ರ, ಗುರು ಈ ಗ್ರಹಗಳಲ್ಲಿ ಶುಕ್ರ ಚಂದ್ರರು ಗುರುವಿನಗಿಂತ ಅಧಿಕ ಗೌರವರ್ಣವನ್ನು ಸೂಚಿಸುತ್ತಾರೆ. ಚಂದ್ರ ಶುಕ್ರರನ್ನು ಹೋಲಿಸಲು ಶುಕ್ರನು ಅಧಿಕ ಗೌರವವರ್ಣ ಸೂಚಿಸುತ್ತಾನೆ. ಪ್ರಪಂಚದಲ್ಲಿ ಮೋಹ. ಸೌಂದರ್ಯ, ಪ್ರೇಮ ಪ್ರಣಯ, ವಿಷಯವಾಸನೆ ಮುಂತಾದ ಎಲ್ಲ ಸಂಗತಿಗಳಿಗೂ ಶುಕ್ರನೇ ಕಾರಣ ಪುರುಷನು ಅಥವಾ ಕಾರಕ ಗ್ರಹವು ಆಗಿರುವದರಿಂದ ಶರೀರದ ಸೌಷ್ಠವದ ವಿಚಾರವನ್ನು ಈ ಗ್ರಹದ ಮೂಲಕ ಮಾಡಬೇಕು. ಅಗ್ನಿ ಹಾಗೂ ವಾಯು ರಾಶಿಗಳು ತೆಳ್ಳಗಾದ ದೇಹ ರಚನೆ ಸೂಚಿಸಿದರೆ ಪೃಥ್ವಿ ಹಾಗೂ ಜಲರಾಶಿಗಳು ದಪ್ಪವಾದ ಮತ್ತೂ ಸ್ಥೂಲವಾದ ಶರೀರವನ್ನು ಸೂಚಿಸುತ್ತವೆ. ವಾಯು ರಾಶಿಯ ಸ್ತ್ರೀಯರು ಅಗ್ನಿರಾಶಿಯ ಸ್ತ್ರೀಗಿಂತ ಅಧಿಕವಾಗಿ ಬಡಕಲಾಗಿರುತ್ತಾರೆ. ಜಲರಾಶಿಗಿಂತ ಅಧಿಕ ಸ್ಥೂಲತನವನ್ನು ಪೃಥ್ವಿ ರಾಶಿ ತೋರಿಸುತ್ತದೆ. ರವಿ ಮಂಗಳರು ಎತ್ತರ ಹಾಗೂ ಬಡಕಲು ದೇಹ ತೋರಿಸಿದರೆ ಗುರು, ಶನಿ ಗ್ರಹಗಳು ಸ್ಥೂಲತೆಯನ್ನು ತೋರಿಸುತ್ತವೆ.

## ರಾಶಿಗಳಿಂದ ಸ್ತ್ರೀಯರ ಸ್ವಭಾವ

ಮೇಷ :— ಈ ರಾಶಿಯು ಚರರಾಶಿಯಾಗಿದ್ದು ಪುರುಷರಾಶಿಯಾಗಿರುತ್ತದೆ. ಈ ರಾಶಿಯಲ್ಲಿ ಜನಿಸಿದ ಸ್ತ್ರೀಯರ ಸ್ವಭಾವವು ಪುರುಷರಂತೆ ಇದ್ದು. ಕುಳ್ಳರೂ ಆಲಸಿಗಳೂ ಇರುವರು. ಹಾಗೂ ಅಚ್ಚುಕಟ್ಟುತನ ಸ್ವಚ್ಛತೆಯಲ್ಲಿ ಆಸಕ್ತಿ ಕಡಿಮೆಯಿರುತ್ತದೆ. ಇವರಿಗೆ ಒಣಾಡಂಬರ ಮಾಡಲು ಬರುವದಿಲ್ಲ ಹಾಗೂ ಇಂಥ ಸ್ತ್ರೀಯರು ಶಾರೀರಿಕ ಶ್ರಮದ ಕೆಲಸದಲ್ಲಿ ಪ್ರವೀಣರಾಗಿರುವರು. ಸೂಕ್ಷ್ಮ ಹಾಗೂ ಕುಶಲ ಕಾರ್ಯವನ್ನು ಮಾಡಲಾರರು. ಯಾವುದೇ ಕೆಲಸದಲ್ಲಿ ಈ ಸ್ತ್ರೀಯರು ಶಾರೀರಿಕ ಶ್ರಮದಿಂದ ಮುಂದುವರಿದಿರುತ್ತಾರೆ. ಆದರೆ ಪರರ ಮೇಲೆ ಪ್ರಭಾವ ಬೀರುವದು ಹೆಸರು ಗಳಿಸುವದು ಇವರಿಗೆ ಆಗದ ಮಾತು. ಇವರು ಸಾಹಸಿಗಳು ಸ್ಪಷ್ಟೋಕ್ತಿಯುಳ್ಳವರೂ ಇದ್ದು ಮಾತಿನಲ್ಲಿ ನಿಷ್ಕಪಟಿಗಳಿರುತ್ತಾರೆ. ಇಂಥ ಸ್ತ್ರೀಯರು ಆತ್ಮವಿಶ್ವಾಸಿಗಳೂ ಸ್ವತಂತ್ರ ಮನೋವೃತ್ತಿಯರೂ ಮಹತ್ವಾಕಾಂಕ್ಷಿಯರೂ ಇದ್ದು ಯಾವುದೇ ಕೆಲಸದಲ್ಲಿ ಬೇಗ ನಿರ್ಣಯಕ್ಕೆ ಬರುತ್ತಾರೆ.

ಆದರೆ ಇಂಥ ಸ್ತ್ರೀಯರಿಗೆ ಪ್ರತಿಕೂಲ ಕಾಲವೇ ಇರುತ್ತದೆ. ವಾದ-ವಿದ್ವಾ ಜಗಳ, ತಂಟೆ ಮುಂತಾದ ವಿಷಯಗಳಲ್ಲಿ ಬೇಗ ಸಿಟ್ಟಿಗೇಳುವ ಸ್ವಭಾವ ದವರಿರುತ್ತಾರೆ. ಈ ಸ್ತ್ರೀಯರು ಉಷ್ಣ ಪ್ರಕೃತಿಯವರಿದ್ದು, ಹುರುಕು ಕಜ್ಜಿ ಮುಂತಾದ ಚರ್ಮರೋಗದ ಭಯ ಬಹಳ. ಇಂಥ ಸ್ತ್ರೀಯರಿಗೆ ಬಾಲ್ಯಾವಸ್ಥೆಯಲ್ಲಿ ತಲೆಗೆ ಪೆಟ್ಟು ಬಿದ್ದು ಗಾಯವಾಗುವ ಸಂಭವ ಬಹಳ ಇರುತ್ತದೆ.

ವೃಷಭ :— ಇದು ಸ್ತ್ರೀ ರಾಶಿ ಹಾಗೂ ಸ್ಥಿರ ರಾಶಿಯಾಗಿದ್ದು ಈ ರಾಶಿಯಲ್ಲಿ ಜನಿಸಿದ ಸ್ತ್ರೀಯರು ಎತ್ತರ ನಿಲುಮೆಯವರು, ರೂಪವಂತರೂ, ಉದ್ದ ಮುಖವುಳ್ಳವರೂ ಆಗಿರುತ್ತಾರೆ. ಇವರದು ವಾಚಾಳಿ ಸ್ವಭಾವ. ಆದರೆ ವಿನಯ, ಶಾಂತತೆ, ಸೌಜನ್ಯಗಳೂ ಇರುತ್ತವೆ. ಈ ಸ್ತ್ರೀಯರಿಗೆ ಹೂವಿನ ಹಾರ ಮುಡಿದುಕೊಳ್ಳುವ ಇಚ್ಛೆ ಬಹಳ ಇರುತ್ತದೆ. ವಸ್ತ್ರ ಅಲಂಕಾರಭೂಷಣಾದಿಗಳಲ್ಲಿ ಇವರು ಪ್ರಾವೀಣ್ಯತೆ ಪಡೆದಿರುತ್ತಾರೆ. ಶಾಂತ ಪ್ರವೃತ್ತಿಯವರಾದ ಈ ಸ್ತ್ರೀಯರು ಯಾವುದೇ ಕೆಲಸಕ್ಕೆ ತಾವೇ ಮುಂದು ಬದ್ದು ಕೈಹಾಕಲಾರರು. ಇವರಲ್ಲಿ ದೃಢನಿಶ್ಚಯತೆ ಇರುವ ಕಾರಣ ಲಾಭ-ಹಾನಿ, ಸೋಲು-ಗೆಲವು, ಸುಖ-ದುಃಖ ಎಲ್ಲವನ್ನೂ ಸಹಿಸುತ್ತಾರೆ. ಇವರ ತುಟಿ ದಪ್ಪವಿದ್ದು ಮುಂದೆ ಬಂದಿರುತ್ತವೆ. ಗಲ್ಲಗಳು ತುಂಬಿದ್ದು ಉದ್ದವಾಗಿರುತ್ತವೆ. ಇವರು ತೆಳ್ಳಗಾಗಿರುವರು, ( ಒಂಟೆಲುಬಿನವರು ) ಹಾಗೂ ಇವರಿಗೆ ಕನ್ಯಾ ಸಂತತಿ ಹೆಚ್ಚಿಗಿರುತ್ತದೆ.

ಮಿಥುನ :— ಇದು ಬೌದ್ಧಿಕ ರಾಶಿಯು ಈ ರಾಶಿಯಲ್ಲಿ ಜನಿಸಿದ ಸ್ತ್ರೀಯರ ಮುಖ ಕಾಂತಿಯುಕ್ತವಾಗಿರುತ್ತದೆ. ನಿಡಿದಾದ ಮೂಗು, ಚಿಕ್ಕ ಹಣೆ, ಆಕರ್ಷಕ ಕಣ್ಣು, ತೆಳ್ಳಗಾಗಿ ಒಳಗೆ ಮುಚ್ಚಿಕೊಂಡ ತುಟಿ, ಹಲ್ಲುಗಳ ಪಂಕ್ತಿ ಸರಳ ಹಾಗೂ ಸಣ್ಣದಾಗಿರುತ್ತವೆ. ಒಡಕಾದ ದೇಹ ಮಾಟ, ಉದ್ದವಾದ ಕೈಕಾಲುಗಳಿರುತ್ತವೆ. ಇವರ ಸ್ಮರಣಶಕ್ತಿ ಹಾಗೂ ಬುದ್ಧಿ ಪಂಕ್ತಿಕೆ ಉತ್ತಮವಾಗಿದ್ದು ಮಾತಿನಲ್ಲಿ ಚಾಣಾಕ್ಷರಾಗಿರುತ್ತಾರೆ. ಈ ಸ್ತ್ರೀಯರು ಶಿಕ್ಷಣದಲ್ಲಿ ಮುಂದುವರಿದವರಿದ್ದು ಭಾಷೆ, ಗಣಿತ, ಹಾಗೂ ಕಾಂಠಪಾಠ ಮಾಡುವ ವಿಷಯಗಳಲ್ಲಿ ಪ್ರವೀಣರಾಗಿರುತ್ತಾರೆ. ಇವರ ಧ್ವನಿ ಇಂಪಾಗಿದ್ದು, ಗಾಯನದಲ್ಲಿಯೂ, ಹಾರ್ಮೋನಿಯಮ್, ಸಿತಾರ,

ವೀಣಾ, ದಿಲರುಬಾ ಮುಂತಾದ ವಾದ್ಯಗಳನ್ನು ಬಾರಿಸಬಲ್ಲರು. ಇವರು ಮಿತಭಾಷಿಗಳೂ ಏಕಾಂತಪ್ರಿಯರೂ ಇದ್ದು ವಾಚನಾಭಿರುಚಿಯುಳ್ಳವ ರಾಗಿರುತ್ತಾರೆ. ಇಂಥ ಸ್ತ್ರೀಯರು ಯಾವುದೇ ಆಫೀಸಿನಲ್ಲಿ ಕಾರಕೂನ ಕೆಲಸವನ್ನಾಗಲೀ ಬುದ್ಧಿಮತ್ತಿಕೆಯ ಕೆಲಸವನ್ನಾಗಲೀ ಉತ್ತಮ ರೀತಿಯಿಂದ ನಿರ್ವಹಿಸಬಲ್ಲರು. ಇಂಥ ಸ್ತ್ರೀಯರ ಪಂಚಮಸ್ಥಾನದಲ್ಲಿ ಬಲಾಢ್ಯ ಗುರು ಇದ್ದರೆ—ಸ್ಕಾಲರರಾಗಿರುತ್ತಾರೆ ಇವರು ಪರಪ್ರಾಂತಕ್ಕೆ ಹೋದರೂ ಬೇರೆ ಭಾಷೆಯನ್ನು ಬಹು ವೇಗವಾಗಿ ಕಲಿಯಬಲ್ಲರು ಅಲ್ಲದೆ ಪ್ರವಾಸದ ಹುಚ್ಚು ಬಹಳವಾಗಿರುತ್ತದೆ. ಯಾವ ಕೆಲಸಕ್ಕೂ ದೃಢವಾಗಿ ಅಂಟಿಕೊಂಡಿರುವ ದಿಲ್ಲ. ಇವರು ಉತ್ತಮ ಸಾಹಿತಿಗಳೂ ಕಲಾಪ್ರವೀಣರೂ ಇದ್ದರೂ ಬಾಹ್ಯ ನೋಟಕ್ಕೆ ಇವರ ವ್ಯಕ್ತಿತ್ವ ಆಕರ್ಷಕವೂ ಪ್ರಭಾವಿಯೂ ಆಗಿರುವದಿಲ್ಲ.

**ಕರ್ಕ** :— ಇದು ಸ್ತ್ರೀರಾಶಿಯಾಗಿದ್ದು, ಜಲರಾಶಿಯೂ ಚರರಾಶಿಯೂ ಆಗಿರುತ್ತದೆ. ಈ ರಾಶಿಯಲ್ಲಿ ಜನಿಸಿದ ಸ್ತ್ರೀಯರು ಬಣ್ಣದಿಂದ ಗೌರವರ್ಣ ದವರಿರುತ್ತಾರೆ. ಚೌಕಾದ ಮೋರೆ, ಮಧ್ಯಮ ಎತ್ತರ, ಕಾಂತಿಯುಕ್ತ ಮುಖದವರಾಗಿರುತ್ತಾರೆ. ಇವರಿಗೆ ಸಹಿಷ್ಣುತೆ ಬಹಳ. ನೌಕಾವಿಹಾರ ತಿರುಗಾಟ ಇಂಥವರಿಗೆ ಬಹಳ ಸೇರುತ್ತದೆ. ಇವರಿಗೆ ಮನೆಗೆಲಸ ಹಾಗೂ ಅಪ್ತೇಷ್ಟರಲ್ಲಿ ಆಸಕ್ತಿ ಬಹಳ ಆದ್ದರಿಂದ ವಿಶೇಷ ಪ್ರವಾಸಾದಿಗಳನ್ನು ಕೈಕೊಳ್ಳುವದಿಲ್ಲ. ಇವರು ದೂರದರ್ಶಿಗಳಾದ ಕಾರಣ ವ್ಯವಹಾರ ಕುಶಲರೂ ವ್ಯಾಪಾರತಜ್ಞರೂ ಆಗಿರುತ್ತಾರೆ. ಇವರು ದೃಢನಿಶ್ಚಯ, ಗಂಭೀರಸ್ವಭಾವ ಮಿತಭಾಷಿ ಹಾಗೂ ಕಫಪ್ರಕೃತಿ.

**ಸಿಂಹ** :— ಇದು ಅಗ್ನಿ ಹಾಗೂ ಪುರುಷರಾಶಿಯಾಗಿರುವದರಿಂದ ಇದರಲ್ಲಿ ಜನಿಸಿದ ಸ್ತ್ರೀಯರು ದಷ್ಟವಾಗಿ, ಗಿಡ್ಡವಾಗಿ ರೂಪಸಿಗಳಾಗಿರು ತ್ತಾರೆ. ಇವರ ಹಲ್ಲುಗಳು ಅಸ್ತವ್ಯಸ್ತವಾಗಿದ್ದು ಮುಖ ದುಂಡರಾಗಿರುತ್ತದೆ. ಹಣೆ ಅಗಲ ಹಾಗೂ ವಿಶಾಲ ಕಣ್ಣುಗಳಿರುತ್ತವೆ. ಆದರೆ ಸ್ವಭಾವದಿಂದ ಇವರು ಉದಾರಿಗಳೂ ಆತ್ಮವಿಶ್ವಾಸವುಳ್ಳವರೂ, ನಿಷ್ಕಪಟಿಗಳೂ ಇದ್ದು ಯಾವಾಗಲೂ ಆತ್ಮಪ್ರಶಂಸೆಯನ್ನು ಬಯಸುತ್ತಾರೆ. ಇವರ ನೈಸರ್ಗಿಕ ಗುಣಗಳು ಉದಾರತೆ, ಮುಂದಾಳುತನ ಹಾಗೂ ಸಹಿಷ್ಣುತೆ. ಇವರು ರೀತಿ

ನಡತೆ ಕೆಲಸಗಳಲ್ಲಿ ಪುರುಷರಂತೆ ವರ್ತಿಸುತ್ತಾರೆ. ಇವರು ಚೆನ್ನಾಗಿ ಭಾಷಣ ಮಾಡಬಲ್ಲರು. ಆಪತ್ತಿನಲ್ಲಿ ಸಹಾಯ ಸಲ್ಲಿಸುವ ಗುಣವುಳ್ಳವರೂ ಶೀಘ್ರ ಕೋಪಿಗಳಾಗಿದ್ದರೂ ಬೇಗ ಶಾಂತರಾಗುತ್ತಾರೆ. ಪರರನ್ನು ತಮ್ಮ ವರ್ಚಸ್ಸಿನಲ್ಲಿ ತರುತ್ತಾರೆ. ಇವರಿಗೆ ಟೊಂಕ, ಮೊಣಕಾಲು ಹಾಗೂ ಹಲ್ಲುಗಳ ವ್ಯಾಧಿ ಮೇಲಿಂದ ಮೇಲೆ ಪೀಡಿಸುತ್ತದೆ. ಪೃಥ್ವಿ ಅಥವಾ ಜಲರಾಶಿಯ ಪತಿಯೊಂದಿಗೆ ಈ ಸ್ತ್ರೀಯರು ಹೊಂದಿಕೊಂಡಿರಲಾರರು.

ಕನ್ಯಾ :— ಇದು ಸ್ತ್ರೀರಾಶಿ ಹಾಗೂ ದ್ವಿಸ್ವಭಾವರಾಶಿಯಾಗಿರುತ್ತದೆ. ಇದರಲ್ಲಿ ಜನಿಸಿದ ಸ್ತ್ರೀಯರು ತೆಳ್ಳಗಾಗಿಯೂ, ಗಿಡ್ಡವಾಗಿಯೂ ಇರುತ್ತಾರೆ. ನಿಡಿದಾದ ಮೂಗು ಅಗಲವಾದ ಕಣ್ಣು ಹಾಗೂ ದಾಳಿಂಬದ ಬೀಜದಂಥ ಹಲ್ಲುಗಳಿರುತ್ತವೆ. ಇವರದು ಗೌರವರ್ಣ. ಇವರಿಗೆ ಹೆಚ್ಚು ವಯಸ್ಸಾಗಿದ್ದರೂ ಚಿಕ್ಕವರಂತೆ ಕಾಣುತ್ತಾರೆ. ಇವರು ಬಹಳವಾಗಿಯೂ ಮಧುರವಾಗಿಯೂ ಮಾತಾಡುತ್ತಾರೆ. ಶುಕ್ಲ ಸ್ವಭಾವ, ಶಿಕ್ಷಣದಲ್ಲಿ ಹೆಚ್ಚಿನ ಪ್ರಗತಿ ಕಂಡು ಬರದಿದ್ದರೂ ಮನೆಗೆಲಸದಲ್ಲಿ ಪ್ರವೀಣರಾಗಿರುತ್ತಾರೆ. ಪತಿಗೆ ವಿಧೇಯರಾಗಿರುತ್ತಾರೆ. ಆಪ್ತೇಷ್ಟರೊಡನೆ ಹೊಂದಿಕೊಂಡು ನಡೆಯುತ್ತಾರೆ. ಆತ್ಮಪ್ರೌರುಷ ಇವರಲ್ಲಿ ಹೆಚ್ಚು.

ತುಲಾ :— ಇದು ಪುರುಷ ರಾಶಿಯಿದ್ದು ವಿಷಮ ಹಾಗೂ ಚರರಾಶಿಯಾಗಿರುತ್ತದೆ. ಈ ರಾಶಿಯಲ್ಲಿ ಜನಿಸಿದ ಸ್ತ್ರೀಯರು ಎತ್ತರವಾಗಿಯೂ ತೆಳ್ಳಗಾಗಿಯೂ ಇದ್ದು ಗೌರವರ್ಣದವರಿರುತ್ತಾರೆ ಉದ್ದವಾದ ಮೂಗು ಹರವಾದ ಹಣೆ, ತುಂಬಿದ ಗಲ್ಲ, ವಿಶಾಲ ಹಾಗೂ ಆಕರ್ಷಕ ಕಣ್ಣು ತೀಡಿದಂಥ ಹುಬ್ಬು, ಸುಂದರ ಹಾಗೂ ಸಣ್ಣ ದಂತಪಂಕ್ತಿ ಇರುತ್ತವೆ. ರತಿದೇವಿಯರಂತೆ ಕಾಣುತ್ತಾರೆ. ಎಂಥ ಬಣ್ಣದವರಿದ್ದರೂ ಕಾಂತಿಯುಕ್ತರಾಗಿ ಆಕರ್ಷಕರಾಗಿರುತ್ತಾರೆ. ಇದೇ ಈ ರಾಶಿಯ ವೈಶಿಷ್ಟ್ಯ. ಸಾಹಿತ್ಯ, ಸಂಗೀತ ನಾಟ್ಯ, ಮುಂತಾದ ಕಲೆಗಳಲ್ಲಿ ನಿಪುಣರಾಗಿರುತ್ತಾರೆ. ಸ್ವಚ್ಛತೆ, ಅಚ್ಚುಕಟ್ಟುತನ, ಶೃಂಗಾರ ಪ್ರಿಯತೆ ಹಾಗೂ ವಿಲಾಸಭೋಗಗಳೂ ಇವರಿಗೆ ಸೇರುತವೆ. ತಿಂಡಿ-ತಿನಿಸುಗಳಲ್ಲಿ ಇವರಿಗೆ ಚಿಕಿತ್ಸೆ ಬಹಳ. ಪರಪುರುಷರೊಡನೆ ದಿಟ್ಟತನದಿಂದ ಮಾತನಾಡಬಲ್ಲರು. ಇವರು ಬಹಳ ವಿಷಯಾಸಕ್ತರಾಗಿರುತ್ತಾರೆ. ಇವರ ಮದುವೆ ಬೇಗ ಆಗುತ್ತದೆ. ಅಲ್ಲದೆ ಪ್ರವಾಸವು ಇವರಿಗೆ ಬಹಳ

ಸೇರುತ್ತದೆ. ಇಂಥವರಿಗೆ ಪಟ್ಟಣವಾಸ ಬಹಳ ರುಚಿಸುತ್ತದೆ. ಏಕಾಂತವಾಸ ಎಂದಿಗೂ ಸೇರದು.

ವೃಶ್ಚಿಕ :— ಇದು ಸ್ತ್ರೀರಾಶಿಯಿದ್ದು ಜಲರಾಶಿಯಾಗಿರುತ್ತದೆ. ಈ ರಾಶಿಯಲ್ಲಿ ಜನಿಸಿದ ಸ್ತ್ರೀಯರು ಗೋದಿ ಬಣ್ಣದವರಿದ್ದು ಸ್ಥೂಲ ದೇಹದವರೂ ಮುಂದೆ ಚಾಚಿದ ತುಟಿಯವರೂ ಇರುತ್ತಾರೆ. ಇದು ಮಂಗಳನ ರಾಶಿಯಿರುವ ಕಾರಣ ಈ ರಾಶಿಯಲ್ಲಿ ಜನಸಿದ ಸ್ತ್ರೀಯರು ಕರ್ತವ್ಯದಕ್ಷರೂ, ಸಾಹಸಿಗಳೂ ಪ್ರಯತ್ನವಾದಿಗಳೂ ಇದ್ದು ಅಹಂಮನ್ಯ ಪ್ರವೃತ್ತಿಯವರು ಇರುತ್ತಾರೆ. ಆದ್ದರಿಂದ ಗೃಹಿಣಿಯರಿಗೆ ಬೇಕಾಗುವ ಸಹನಶೀಲತೆ, ಆಜ್ಞಾಪಾಲನೆ, ನಮ್ರತೆ, ವಿನಯ, ಮುಂತಾದ ಗುಣಗಳ ಅಭಾವದ ಮೂಲಕ ಬಹು ಜನರ ನಿಂದೆಗೆ ಪಾತ್ರರಾಗುತ್ತಾರೆ. ಮೇಷ, ಸಿಂಹ, ವೃಶ್ಚಿಕ, ಧನು ರಾಶಿಯ ಪತಿಯ ಆಜ್ಞೆಗೆ ಮಾತ್ರ ಒಳಗಾಗಿರುವರು, ಇತರರೊಂದಿಗೆ ಹೊಂದಿಕೊಂಡಿರಲಾರರು. ಇವರಿಗೆ ಸಂತತಿ ಬಹಳ, ಮಿತ್ರರು ಕಡಿಮೆ. ಇವರು ದಿಟ್ಟರೂ, ಸಾಹಸಿಗಳೂ, ಅಭಿಮಾನಿಗಳೂ ಇರುವ ಕಾರಣ ವಿವಾಹವಾದ ಸ್ತ್ರೀಯರೂ ಸಹ ನೌಕರಿ, ಉದ್ಯೋಗ, ಮಾಡಿ ಸ್ವಾವಲಂಬಿಗಳಾಗಿರುತ್ತಾರೆ.

ಧನು :— ಇದು ಪುರುಷ ರಾಶಿಯಾಗಿದ್ದು, ವಿಷಮ ಹಾಗೂ ಅಗ್ನಿ ರಾಶಿಯಾಗಿರುತ್ತದೆ. ಈ ರಾಶಿಯ ಸ್ತ್ರೀಯರು ಬಹಳ ಎತ್ತರ ಹಾಗೂ ಸ್ಥೂಲ ದೇಹದವರು. ಇವರ ತುಟಿ ಮುಚ್ಚಿದಂತಿರುತ್ತವೆ. ದೊಡ್ಡ ಕಣ್ಣು, ಅಗಲ ಹಣೆ, ಇದ್ದು ಭವ್ಯರಾಗಿರುತ್ತಾರೆ. ಇವರು ವಿನಯಶೀಲರೂ ಸತ್ಯ ಸತ್ಯ ಪ್ರಿಯರೂ, ಅಲಂಕಾರ ಪ್ರಿಯರೂ ಇರುತ್ತಾರೆ. ಇವರು ಎಲ್ಲರಿಗೂ ಬೇಕಾದವರಾಗಿರುತ್ತಾರೆ. ಇವರು ಮಾನ-ಮರ್ಯಾದೆಗಾಗಿ ಬಡಿದಾಡುತ್ತಾರೆ. ಇವರಿಗೆ ಸಾಹಿತ್ಯದಲ್ಲಿ ಆಸಕ್ತಿ ಬಹಳ. ಧಾರ್ಮಿಕ, ಕಾಯಿದೆ, ಕಾನೂನು, ತಾತ್ವಿಕ ವಿಷಯಗಳಲ್ಲಿ ಪಾಂಡಿತ್ಯವಿರುತ್ತದೆ. ಉತ್ತಮ ಲೇಖಕಿಯರೂ ಇರುತ್ತಾರೆ. ಇವರದು ಪಿತ್ತಪ್ರಕೃತಿ.

ಮಕರ :— ಇದು ಸ್ತ್ರೀರಾಶಿಯೂ ಚರರಾಶಿಯೂ ಪೃಥ್ವಿರಾಶಿಯೂ ಆಗಿರುತ್ತದೆ. ಈ ರಾಶಿಯ ಸ್ತ್ರೀಯರು ಕಫ ಪ್ರಕೃತಿಯವರು. ಅಷ್ಟೊಂದು ಗೌರವರ್ಣದವರಿರುವದಿಲ್ಲ. ವಿದ್ಯೆಯಲ್ಲಿ ಪ್ರವೀಣರಾಗಿರದಿದ್ದರೂ ವ್ಯವಹಾ

ಕುಶಲರಾಗಿರುತ್ತಾರೆ. ಮಾನಾಪಮಾನಗಳನ್ನು ಹೆಚ್ಚು ಲೆಕ್ಕಿಸದೆ ಯಕ್ಕನುಗುಣವಾಗಿ ವರ್ತಿಸುತ್ತಾರೆ. ಇವರು ಬಡವರಾಗಿದ್ದರೂ ಗಳು. ಸ್ವಚ್ಛತೆ, ಅಚ್ಚುಕಟ್ಟುತನ ಇವುಗಳ ಗಂಧವೇ ಇವರಿಗಿರುವ ಆದರೆ ಶ್ರಮಿಕ ಕೆಲಸವನ್ನು ಮಾಡಬಲ್ಲರು. ಇವರು ಸಹಿಷ್ಣುಗಳೂ ವ್ಯದಕ್ಷರೂ ಆಗಿರುತ್ತಾರೆ.

ಕುಂಭ :— ಇದು ಪುರುಷ ಹಾಗೂ ವಾಯುರಾಶಿಯಾಗಿರುವ ಕಾರಣ ರಾಶಿಯ ಸ್ತ್ರೀಯರು ಬುದ್ಧಿವಂತರಾಗಿರುತ್ತಾರೆ. ವಿಚಾರಪ್ರವೃತ್ತಿ ಗಿರುವದರಿಂದ ಯಾವ ಕೆಲಸಕ್ಕೂ ದುಡುಕುವದಿಲ್ಲ ಪ್ರೇಮ, , ಉಪಕಾರ ಮುಂತಾದ ಗುಣಗಳ ಹೆಚ್ಚಳದಿಂದ ಇವರು ಏಕತ್ರ ಂಬದಲ್ಲಿ ಹೊಂದಿಕೊಂಡಿರಬಲ್ಲರು. ಇವರು ಮಿತಭಾಷಿಗಳೂ ಸತ್ಯ ರೂ ಇದ್ದು ಬರಹದಲ್ಲಿ ಪಳಗಿದವರಾಗಿರುತ್ತಾರೆ. ಈ ಸ್ತ್ರೀಯರಿಗೆ ಯ ಅಭಾವವಿರುತ್ತದೆ. ಇವರು ಎತ್ತರವಾಗಿಯೂ ತೆಳ್ಳಗಾಗಿಯೂ ತ್ತಾರೆ. ಇವರದು ಉದ್ದಾದ ಮೋರೆ, ಉದ್ದವಾದ ಮೂಗು, ಅಗಲ ಕಣ್ಣು, ಇವರ ಹಣೆ ಎತ್ತರವಾಗಿದ್ದು ಕೇಶಗಳು ವಿರಳವಾಗಿರುತ್ತವೆ.

ಮೀನ :— ಇದು ಜಲರಾಶಿಯು ಸ್ತ್ರೀರಾಶಿಯೂ ಇದ್ದು ಈ ರಾಶಿಯ ರು ಕುಳ್ಳರೂ ಬಡಕಲ ದೇಹದವರೂ ಆಗಿರುತ್ತಾರೆ. ಇವರು ದಪ್ರಿಯರು, ಪ್ರಖ್ಯಾತರೂ ಇದ್ದು ಸ್ವಂತದ ಹಾನಿಯನ್ನೂ ಲೆಕ್ಕಿಸದೆ ಪಕಾರ ಮಾಡುವ ಪ್ರವೃತ್ತಿಯವರಾಗಿರುತ್ತಾರೆ. ಇವರಿಗೆ ಸಂತತಿ . ಇವರು ಆಲಸಿಗಳೂ ಸ್ವಚ್ಛತಾಹೀನರೂ ಆಗಿರುತ್ತಾರೆ. ಈ ರು ಅಭ್ಯಾಸದಲ್ಲಿ ಮುಂದುವರಿದವರೂ ಸಂಗೀತ, ಸಾಹಿತ್ಯ, ನಾಟ ಮಾ ಮುಂತಾದವುಗಳಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ. ಇವರಿಗೆ ಪ್ಪಾಗಿದ್ದರೂ ಚಿಕ್ಕವರಂತೆ ಕಾಣುತ್ತಾರೆ. ಇವರಿಗೆ ಹೆಚ್ಚು ಸಂತತಿ ರುವದರಿಂದ ಮಕ್ಕಳ ಜೋಪಾನದಲ್ಲಿಯೇ ಬಹಳ ಸಮಯ ವ್ಯಯ ಸೌಖ್ಯ ದೊರೆಯುವದಿಲ್ಲ.

ಮೇಲೆ ಕೊಟ್ಟ ರಾಶಿಗಳ ಗುಣ ಧರ್ಮವನ್ನು ಇತರ ಗ್ರಹಗಳ ಮವನ್ನು ನೋಡಿ ನಿರ್ಣಯಿಸಬೇಕು.

## ಲಗ್ನದಲ್ಲಿರುವ ಗ್ರಹಗಳ ಪರಿಣಾಮ

ಲಗ್ನದಲ್ಲಿ ರವಿ :— ಸ್ತ್ರೀಯರ ಕುಂಡಲಿಯಲ್ಲಿ ರವಿಯು ಲಗ್ನದಲ್ಲಿದ್ದರೆ ಆ ಸ್ತ್ರೀಯು ಎತ್ತರವಾಗಿಯೂ ತೆಳ್ಳಗಾಗಿಯೂ ಇದ್ದು ಕಣ್ಣು ಕೆಂಪಗಾಗಿಯೂ ಕೂದಲು ವಿರಳವಾಗಿ ನಸುಗೆಂಪಾಗಿರುತ್ತವೆ. ಇದಕ್ಕೆ ವೃಷಭ, ಕನ್ಯಾ, ಮೀನ ಈ ಲಗ್ನಗಳು ಅಪವಾದವೆಂದು ತಿಳಿಯಬೇಕು. ಲಗ್ನದಲ್ಲಿ ರವಿಯು ಇದ್ದ ಸ್ತ್ರೀಯರು ಸ್ವಾಭಿಮಾನಿಗಳೂ ಕರ್ತವ್ಯದಕ್ಷರೂ ಇದ್ದು ಇತರರಿಗಿಂತ ತಾವೇ ಶ್ರೇಷ್ಠರೆಂದು ತಿಳಿಯುತ್ತಾರೆ. ಲಗ್ನದಲ್ಲಿ ರವಿಯಿದ್ದ ಸ್ತ್ರೀಯರ ಹಲ್ಲುಗಳು ಚೆನ್ನಾಗಿರುವದಿಲ್ಲ. ಆ ಸ್ತ್ರೀಯರು ಪಿತ್ತಪ್ರಕೃತಿಯವರಿದ್ದು ಯಾವಾಗಲೂ ತಲೆನೋವಿನಿಂದ ಬಳಲುತ್ತಿರುತ್ತಾರೆ. ಜಲ ಹಾಗೂ ಅಗ್ನಿರಾಶಿಯಲ್ಲಿದ್ದ ರವಿಯು ಶೀಘ್ರ ಕೋಪವನ್ನು ಕೊಡುತ್ತಾನೆ. ಆದರೆ ಕೋಪವು ಬೇಗನೇ ಶಾಂತವಾಗುತ್ತದೆ. ವಾಯುರಾಶಿಯಲ್ಲಿ ರವಿ ಇದ್ದರೆ ಬುದ್ಧಿವಂತಿಕೆಯನ್ನು ಕೊಡುತ್ತಾನೆ. ಮೇಷ, ಸಿಂಹ, ಧನು ರಾಶಿಗಳ ರವಿಯು ಕಡಿಮೆ ಸಂತಾನವನ್ನು ಕೊಡುತ್ತಾನೆ. (ಲಗ್ನದಲ್ಲಿ) ಆದರೆ ಶಾರೀರಿಕ ಸುಖವನ್ನು ಕೊಡುತ್ತಾನೆ. ಮೇಷರಾಶಿಯ ರವಿಯು ಲಗ್ನದಲ್ಲಿದ್ದ ಸ್ತ್ರೀಯರಿಗೆ ಅಧಿಕಾರಿಗಳ ಪತಿಯು ಸಿಗುತ್ತಾನೆ. ಹಾಗೂ ಅವರ ಜನನ ಕೂಡ ಅಧಿಕಾರಿಗಳ ಮನೆಯಲ್ಲಿಯೇ ಆಗುತ್ತದೆ. ಸಿಂಹ ರಾಶಿಯ ರವಿಯು ಕೂಡ ಮೇಷರಾಶಿಯ ರವಿಯಂತೆ ಫಲವನ್ನು ಕೊಡುತ್ತಾನೆ. ಆದರೆ ಕಣ್ಣಿನ ದೋಷವನ್ನೂ ತರುತ್ತಾನೆ. ಮೀನ ರಾಶಿಯಲ್ಲಿರುವ ರವಿಯು ಲಗ್ನದಲ್ಲಿದ್ದರೆ ಸಂತತಿಯ ಅಭಾವವಿರುತ್ತದೆ. ಒಟ್ಟಿನಲ್ಲಿ ಯಾವುದೇ ರಾಶಿಯ ರವಿಯು ಲಗ್ನದಲ್ಲಿದ್ದರೆ ದೀರ್ಘಾಯುಷ್ಯವನ್ನು ಕೊಡುತ್ತಾನೆ.

ಲಗ್ನದಲ್ಲಿ ಚಂದ್ರ :— ಚಂದ್ರನು ಲಗ್ನದಲ್ಲಿದ್ದ ಸ್ತ್ರೀಯರು ರೂಪದಲ್ಲಿ ರತಿದೇವಿಯರಾಗಿರುತ್ತಾರೆ. ವಿಶೇಷವಾಗಿ ಸ್ತ್ರೀ ರಾಶಿಯಲ್ಲಿದ್ದ ಚಂದ್ರನಂತೂ ಅಧಿಕ ಸೌಂದರ್ಯವನ್ನು ದಯಪಾಲಿಸುತ್ತಾನೆ. ಅಗ್ನಿರಾಶಿಯ ಚಂದ್ರನು ಕೇಶರಾಶಿ ವಿರಳವಾಗಿರುವದನ್ನು ತೋರಿಸುತ್ತಾನೆ. ಆದರೆ ಅದೇ ಚಂದ್ರನು ಜಲರಾಶಿ ಹಾಗೂ ಪೃಥ್ವಿರಾಶಿಯಲ್ಲಿದ್ದರೆ ಕೇಶರಾಶಿ ಉದ್ದವಾಗಿಯೂ ಶ್ರೋಣಿಭಾಗದವರೆಗೂ ಇರುತ್ತವೆ. ಬಲವಾನ ಹಾಗೂ ಪೂರ್ಣಚಂದ್ರನು

ಲಗ್ನದಲ್ಲಿದ್ದರೆ ಆಯುಷ್ಯ ಹಾಗೂ ಆರೋಗ್ಯವನ್ನು ಹೆಚ್ಚು ಕೊಡುತ್ತಾನೆ. ಆದರೆ ಅದೆ ಚಂದ್ರನು ಕ್ಷೀಣನಾಗಿದ್ದರೆ ಹಾನಿಕಾರಕವಾಗಿರುತ್ತಾನೆ. ವೃಷಭ ಕರ್ಕ, ಕನ್ಯಾ, ಮೀನ ಮಕರ ಈ ರಾಶಿಗಳ ಚಂದ್ರನು ಲಗ್ನದಲ್ಲಿದ್ದರೆ ಅತ್ಯುತ್ತಮವು. ಆದರೆ ಲಗ್ನದಲ್ಲಿದ್ದರೆ ಉಚ್ಚ ಭಾವನೆ, ವಿಚಾರ ಹಾಗೂ ನಡತೆ ಕೊಡದೆ ವಿಲಾಸಮಯ ಜೀವನವನ್ನು ಕೊಡುತ್ತಾನೆ. ಇಂದ್ರಿಯಗಳ ವಿಚಾರ, ಮನೋವಿಕಾರ, ಹಾಗೂ ವಿಷಯ ವಾಸನೆ ಮುಂತಾದ ಸಂಗತಿಗಳ ಕಾರಕನು ಚಂದ್ರನು. ಆದುದರಿಂದ ಮೇಷ, ಮಿಥುನ, ತುಲಾ, ವೃಶ್ಚಿಕ, ಮಕರ ಈ ರಾಶಿಯವನಾಗಿದ್ದು ರಾಹು, ಮಂಗಳ, ಶುಕ್ರ ಮುಂತಾದ ಗ್ರಹಗಳೊಂದಿಗೆ ಇದ್ದರೆ ಮನೋಭಾವನೆಯಲ್ಲಿ ಕೆಡಕು ಪರಿಣಾಮವನ್ನುಂಟು ಮಾಡುತ್ತಾನೆ. ಚಂದ್ರನು ಇತರ ಗ್ರಹಗಳೊಂದಿಗೆ ಇದ್ದರೆ ಭಿನ್ನ ಭಿನ್ನ ಪರಿಣಾಮವನ್ನು ಉಂಟುಮಾಡುತ್ತಾನೆ. ಚಂದ್ರ ಶನಿಗಳ ಯುತಿಯು ಲಗ್ನದಲ್ಲಿದ್ದರೆ ಆರೋಗ್ಯಕ್ಕೆ ಹಾನಿಕಾರಕವು. ಅದರಲ್ಲಿಯೂ ಮೇಷ, ಕರ್ಕ, ವೃಶ್ಚಿಕ, ಮಕರದಲ್ಲಿದ್ದರಂತೂ ಆರೋಗ್ಯಕ್ಕೆ ಬಹಳೇ ಹಾನಿಕಾರಕ. ಚಂದ್ರ-ಮಂಗಳರ ಯುತಿಯು ಸಹ ಆರೋಗ್ಯಕ್ಕೆ ಅಶುಭಕಾರಕವು. ಆದರೆ ಚಂದ್ರ ಶನಿಯಂತಲ್ಲ ಚಂದ್ರ ರಾಹುಗಳ ಯುತಿಯು ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮೀನ, ಮಕರ ಈ ರಾಶಿಯಲ್ಲಿದ್ದರೆ ಉತ್ತಮ. ಚಂದ್ರ-ಶುಕ್ರ, ಚಂದ್ರ-ಗುರು ಇವರ ಯುತಿಯು ಲಗ್ನದಲ್ಲಿದ್ದರೆ ಅತ್ಯುತ್ತಮವು. ಆದರೆ ಚಂದ್ರ ಶುಕ್ರರ ಯುತಿಯು ಮೇಷ ಹಾಗೂ ವೃಶ್ಚಿಕ ರಾಶಿಯಲ್ಲಿದ್ದುದಾದರೆ ಕೆಡಕು. ಚಂದ್ರ-ಶುಕ್ರರ ಯುತಿಯು ವೃಶ್ಚಿಕ ರಾಶಿಯ ಲಗ್ನದಲ್ಲಿ ಇದ್ದರಂತೂ ರೂಪವು ಒಳ್ಳೆಯದಾಗಿದ್ದು ಅವರ ಶೀಲವು ಚೆನ್ನಾಗಿರುವದಿಲ್ಲ. ಚಂದ್ರ-ಶುಕ್ರರ ಯುತಿಯು ವೃಷಭ ಕರ್ಕ, ಕನ್ಯಾ, ತುಲಾರಾಶಿಯಲ್ಲಿದ್ದರಂತೂ ಆರೋಗ್ಯ ಹಾಗೂ ಸೌಂದರ್ಯಕ್ಕೆ ಅತ್ಯುತ್ತಮ. ಇಂಥ ಲಗ್ನದಲ್ಲಿ ಜನಿಸಿದ ಸ್ತ್ರೀಯರ ರೂಪದಲ್ಲಿ ರತಿಯನ್ನು, ಧನದಲ್ಲಿ ಲಕ್ಷ್ಮಿಯನ್ನು ಮೀರಿರುತ್ತಾರೆ. ಇದರಂತೆ ಚಂದ್ರ ಗುರುಗಳ ಯುತಿಯು ಕರ್ಕ, ಮೀನ, ಧನು, ರಾಶಿಯಲ್ಲಿದ್ದರೆ ಅತ್ಯುತ್ತಮವು. ಚಂದ್ರ ಗುರುಗಳ ಯುತಿಯು ಕರ್ಕರಾಶಿಯ ಲಗ್ನದಲ್ಲಿದ್ದರೆ ಪರೋಪಕಾರಿಗಳೂ ಸಾತ್ವಿಕರು ಇದ್ದು, ಗೃಹಲಕ್ಷ್ಮಿಯಂತೆ ಮನೆಯನ್ನು ಬೆಳಗುತ್ತಾರೆ. ಇಂಥ ಸ್ತ್ರೀಯರು

ಎಲ್ಲ ಬಗೆಯ ಸೌಖ್ಯವನ್ನು ಪಡೆಯುತ್ತಾರೆ. ಚಂದ್ರ-ಕೇತುಗಳ ಯುತಿಯು ಲಗ್ನದಲ್ಲಿದ್ದರೆ ಸ್ವಾರ್ಥ ಸ್ವಭಾವವನ್ನೂ ಅಂಗಹೀನತೆಯನ್ನೂ ಸೂಚಿಸುತ್ತದೆ. ಕೇವಲ ಚಂದ್ರನೊಬ್ಬನೆ ಮಿಥುನ, ವೃಶ್ಚಿಕ, ಮಕರ, ಕುಂಭ ಈ ರಾಶಿಗಳಲ್ಲಿ ಇದ್ದರೆ ವಯಸ್ಸಿನ ೨೧ ರಿಂದ ೨೨; ೩೫ ರಿಂದ ೪೦ ; ೪೨ ರಿಂದ ೫೧ ಈ ವಯಸ್ಸಿನಲ್ಲಿ ಭಾಗ್ಯಶಾಲಿಗಳಾಗಿರುತ್ತಾರೆ.

## ಲಗ್ನದಲ್ಲಿ ಮಂಗಳ

ಸ್ತ್ರೀಯರ ಕುಂಡಲಿಯಲ್ಲಿ ಲಗ್ನದಲ್ಲಿ ಮಂಗಳನಿರುವದು ಅಶುಭ ದಾಯಕವು. ಲಗ್ನದಲ್ಲಿ ಮಂಗಳನಿದ್ದ ವಧುವಿಗೆ ಮಂಗಳ ದೋಷವಿದೆ ಯೆನ್ನುತಾರೆ. ಅದೇ ಮಂಗಳನು ಮೇಷ, ಸಿಂಹ, ವೃಶ್ಚಿಕ, ಧನು, ಮಕರ, ಈ ರಾಶಿಯವನಾಗಿದ್ದು, ಲಗ್ನದಲ್ಲಿದ್ದರೆ ವೈವಾಹಿಕ ಜೀವನಕ್ಕೆ ಅಶುಭಕಾರಕನು. ಆದರೆ ಅವರು ಸಾರ್ವಜನಿಕ ಕಾರ್ಯದಲ್ಲಿ ಪ್ರತಿಷ್ಠಿತ ರಾಗುತ್ತಾರೆ. ಮಂಗಳನು ಲಗ್ನದಲ್ಲಿದ್ದರೆ ಸ್ತ್ರೀಯರು ಸಾಹಸಿಗಳು, ದಿಟ್ಟರು, ಪ್ರಯತ್ನವಾದಿಗಳೂ, ಸ್ವಪ್ರೋತ್ಸಾಹಿಗಳೂ ಯುಳ್ಳವರೂ ಆಗಿರುತ್ತಾರೆ ಮಂಗಳನು ಜಲರಾಶಿಯಲ್ಲಿದ್ದರೆ ಚರ್ಮರೋಗವನ್ನುಂಟು ಮಾಡುತ್ತಾನೆ. ಅಗ್ನಿರಾಶಿ ಯಲ್ಲಿದ್ದ ಮಂಗಳನು ಅಪಘಾತವನ್ನು ಸೂಚಿಸುತ್ತಾನೆ. ಅಗ್ನಿಯ ಭಯವೂ ಇರುತ್ತದೆ. ಇತರ ರಾಶಿಯಲ್ಲಿದ್ದ ಮಂಗಳನು ಅಷ್ಟು ಅಪಾಯಕಾರಕ ನಾಗಿರುವದಿಲ್ಲ. ಮಂಗಳನು ಲಗ್ನದಲ್ಲಿದ್ದರೆ ಸ್ತ್ರೀಯರು ಕೋಪಿಷ್ಟರಾಗಿರು ತ್ತಾರೆ. ಮಂಗಳ-ಬುಧರ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ಆಟದಲ್ಲಿ ಪ್ರವೀಣರಾಗಿರುತ್ತಾರೆ. ಗುರು-ಮಂಗಳರ ಯುತಿಯು ಲಗ್ನದಲ್ಲಿದ್ದರೆ ಖರ್ಚಿಕರೂ ಉದಾರಿಗಳೂ ಇದ್ದು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವ ಪ್ರವೃತ್ತಿಯವರಾಗಿರುತ್ತಾರೆ. ಶುಕ್ರ-ಮಂಗಳರ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ವಿಲಾಸ ಜೀವನವನ್ನು ಕಳೆಯುತ್ತಾರೆ. ಇಂಥ ಸ್ತ್ರೀಯರು ಹೂವಿನ ಹಾರವನ್ನು ಮಾಡುವದರಲ್ಲಿಯೂ ಅರಿವೆ-ಅಂಚಡಿಗಳನ್ನು ಓರಣ ವಾಗಿ ಇಡುವದರಲ್ಲಿಯೂ, ವಸ್ತು-ಒಡವೆಗಳನ್ನು ಜೋಡಿಸುವದರಲ್ಲಿಯೂ ದಕ್ಷರಾಗಿರುತ್ತಾರೆ. ಇವರು ತಮ್ಮ ಯೋಗ್ಯತೆಗಿಂತಲೂ ಹೆಚ್ಚು ಖರ್ಚು ಮಾಡುತ್ತಾರೆ. ಆದರೆ ಇವರು ಕರ್ತವ್ಯದಕ್ಷರೂ ಆಗಿರುತ್ತಾರೆ. ಶನಿ

ಮಂಗಳರ ಯುತಿಯು ಲಗ್ನದಲ್ಲಿ ಇದ್ದ ಸ್ತ್ರೀಯರ ವೈವಾಹಿಕ ಜೀವನವು ಸುರಳೀತ ಸಾಗಲಾರದು. ಇಂಥ ಸ್ತ್ರೀಯರು ಸತತೋದ್ಯೋಗಿಗಳೂ ಪ್ರಯತ್ನವಾದಿಗಳೂ ಇದ್ದು, ಸ್ವಾವಲಂಬನದಿಂದ ಧನವನ್ನು ಸಂಪಾದಿಸುತ್ತಾರೆ. ಇಂಥ ಸ್ತ್ರೀಯರ ಸ್ವಭಾವವನ್ನು ಗುರುತಿಸುವದು ಕಠಿಣ. ಗುರು, ಶನಿ, ಮಂಗಳ ಈ ಮೂವರ ಯುತಿಯು ಲಗ್ನದಲ್ಲಿದ್ದಂಥ ಸ್ತ್ರೀಯರಿಗೆ ಸಂತತಿಯ ಅಭಾವವಿರುತ್ತದೆ. ರಾಹು-ಮಂಗಳರ ಯುತಿಯು ಲಗ್ನದಲ್ಲಿ ಇದ್ದಂಥ ಸ್ತ್ರೀಯರು ಕರ್ತವ್ಯದಕ್ಷರೂ ಇದ್ದು ತಮಗೆ ಬೇಕಾದ ರೀತಿಯಲ್ಲಿ ನಡೆಯುತ್ತಾರೆ. ಇಂಥ ಸ್ತ್ರೀಯರು ಯಾರೊಂದಿಗೂ ಹೊಂದಿಕೊಂಡು ಬಾಳಲಾರರು. ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಗಳು ಲಗ್ನದಲ್ಲಿದ್ದು ರವಿ-ಮಂಗಳ, ಶನಿ-ಮಂಗಳ, ರಾಹು-ಮಂಗಳರ ಯುತಿಯು ಇದ್ದರೆ ಸ್ತ್ರೀಯರು ಸ್ವಾವಲಂಬಿಗಳಾಗಿದ್ದು, ನೌಕರಿ ಮುಂತಾದವುಗಳಲ್ಲಿಯೂ ಯಶಸ್ಸನ್ನು ಪಡೆಯುವರು. ಮಂಗಳ-ಕೇತುವಿನ ಯುತಿಯು ಲಗ್ನದಲ್ಲಿದ್ದರೆ ಸೌಂದರ್ಯಕ್ಕೆ ಹಾನಿಕಾರಕವು. ಲಗ್ನದಲ್ಲಿ ಮಂಗಳನಿದ್ದ ಸ್ತ್ರೀಯರ ಬಾಲ್ಯ ಕಷ್ಟದಾಯಕವಾಗಿರುತ್ತದೆ. ಇವರ ವಯಸ್ಸಿನ ೧೯, ೨೭ ನೆಯ ವರ್ಷ ೩೦, ೩೮, ೪೫, ಭಾಗ್ಯೋದಯಕಾಲ. ಮೀನ ರಾಶಿಯು, ಲಗ್ನದಲ್ಲಿ ಮಂಗಳ-ಶನಿ, ಮಂಗಳ-ರಾಹು, ಮಂಗಳ-ಕೇತು, ಮಂಗಳ-ಶುಕ್ರ ಇದ್ದರೆ ರಕ್ತ ಹೀನತೆ ಹಾಗೂ ಕ್ಷಯರೋಗದ ಭೀತಿ ಇರುತ್ತದೆ.

## ಲಗ್ನದಲ್ಲಿ ಬುಧ

ಬುಧನು ಯಾವಾಗಲೂ ರವಿಯೊಂದಿಗ ಇರುವದರಿಂದ ವಿಶೇಷವಾಗಿ ಪರಿಣಾಮಕಾರಿಯಾಗಿರುವದಿಲ್ಲ. ಆದರೆ ಅದೇ ಬುಧನು ರವಿಯಿಂದ ಹತ್ತು ಅಂಶದಲ್ಲಿದ್ದರೆ ಅಥವಾ ಬುಧನೊಬ್ಬನೇ ಲಗ್ನದಲ್ಲಿದ್ದು ರವಿಯು ದ್ವಿತೀಯ ಅಥವಾ ದ್ವಾದಶದಲ್ಲಿದ್ದ ಸ್ತ್ರೀಯರು ಕಪ್ಪಾಗಿದ್ದು ಕುಳ್ಳರಾಗಿ ಮತ್ತು ಕುರೂಪಿಯಾಗಿಯೂ ಇರುವರು. ಇಂಥವರು ನಗುತ್ತ ವಾತ ನಾಡುವ ಸ್ವಭಾವದವರು. ಇವರ ಸ್ವಭಾವ ಮೃದುವಾಗಿದ್ದು ಬಹಳ ಮಾತನಾಡುವದರಿಂದ ಎಲ್ಲರೊಡನೆ ಹೊಂದಿಕೊಂಡು ನಡೆಯುತ್ತಾರೆ.

ಇಂಥ ಸ್ತ್ರೀಯರು ತಮ್ಮ ನಿಜವಾದ ವಯಸ್ಸಿಗಿಂತ ಕಡಿಮೆ ವಯಸ್ಸಿನವರಂತೆ ಕಾಣುತ್ತಾರೆ. ಇವರು ಬಹಳ ಬುದ್ಧಿವಂತರಾಗಿರುತ್ತಾರೆ. ಬುಧ-ಶುಕ್ರ, ಬುಧ-ಚಂದ್ರ, ಬುಧ-ಗುರು ಇವರ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ಸಾಹಿತ್ಯದಲ್ಲಿಯೂ ಭಾಷಣ ಕಲೆಯಲ್ಲಿಯೂ ಸಂಗೀತದಲ್ಲಿಯೂ ಪ್ರಾವಿಣ್ಯತೆ ಪಡೆದಿರುತ್ತಾರೆ. ಬುಧ ಗುರುಗಳ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ಬುದ್ಧಿವಂತರಿದ್ದು ಮಿತಭಾಷಿಗಳಾಗಿರುತ್ತಾರೆ. ಬುಧ-ಶನಿಯರ ಯುತಿಯು ಲಗ್ನದಲ್ಲಿದ್ದರೆ ಕುಳ್ಳತನವನ್ನು ಸೂಚಿಸುತ್ತದೆ. ಕರ್ಕ, ಸಿಂಹ, ಮೇಷ, ವೃಶ್ಚಿಕದಲ್ಲಿದ್ದರೆ ಅಶುಭದಾಯಕವು. ಇಂಥ ಸ್ತ್ರೀಯರು ಸುಳ್ಳು ಹೇಳುವದರಲ್ಲಿಯೂ ಬೇರೆಯವರ ಹಣ ಅಪಹರಿಸುವದರಲ್ಲಿಯೂ, ಕೃಪಣತನದಲ್ಲಿಯೂ ನಿಪುಣರಾಗಿರುತ್ತಾರೆ.

## ಲಗ್ನದಲ್ಲಿ ಗುರು

ಗುರು ತನುಸ್ಥಾನದಲ್ಲಿರುವದು ಅತ್ಯುತ್ತಮವು. ಯಾವದೇ ರಾಶಿಯಲ್ಲಿದ್ದರೂ ಉತ್ತಮವು. ಅದರಲ್ಲಿಯೂ ಜಲರಾಶಿ ಹಾಗೂ ವಾಯುರಾಶಿಯಲ್ಲಿದ್ದುದಾದರೆ ಸರ್ವೋತ್ಕೃಷ್ಟವು. ಗುರು ಅಗ್ನಿರಾಶಿಯಲ್ಲಿದ್ದ ಸ್ತ್ರೀಯರಿಗೆ ಸಂತಾನದ ಅಭಾವವಿರುತ್ತದೆ. ಆದರೆ ಅವರು ಸಾರ್ವಜನಿಕ ಕಾರ್ಯದಲ್ಲಿ ಪ್ರಾವಿಣ್ಯತೆ ಪಡೆದಿರುತ್ತಾರೆ. ವಾಯುರಾಶಿಯಲ್ಲಿದ್ದ ಗುರು ವಿದ್ಯೆ-ಬುದ್ಧಿಗಳಿಗೆ ಅನುಕೂಲನಾಗಿರುತ್ತಾನೆ. ಇಂಥ ಸ್ತ್ರೀಯರು ಉಚ್ಚ ಶಿಕ್ಷಣ ಹೊಂದುವರಲ್ಲದೆ ಪ್ರೊಫೆಸರ, ಟೀಚರ ಮೊದಲಾದ ಕೆಲಸಗಳಿಗೆ ಯೋಗ್ಯರಿರುವರು. ಪೃಥ್ವಿರಾಶಿಯಲ್ಲಿದ್ದ ಗುರು ಸಂಸಾರ ದಕ್ಷತೆಯನ್ನ ತೋರಿಸುತ್ತಾನೆ. ಕನ್ಯಾರಾಶಿಯಲ್ಲಿ ಗುರು ಇದ್ದರಂತೂ ಆ ಸ್ತ್ರೀಯರು ತಮ್ಮ ಸಂಸಾರದಲ್ಲಿಯೇ ತಲ್ಲೀನನಾಗಿರುತ್ತಾರೆ. ಮಕರರಾಶಿಯು ಲಗ್ನದಲ್ಲಿದ್ದ ಗುರು ಗಣಿತದಲ್ಲಿ ಪ್ರಾವಿಣ್ಯತೆ, ವ್ಯವಹಾರ ಕುಶಲತೆಯನ್ನೂ, ಧಾರ್ಮಿಕ ಶ್ರದ್ಧೆಗಳಿಗಾಗಿ ಘೋರ, ಉಪವಾಸ ವನವಾಸಾದಿಗಳನ್ನು ಸೂಚಿಸುತ್ತಾನೆ. ಕುಂಭರಾಶಿಯು ಲಗ್ನದಲ್ಲಿದ್ದ ಗುರು ಬುದ್ಧಿವಂತಿಕೆಯನ್ನು ಕೊಡುತ್ತಾನೆ. ಆದರೆ ಇಂಥ ಸ್ತ್ರೀಯರು ಸಾದಾ ಜೀವನವನ್ನು ಅನುಸರಿಸುತ್ತಾರೆ. ಮೀನರಾಶಿ ಲಗ್ನದಲ್ಲಿದ್ದ ಗುರು ಇದ್ದ ಸ್ತ್ರೀಯರು ಭಾಗ್ಯಶಾಲಿಗಳಾಗುತ್ತಾರೆ. ಹಾಗೂ ಪತಿಕ

ಪುಬಿದ ಕಡೆಗೆ ಇವರ ಒಲವು ಅಧಿಕವಾಗಿರುತ್ತದೆ. ಇವರು ಆಲಸಿಗಳಿದ್ದು ಯಾವಾಗಲೂ ನೀರಿನಲ್ಲಿಯೇ ಕಾಲಹರಣಮಾಡುತ್ತಾರೆ. ವೃಶ್ಚಿಕರಾಶಿಯ ಲಗ್ನದಲ್ಲಿ ಗುರು ಇದ್ದ ಸ್ತ್ರೀಯರು ಸಾಹಸಿಗಳೂ ಚಂಚಲ ಸ್ವಭಾವದವರೂ ಇದ್ದು ಶ್ರೀಮಂತರ ಮನೆಯಲ್ಲಿಯೇ ಇವರ ಜನನವಾಗುತ್ತದೆ. ವೃಷಭ ಹಾಗೂ ತುಲಾರಾಶಿಯಲ್ಲಿ ಜನಿಸಿದ ಸ್ತ್ರೀಯರು ವಿಲಾಸಿಗಳೂ ವಿನಯ ಸಂಪನ್ನರೂ ಸಂಚಾರಿಗಳೂ ಇರುತ್ತಾರೆ ಗುರು-ಚಂದ್ರ, ಗುರು-ಶುಕ್ರರು ಲಗ್ನದಲ್ಲಿ ಇದ್ದ ಸ್ತ್ರೀಯರು ಭಾಗ್ಯಶಾಲಿಗಳಿರುತ್ತಾರೆ. ಅಗ್ನಿರಾಶಿಯ ಲಗ್ನದಲ್ಲಿ ಗುರು-ಶನಿಯರ ಯುತಿ ಇದ್ದ ಸ್ತ್ರೀಯರಿಗೆ ಪುತ್ರಸಂತತಿಯ ಅಭಾವವಿರುತ್ತದೆ. ಆದರೆ ಅದೇ ಯುತಿಯು ಒಂದು, ಐದು, ಒಂಬತ್ತು, ಹನ್ನೊಂದು ಆದರೆ ಅದೇ ಯುತಿಯು ಬಂಜೆತನವನ್ನು ಸೂಚಿಸುತ್ತದೆ. ಗುರು-ರಾಹು ವಿನ ಯುತಿ ಸ್ತ್ರೀಯರ ಬುದ್ಧಿವಂತಿಕೆಗಾಗಿ, ಕರ್ತವ್ಯದಕ್ಷತೆಗಾಗಿ ಉತ್ತಮ ವಿರುತ್ತದೆ. ಇದೇ ಯುತಿಯು ಸಮರಾಶಿಯಲ್ಲಿದ್ದರೆ ಭಾಗ್ಯಶಾಲಿಗಳೂ ಕೋಮಲ ಹೃದಯದವರೂ ಇರುತ್ತಾರೆ. ಆದರೆ ಇದೇ ಯುತಿಯು ಪುರುಷರಾಶಿಯಲ್ಲಿ ಆದರೆ ಇಂಥವರ ವಿವಾಹವು ಶೀಘ್ರವಾಗಿ ಆಗದು. ಪುರುಷ ರಾಶಿಯಲ್ಲಿ ಗುರು-ರಾಹುವಿನ ಯುತಿಯು ಲಗ್ನದಲ್ಲಿದ್ದುದು ಅಶುಭ ವೇನೋ ನಿಜ ಆದರೆ ಇಂಥ ಸ್ತ್ರೀಯರು ಪುರುಷರಂತೆ ಧಿಟ್ಟರೂ ಸಾಹಸಿಗಳೂ ಇದ್ದು, ಸಾರ್ವಜನಿಕ ಕಾರ್ಯದಲ್ಲಿ ಯಶಸ್ಸನ್ನು ಪಡೆಯುತ್ತಾರೆ. ಹಾಗೂ ಸ್ವಾವಲಂಬನದಿಂದ ಧನವನ್ನು ಅರ್ಜಿಸುತ್ತಾರೆ. ಗುರು-ಕೇತುವಿನ ಯುತಿಯು ಲಗ್ನದಲ್ಲಿದ್ದರೆ ಆ ಸ್ತ್ರೀಯ ಬಣ್ಣ ಬೇಕಾದಷ್ಟು ಗೌರವಾಗಿದ್ದರೂ ಅಂಗಾಂಗ ಗಳಲ್ಲಿ ದೋಷವಿರುತ್ತದೆ. ಗುರು ತನುಸ್ಥಾನದಲ್ಲಿರುವದು ಬುದ್ಧಿವಂತಿಕೆ ಹಾಗೂ ಭಾಗ್ಯದ ದೃಷ್ಟಿಯಿಂದ ಒಳ್ಳೆಯದು.

ಶುಕ್ರ:— ಸ್ತ್ರೀಯರ ಕುಂಡಲಿಯಲ್ಲಿ ಶುಕ್ರನು ಲಗ್ನದಲ್ಲಿರುವದು ಅತ್ಯುತ್ತಮವು. ಇಂಥ ಸ್ತ್ರೀಯರು ನೈಸರ್ಗಿಕವಾಗಿಯೇ ರೂಪವತಿಯ ರಾಗಿರುತ್ತಾರೆ. ನೀಳವಾದ ಮೂಗು, ಕಾಂತಿಯುಕ್ತ ಕಣ್ಣು, ಶೀರವಾದ ಧ್ವನಿ ಇದ್ದು, ಸ್ತ್ರೀಯರ ಹಲ್ಲುಗಳು ದಾಳಿಂಬರಿ ಬೀಜದಂತಿದ್ದು ಪಜ್ಜೆಗಳು ಸಾಲಾಗಿರುತ್ತವೆ. ಆದರೆ ಅದೇ ಶುಕ್ರನು ವೃಷಭ, ತುಲಾ, ಮಿಥುನ ಈ ರಾಶಿ ಯವನಾಗಿದ್ದು, ಲಗ್ನದಲ್ಲಿದ್ದರೆ ಸೌಂದರ್ಯ ದೃಷ್ಟಿಯಿಂದ ಅತ್ಯುತ್ತಮವು.

ಅದೇ ಶುಕ್ರನು ಚಂದ್ರನೊಂದಿಗೆ ಲಗ್ನದಲ್ಲಿದ್ದರೆ ಸೌಂದರ್ಯದ ದೃಷ್ಟಿಯಿಂದ ಒಳ್ಳೆಯದು ಇಂಥ ಸ್ತ್ರೀಯರು ಸೌಂದರ್ಯದಲ್ಲಿ ರತಿದೇವಿಯನ್ನು ವಿಡಂಬಿಸಿದವರಂತಿರುತ್ತಾರೆ. ವಿಶೇಷವಾಗಿ ಶುಕ್ರ-ಚಂದ್ರರ ಯುತಿಯು ವೃಷಭ, ಕರ್ಕ, ತುಲಾ, ಕನ್ಯಾ, ಮಿಥುನ, ಮೀನ ಈ ರಾಶಿಯ ಲಗ್ನದಲ್ಲಿದ್ದರಂತೂ ರೂಪವಂತರೂ ಕಲಾವಂತರೂ ಇರುತ್ತಾರೆ. ಶುಕ್ರ-ಚಂದ್ರ, ಶುಕ್ರ-ಗುರು, ಗುರು-ಚಂದ್ರ ಈ ಜೋಡಿಗಳು ಲಗ್ನದಲ್ಲಿದ್ದರೆ ಸ್ತ್ರೀಯರ ರೂಪದ ಘನತೆಯನ್ನು ತೋರಿಸುತ್ತವೆ. ಹಾಗೂ ಈ ಜೋಡಿಗಳು ವಾಯುರಾಶಿಯಲ್ಲಿದ್ದರಂತೂ ಅತ್ಯುತ್ತಮವು. ತದನಂತರ ಪೃಥ್ವಿ ರಾಶಿಗಳು. ಅಗ್ನಿರಾಶಿಯಲ್ಲಿದ್ದ ಶುಕ್ರನು ಆಕರ್ಷಕನಾಗಲಾರನು. ಜಲ ರಾಶಿಯಲ್ಲಿದ್ದ ಶುಕ್ರನು ಸ್ತ್ರೀಯರಲ್ಲಿ ಕಾಂತಿಯ ಅಭಾವವನ್ನು ಸೂಚಿಸುತ್ತಾನೆ. ಮೀನರಾಶಿಯ ಶುಕ್ರನು ವೃಷಭ, ತುಲಾ ರಾಶಿಯ ಚಂದ್ರನಂತೆ ಕಾಂತಿಯನ್ನೂ, ಆಕರ್ಷಣೆಯನ್ನೂ, ತೇಜಸ್ಸನ್ನೂ ಕೊಡಲಾರನು. ಮೀನ ರಾಶಿಯಲ್ಲಿಯ ಶುಕ್ರನು ಶ್ರೀಮಂತಿಕೆಯ ಹೆಚ್ಚಳವನ್ನು ತೋರಿಸುತ್ತಾನೆ. ಮಿಥುನ ರಾಶಿಯ ಲಗ್ನದಲ್ಲಿ ಶುಕ್ರನಿದ್ದ ಸ್ತ್ರೀಯರು ವಿದ್ಯಾವಂತರೂ, ಕಲಾವಿದರೂ, ಸಾಹಿತಿಗಳೂ. ಹಾಸ್ಯಪಟುಗಳೂ ರೂಪವತಿಯರೂ ಇರುತ್ತಾರೆ. ಇವರು ಐಹಿಕ ಸುಖದಲ್ಲಿ ಮುಗ್ನರಾಗಿರುತ್ತಾರೆ. ಕರ್ಕ ರಾಶಿಯ ಲಗ್ನದಲ್ಲಿದ್ದ ಶುಕ್ರನು ಅಲಂಕಾರ ಪ್ರಿಯರನ್ನಾಗಿ, ಪ್ರವಾಸಪ್ರಿಯರನ್ನಾಗಿ ಮಾಡುತ್ತಾನೆ. ಇಂಥ ಸ್ತ್ರೀಯರು ತೆಳ್ಳಗಾಗಿಯೂ ವಿಲಾಸಪ್ರಿಯರಾಗಿರುತ್ತಾರೆ. ಸಿಂಹರಾಶಿಯ ಶುಕ್ರನು ತನುಸ್ಥಾನದಲ್ಲಿದ್ದ ಸ್ತ್ರೀಯರು ಸಿಡುಕು ಸ್ವಭಾವದವರೂ ಸಾಹಸಿಗಳೂ ಹಟವಾದಿಗಳೂ ಇದ್ದು. ಮಧುರ ಭಾಷಣದಿಂದ ಸ್ವಕಾರ್ಯ ಸಿದ್ಧಿಸುವವರೂ ಇರುತ್ತಾರೆ. ಈ ರಾಶಿಯ ಕನ್ಯೆಯರನ್ನು ಓಲೈಸುವದು ಬಿಸಿಲುಗುದುರೆಯ ಬೆನ್ನು ಹತ್ತಿದಂತೆ. ಕನ್ಯಾರಾಶಿಯ ಲಗ್ನದಲ್ಲಿದ್ದ ಶುಕ್ರನು ನೀಚರಾಶಿಯವನಾಗಿದ್ದರೂ ಪೃಥ್ವಿ ರಾಶಿಯವನಾಗಿದ್ದು ಕಾರಣ ಈ ಸ್ತ್ರೀಯರು ಸಂಸಾರದಕ್ಷರು ವ್ಯಾಪಾರ ಉದ್ಯೋಗದಲ್ಲಿ ಪ್ರವೀಣರು ಇರುತ್ತಾರೆ. ಇವರಿಗೆ ವೈವಾಹಿಕ ಸುಖ ಕಡಿಮೆ. ವೃಶ್ಚಿಕರಾಶಿಯ ಲಗ್ನದಲ್ಲಿ ಶುಕ್ರನಿದ್ದ ಸ್ತ್ರೀಯರು ರೂಪದಲ್ಲಿ ಉತ್ತಮರಿದ್ದು ಸ್ಥೂಲದೇಹದವರಿರುತ್ತಾರೆ. ಪತಿಯ ಮೇಲೆ ಹಾಗೂ

ಇತರರ ಮೇಲೆ ಸಹ ವರ್ಚಸ್ಸನ್ನು ಬೀರಬಲ್ಲವರಿರುತ್ತಾರೆ. ವೃಶ್ಚಿಕ ಲಗ್ನದಲ್ಲಿಯ ಶುಕ್ರ-ಮಂಗಳ, ಶುಕ್ರ-ರಾಹು ಈ ಜೋಡಿಗಳಿದ್ದರೆ ಸ್ತ್ರೀಯರು ವ್ಯಭಿಚಾರಿಗಳಿರುತ್ತಾರೆ. ಕರ್ಕ, ವೃಶ್ಚಿಕ, ಮೀನ ಈ ರಾಶಿಗಳಲ್ಲಿಯ ಶುಕ್ರನು ಶನಿ, ಮಂಗಳ, ರಾಹು ಮುಂತಾದ ಪಾಪಗ್ರಹಗಳ ಜೊತೆಗೆ ಇದ್ದರೆ ಸ್ತ್ರೀಯರು ಉಷ್ಣತೆಯ ರೋಗದಿಂದ ಬಳಲುತ್ತಾರೆ. ಜಲರಾಶಿಯ ಶುಕ್ರನು ಲಗ್ನದಲ್ಲಿರುವದು ಸ್ತ್ರೀಯರ ನೈತಿಕ ಜೀವನಕ್ಕೆ ಅಶುಭದಾಯಕನು. ಹಾಗೂ ಅವರು ತವರುಮನೆಯಲ್ಲಿಯೇ ಇರಬೇಕಾದ ಪ್ರಸಂಗ ಮೇಲಿಂದಮೇಲೆ ಬರುತ್ತದೆ. ಧನು ರಾಶಿಯ ಶುಕ್ರನು ಲಗ್ನದಲ್ಲಿದ್ದರೆ ಕಾಮವಾಸನೆಯು ಕಡಿಮೆಯಿರತ್ತದೆ. ಇಂಥ ಸ್ತ್ರೀಯರಿಗೆ ವಿವಾಹವಾಗಬೇಕೆಂದೆನಿಸುವದಿಲ್ಲ, ಆದ್ದರಿಂದ ಆಜನ್ಮಕುಮಾರಿಯಾಗಿಯೇ ಉಳಿಯಬಹುದು. ಇವರು ಶರೀರದಿಂದ ಸದೃಢರಿದ್ದು ಸರಕಾರಿ ಕೆಲಸದಲ್ಲಿ ತೊಡಗಿದವರಾಗಿರುತ್ತಾರೆ. ಧನುರಾಶಿಯ ಶುಕ್ರನು ಸ್ತ್ರೀಯರನ್ನು ಸಾಹಿತಿಗಳನ್ನಾಗಿಯೂ, ಕವಿಗಳನ್ನಾಗಿಯೂ ಮಾಡುತ್ತಾನೆ. ಧನುರಾಶಿಯ ಶುಕ್ರನೊಂದಿಗೆ ಮಂಗಳನಿದ್ದರೆ ಡಾಕ್ಟರ, ನರ್ಸ, ವಕೀಲ ಮುಂತಾದ ಸ್ವಾವಲಂಬನ ಕೆಲಸಗಳನ್ನು ಮಾಡಿ ಧನಾರ್ಜನೆಯನ್ನು ಮಾಡುತ್ತಾರೆ. ಧನುರಾಶಿಯ ಶುಕ್ರನು ಗುರುವಿನೊಂದಿಗಿದ್ದರೆ ಟೀಚರ್, ಪ್ರೊಫೆಸರ್, ಮಂತ್ರಿ, ರಾಯಭಾರಿ, ಅಧ್ಯಕ್ಷ ಮುಂತಾದ ಕೆಲಸಗಳಲ್ಲಿ ಪ್ರವೀಣರಾಗಿರುತ್ತಾರೆ. ಮಕರರಾಶಿಯ ಲಗ್ನದಲ್ಲಿ ಶುಕ್ರನಿದ್ದ ಸ್ತ್ರೀಯರು ವಿನಯಶೀಲರು, ದೇವ ಧರ್ಮ, ದಾನದಲ್ಲಿ ಶ್ರದ್ಧೆಯುಳ್ಳವರೂ ಸದ್ಗುಣಗಳು ಇದ್ದು ಪತಿಯೊಂದಿಗೆ ಉತ್ತಮರೀತಿಯಿಂದ ಹೊಂದಿಕೊಳ್ಳುವ ಸ್ವಭಾವದವರಿರುತ್ತಾರೆ. ಆದರೆ ಇವರ ರೂಪ ಸಾಧಾರಣವಾಗಿರುತ್ತದೆ ಕುಂಭ ರಾಶಿಯ ಲಗ್ನದಲ್ಲಿ ಶುಕ್ರನಿದ್ದ ಸ್ತ್ರೀಯರು ಬುದ್ಧಿವಂತರೂ ಗುಣವಂತರೂ ರೂಪವಂತರೂ ಇದ್ದು ಕೃಶದೇಹಿಗಳಾಗಿರುತ್ತಾರೆ. ಇವರು ವಿಲಾಸಿಗಳಾಗಿರದೇ ಸಾದಾ ಜೀವನದಲ್ಲಿಯೇ ಸಂತೃಪ್ತರಿರುತ್ತಾರೆ. ಕುಂಭರಾಶಿಯ ಲಗ್ನದಲ್ಲಿ ಶನಿ-ಶುಕ್ರರಿದ್ದರೆ ಸ್ತ್ರೀಯರು ಉದಾರಿಗಳಾಗಿರುತ್ತಾರೆ. ಮೀನರಾಶಿಯ ಲಗ್ನದಲ್ಲಿ ಶುಕ್ರನಿದ್ದ ಸ್ತ್ರೀಯರು ಆಗರ್ಭ ಶ್ರೀಮಂತರಿದ್ದು ಗರ್ವಿಷ್ಠರಾಗಿರುತ್ತಾರೆ ಇವರು ರೂಪವಂತರೂ ತಿಳುವಾದ ಎತ್ತರ ದೇಹವುಳ್ಳವರಿದ್ದು ಆಚಾರ

ವಿಚಾರ, ನೈತಿಕ ಜೀವನದಲ್ಲಿ ಶುದ್ಧರಿರುವದಿಲ್ಲ. ಇಂಥ ಸ್ತ್ರೀಯರು ವಿವಾಹವನ್ನು ಬೇಗ ಮಾಡಿಕೊಳ್ಳುವದೇ ಉತ್ತಮ. ವಿವಾಹದ ತರುವಾಯ ಪತಿಯ ಭಾಗ್ಯೋದಯವಾಗುತ್ತದೆ. ಇಂಥ ಸ್ತ್ರೀಯರು ಎಂಥ ಬಡವರ ಮನೆಯಲ್ಲಿ ಹುಟ್ಟಿದರೂ ಶ್ರೀಮಂತನ ಕೈ ಹಿಡಿಯುತ್ತಾರೆ.

ಚಂದ್ರ, ಬುಧ, ರವಿ, ಗುರು ಈ ಗ್ರಹಗಳೊಂದಿಗೆ ಶುಕ್ರನ ಯುತಿ ಇದ್ದರೆ ಉತ್ತಮವು. ಶುಕ್ರ-ರಾಹುವಿನ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ಕಲಾವಂತರೂ ಬುದ್ಧಿವಂತರೂ ಇದ್ದು ವಾಸನಾಪ್ರಿಯರೂ ಇರುತ್ತಾರೆ. ಇಂಥವರಿಗೆ ಉಚ್ಚವಾದ ಜೀವನ ಧ್ಯೇಯಗಳು ಇರುವದಿಲ್ಲ. ಶುಕ್ರ-ಕೇತುವಿನ ಯುತಿಯು ಲಗ್ನದಲ್ಲಿರುವದು ಸೌಂದರ್ಯಕ್ಕೆ ಹಿತಕಾರಿಯಲ್ಲ. ಆದರೆ ಇವರು ಶ್ರೀಮಂತರೂ ವಿದ್ಯಾವಂತರೂ ಇರುತ್ತಾರೆ. ಶುಕ್ರ-ಮಂಗಳ ಯುತಿಯು ಲಗ್ನದಲ್ಲಿರುವದು ಸ್ತ್ರೀಯರ ನೈತಿಕ ಸ್ಥಿತಿಗೆ ಹಾನಿಕಾರಕವು. ಇಂಥ ಸ್ತ್ರೀಯರು ಪ್ರಣಯ ವಿವಾಹವನ್ನೇ ವಿಶೇಷವಾಗಿ ಮಾಡಿಕೊಳ್ಳುತ್ತಾರೆ. ಶುಕ್ರ-ಚಂದ್ರರ ಯುತಿಯು ಸಹ ಹೀಗೆಯೇ ಇರುತ್ತದೆ ಆದರೆ ಇಂಥವರು ಸೌಂದರ್ಯ ಪ್ರಿಯರಾಗಿರುತ್ತಾರೆ. ಶುಕ್ರ-ಶನಿಯರ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ನೀತಿವಂತರೂ, ತತ್ತ್ವಜ್ಞಾನಿಗಳೂ, ಧಾರ್ಮಿಕರೂ ಇರುತ್ತಾರೆ.

ಶನಿ :- ಸ್ತ್ರೀಯರ ಕುಂಡಲಿಯಲ್ಲಿ ತನುಸ್ಥಾನದಲ್ಲಿ ಶನಿ ಇರುವದು ಅಶುಭವಾಗಿದ್ದರೂ ಉದ್ಯೋಗ, ಶೀಲ, ಮುತ್ಸದ್ದಿತನ, ಕರ್ತೃತ್ವ, ನ್ಯಾಯನಿಷ್ಠುರತೆ, ಧಾರ್ಮಿಕ ಪ್ರವೃತ್ತಿ ಮುಂತಾದ ಉತ್ತಮ ಗುಣಗಳನ್ನು ಕೊಡುತ್ತಾನೆ. ವಾಯು ಹಾಗೂ ಪೃಥ್ವಿ ರಾಶಿಯಲ್ಲಿ ಶನಿಯಿರುವದು ಅತ್ಯುತ್ತಮವು. ಹೀಗಿದ್ದ ಸ್ತ್ರೀಯರಲ್ಲಿ ಆತ್ಮಸಂಯಮ ಸತತೋದ್ಯೋಗ ಕರ್ತವ್ಯದಕ್ಷತೆ, ಈ ಗುಣಗಳನ್ನು ಪಡೆದವರಾಗಿದ್ದು ದೇವದ್ವಿಜಭಕ್ತಿಯುಳ್ಳವರು ಆಗಿರುತ್ತಾರೆ. ಅಗ್ನಿ ಹಾಗೂ ಜಲರಾಶಿಯಲ್ಲಿರುವ ಶನಿಯು ಅಶುಭದಾಯಕನು. ಇಂಥ ಸ್ತ್ರೀಯರು ಕಠೋರ ಹೃದಯದವರೂ ಸಿಡುಕು ಸ್ವಭಾವದವರೂ ನಾಸ್ತಿಕರೂ ಆಗಿರುತ್ತಾರೆ. ಲಗ್ನದಲ್ಲಿ ಶನಿಯಿದ್ದ ಸ್ತ್ರೀಯರ ಜೀವನವು ಸುಖದುಃಖ ಸಮ್ಮಿಶ್ರವಾಗುತ್ತದೆ. ಯುವ ಕಾಲಕ್ಕೆ

ಗಂಡಾಂತರ ಬರುತ್ತದೆಂಬುದರ ನಿಯಮವೇ ಇರುವದಿಲ್ಲ. ಇಂದವರಿಗೆ ಪತಿ ಸೌಖ್ಯ ಸಹ ಕಡಿಮೆ. ಮುಪ್ಪಿನ ಕಾಲಕ್ಕಂತೂ ಬಹಳ ದುಃಖಮಯ ವಾಗಿ ಕಾಲ ಕಳೆಯಬೇಕಾಗುತ್ತದೆ. ಶನಿಯು ಲಗ್ನದಲ್ಲಿದ್ದ ಸ್ತ್ರೀಯರು ಬಾಲ್ಯ ದಲ್ಲಿ ಬಹಳೆ ಪುಕ್ಕರಾಗಿರುತ್ತಾರೆ. ಚಂದ್ರ-ಶನಿಯರ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ಸ್ವಚ್ಛತೆಯ ಕಡೆಗೆ ಲಕ್ಷ್ಯವನ್ನು ತೋರುವದಿಲ್ಲ. ಇವರು ಅಶಕ್ತ ರಾಗಿರುತ್ತಾರೆ. ಕಲಿತವರಾಗಿದ್ದರೂ ಕಲಿಯದವರಂತೆ ಇರುತ್ತಾರೆ. ಕರ್ಕ, ವೃಶ್ಚಿಕ, ಮೀನ ಈ ರಾಶಿಗಳು ಲಗ್ನದಲ್ಲಿ ಚಂದ್ರ-ಶನಿಯರ ಯುತಿಯಿದ್ದ ಸ್ತ್ರೀಯರ ಹಲ್ಲುಗಳು ಚೆನ್ನಾಗಿರುವದಿಲ್ಲ. ಹಲ್ಲುರೋಗ ಬರುವ ಪ್ರಸಂಗ ವಿರುತ್ತದೆ. ಇಂಥ ಸ್ತ್ರೀಯರ ಪಚನ ಶಕ್ತಿಯೂ ಕಡಿಮೆಯಾಗಿರುತ್ತದೆ. ಇಂಥ ಸ್ತ್ರೀಯರ ಹಲ್ಲುಗಳ ಬಗ್ಗೆ ವಿಶೇಷ ಲಕ್ಷವನ್ನೀಯಬೇಕು. ರವಿ-ಶನಿ ಯರ ಯುತಿಯು ಚಂದ್ರ-ಶನಿಯರಂತೆ ಆರೋಗ್ಯಕ್ಕೆ ಹಾನಿಕಾರಕ ಇರುವದಿಲ್ಲ. ಆದರೆ ಇಂಥ ಸ್ತ್ರೀಯರ ದುಡಿತಕ್ಕೆ ತಕ್ಕ ಯಶವನ್ನು ಸಂಪಾದಿಸುವದಿಲ್ಲ. ರವಿ-ಶನಿಯರ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರ ವೈವಾಹಿಕ ಜೀವನವು ಸುಗುಮವಾಗಿ ಸಾಗುವದಿಲ್ಲ. ಶನಿ ಮಂಗಳರ ಯುತಿಯು ಲಗ್ನದಲ್ಲಿರುವುದು ಆರೋಗ್ಯದ ದೃಷ್ಟಿಯಿಂದಲೂ ಸಾಂಪತ್ತಿಕ ದೃಷ್ಟಿಯಿಂದಲೂ ತೊಂದರೆ ದಾಯಕ. ಇವರು ಅನೇಕ ಗಂಡಾಂತರಗಳನ್ನು ಎದುರಿಸಬೇಕಾದ ಇಂಥ ಸ್ತ್ರೀಯರ ವಿವಾಹವು ಕೂಡ ಬೇಗ ಆಗುವದಿಲ್ಲ. ಕೆಲವರಂತೂ ಆಜನ್ಮ ಕುಮಾರಿಯಾಗಿಯೇ ಉಳಿಯಬಹುದು. ಶನಿ-ಮಂಗಳರ ಯುತಿ ವೈವಾಹಿಕ ಜೀವನಕ್ಕೆ ತೊಂದರೆ ಕೊಡುವಂತಹುದು. ಶನಿ-ಬುಧರ ಯುತಿಯು ಲಗ್ನ ದಲ್ಲಿರುವದು ಬುದ್ಧಿಮತ್ತೆ ಮತ್ತೂ ಕೌಶಲ್ಯವನ್ನು ತೋರಿಸುತ್ತದೆ. ಶನಿ ಗುರುಗಳ ಯುತಿಯು ಲಗ್ನದಲ್ಲಿದ್ದ ಸ್ತ್ರೀಯರು ಬುದ್ಧಿವಂತರೂ, ವಿದ್ಯಾ ವಂತರೂ ಇದ್ದು ಗರ್ವಿಷ್ಠರೂ ಅಭಿಮಾನಿಗಳೂ ಇರುತ್ತಾರೆ. ಆದರೆ ಇಂಥವರಿಗೆ ಸಂತತಿ ಸುಖ ಕಡಿಮೆ. ಶನಿಕೇತು ಲಗ್ನದಲ್ಲಿದ್ದ ಸ್ತ್ರೀಯರಿಗೆ ಭೂತ-ಪಿಶಾಚಿ ಮುಂತಾದವುಗಳ ಬಾಧೆಯಿರುತ್ತದೆ.

ರಾಹು :— ಸ್ತ್ರೀಯರ ಕುಂಡಲಿಯಲ್ಲಿ ರಾಹು ಲಗ್ನದಲ್ಲಿರುವದು ಕಡಿಮೆ ಎತ್ತರ ಪ್ರಮಾಣವನ್ನು ತೋರುತ್ತದೆ ಈ ಸ್ತ್ರೀಯರು ಸ್ವಚ್ಛಂದ

ಸ್ಥೂಲ ದೇಹದವರೂ ಸಾಹಸಿಗಳೂ ಸಹಿಷ್ಣುಗಳೂ ಇರುತ್ತಾರೆ. ವೃಷಭ, ಮಿಥುನ, ಕರ್ಕ, ಸಿಂಹ ಕನ್ಯಾ, ತುಲಾ. ಮಕರ ಈ ರಾಶಿಗಳಲ್ಲಿ ರಾಹು ಇದ್ದ ಸ್ತ್ರೀಯರು ಬಿಳ್ಳರೂ ಕಪ್ಪು ವರ್ಣದವರೂ ಇರುತ್ತಾರೆ. ಹಾಗೂ ಇಂಥ ಸ್ತ್ರೀಯರಿಗೆ ಸೌಂದರ್ಯ ಹೆಚ್ಚಿಸುವ ಕೃತ್ರಿಮ ಸಾಧನೆಗಳ ಉಪಯೋಗ ಗೊತ್ತಿರುವದಿಲ್ಲ. ಆದರೆ ಲಗ್ನದಲ್ಲಿ ರಾಹು ಇದ್ದ ಸ್ತ್ರೀಯರು ಮತ್ತು ಯಾವಾಗಲೂ ನಗುತ್ತಲೇ ಇರುತ್ತಾರೆ. ಮೇಷ, ಸಿಂಹ, ಧನು, ವೃಶ್ಚಿಕ ಈ ರಾಶಿಯ ಲಗ್ನದಲ್ಲಿ ರಾಹು ಇದ್ದ ಸ್ತ್ರೀಯರು ಧಿಟ್ಟರೂ, ಸಾಹಸಿಗಳೂ ಸ್ವಾವಲಂಬಿಗಳೂ ಆಗಿರುತ್ತಾರೆ. ವಾಹನಗಳನ್ನು ನಡೆಸುವದರಲ್ಲಿಯೂ ಸರ್ಕಸ ಮುಂತಾದವುಗಳಲ್ಲಿ ಕೆಲಸ ಮಾಡುವದರಲ್ಲಿಯೂ ಪ್ರವೀಣರು. ಇವರು ಸತತೋದ್ಯೋಗಿಗಳು ಕಷ್ಟಸಹಿಷ್ಣುಗಳು ಆಗಿರುತ್ತಾರೆ. ಕರ್ಕ, ಮೀನ, ರಾಶಿಯ ಲಗ್ನದಲ್ಲಿದ್ದ ಸ್ತ್ರೀಯರು ಪುಕ್ಕರಿರುತ್ತಾರೆ. ವೃಷಭ, ಕನ್ಯಾ, ಮಕರ, ರಾಶಿಯ ಲಗ್ನದಲ್ಲಿದ್ದ ರಾಹುಸ್ವಾಭಿಮಾನ ಹಾಗೂ ಭಾಗ್ಯ ವೃದ್ಧಿಯನ್ನು ಸೂಚಿಸುತ್ತಾನೆ. ವೃಶ್ಚಿಕ ರಾಶಿಯ ರಾಹು ಲಗ್ನದಲ್ಲಿ ಇರುವದು. ಸಂತಾನ ದೃಷ್ಟಿಯಿಂದ ಮಾರಕ ಆದರೆ ವಾತವಿಕಾರ ಪ್ರಕೃತಿಯನ್ನು ತೋರಿಸುತ್ತಾನೆ. ಯಾವದೇ ರಾಶಿಯ ಲಗ್ನದಲ್ಲಿ ರಾಹು ಇರುವದು ನಾಟ್ಯ ಕಲೆಯ ದೃಷ್ಟಿಯಿಂದ ಅನುಕೂಲ.

## ಕೇತು

ತನುಸ್ಥಾನದಲ್ಲಿ ಕೇತು ಇರುವದು ಆರೋಗ್ಯಕ್ಕೆ ಹಾನಿಕಾರಕವು ಹಾಗೂ ಅಂಗಹೀನತೆಯನ್ನೂ ತೋರಿಸುತ್ತದೆ. ಸಮರಾಶಿಯ ಕೇತು ಕೆಲಮಟ್ಟಿಗೆ ಶುಭಫಲವನ್ನೂ ಕೊಡುತ್ತಾನೆ. ಕೇತುವೊಬ್ಬನೇ ಲಗ್ನದಲ್ಲಿರುವದು ಸೌಂದರ್ಯಕ್ಕೆ ಹಾನಿಕಾರಕವು.

## ಭಾವೇಶನ ಫಲ

ಕುಂಡಲಿಯಲ್ಲಿ (ಜಾತಕದಲ್ಲಿ) ಹನ್ನೆರಡು ಸ್ಥಾನಗಳಿದ್ದು, ಒಂಭತ್ತು ಗ್ರಹಗಳ ಅಧಿಪತ್ಯದಲ್ಲಿರುತ್ತವೆ. ಸ್ಥಾನಾಧಿಪತಿಗಳು ತಮ್ಮ ಸ್ಥಾನದಲ್ಲಿ ಅನೇಕ ಇರಬಹುದು ಅಥವಾ ಇರಲಿಕ್ಕಿಲ್ಲ. ಅಥವಾ ಒಂದೇ ಸ್ಥಾನದಲ್ಲಿ ಅನೇಕ ಗ್ರಹಗಳೂ ಸಹ ಇರಬಹುದು ಆದುದರಿಂದ ಆಯಾ ಸ್ಥಾನಗಳ ಅಧಿಪತಿಗಳ

ಪರಿಣಾಮವನ್ನು ಹಾಗೂ ಬಲಾಬಲವನ್ನು ನೋಡಬೇಕು. ಈ ಕಾರಣದಿಂದ ಸ್ಥಾನದಲ್ಲಿರುವ ಗ್ರಹಗಳಿಗಿಂತ ಸ್ಥಾನಾಧಿಪತಿಯು ಹೆಚ್ಚು ಪರಿಣಾಮವನ್ನು ಕೊಡುತ್ತಾನೆ. ಉದಾಹರಣೆಗೆ ಧನೇಶನಾದ ಚಂದ್ರನು ( ಮಿಥುನ ಲಗ್ನದಲ್ಲಿ ) ವೃಶ್ಚಿಕದಲ್ಲಿದ್ದಾನೆಂದು ತಿಳಿಯಿರಿ. ಧನಸ್ಥಾನದಲ್ಲಿ ಶುಕ್ರನಂಥ ಗ್ರಹವಿದ್ದರೂ ಏನು ಉಪಯೋಗ? ಮನೆಯ ಯಜಮಾನನು ದಾರಿದ್ರ್ಯದಲ್ಲಿರುವಾಗ ಸಿರಿವಂತನಾದ ಬೀಗನು ಮನೆಗೆ ಬಂದರೆ ತಾನು ದಾರಿದ್ರ್ಯದಲ್ಲಿಯೇ ಸತ್ಕಾರ ಮಾಡಬೇಕಾಗುವದು. ಆದುದರಿಂದ ಸ್ಥಾನದಲ್ಲಿರುವ ಗ್ರಹಕ್ಕಿಂತ ಸ್ಥಾನಾಧೀಶನ ಬಲಾಬಲವನ್ನು ನೋಡಬೇಕು.

೧) ಲಗ್ನೇಶನು ಲಗ್ನದಲ್ಲಿದ್ದರೆ ಸ್ತ್ರೀಯರ ಆರೋಗ್ಯವು ಉತ್ತಮವಿದ್ದು ವಿವಾಹವು ಬೇಗ ಆಗುತ್ತದೆ. ಇಂಥ ಸ್ತ್ರೀಯರ ಸಾಂಪತ್ತಿಕ ಸ್ಥಿತಿ ಉತ್ತಮವಿದ್ದು ಗೃಹಕೃತ್ಯ, ಸ್ವಯಂಪಾಕ, ಶಿಶುಸಂಗೋಪನ ಮುಂತಾದ ಕೆಲಸಗಳಲ್ಲಿ ಜಾಣರಾಗಿರುತ್ತಾರೆ

೨) ಲಗ್ನೇಶನು ಧನಸ್ಥಾನದಲ್ಲಿ ಸ್ತ್ರೀಯರು . ತವರುಮನೆಯಿಂದ ಸಿರಿವಂತರಿರುತ್ತಾರೆ. ಜಲರಾಶಿಯ ಧನಸ್ಥಾನದಲ್ಲಿ ಲಗ್ನೇಶವಿದ್ದರಂತೂ ಆ ಸ್ತ್ರೀಯು ಸಾತ್ವಿಕಳಾಗಿರುತ್ತಾಳೆ.

೩) ಲಗ್ನೇಶನು ತೃತೀಯ ಸ್ಥಾನದಲ್ಲಿದ್ದ ಸ್ತ್ರೀಯರಿಗೆ ಬಂಧುಭಗಿನಿಯರ ಸೌಖ್ಯ ಸಿಗುತ್ತದೆ. ( ಶತ್ರುಕ್ಷೇತ್ರ ಇದ್ದರೆ ಸಿಗಲಿರದ. )

೪) ಲಗ್ನೇಶನು ಶುಭಗ್ರಹವಿದ್ದು ಚತುರ್ಥ ಸ್ಥಾನದಲ್ಲಿ ಬಲವಂತನಾಗಿದ್ದರೆ. ಮಾತೃಸೌಖ್ಯ ಸಂಪೂರ್ಣವಾಗಿ ಸಿಗುತ್ತದೆ. ಪಾಪಗ್ರಹವಿದ್ದರೆ ಸಿಗಲಾರದು.

೫) ಲಗ್ನೇಶನು ಶುಭಗ್ರಹವಿದ್ದು ಪಂಚಮ ಸ್ಥಾನದಲ್ಲಿದ್ದರೆ ಮಾತೃಸೌಖ್ಯ ಸಿಗುತ್ತದೆ. ಹಾಗೂ ಆ ಸ್ತ್ರೀಯು ವಿದ್ಯಾಸಂಪನ್ನಳೂ ಇರುತ್ತಾಳೆ.

೬) ಲಗ್ನೇಶನು ಷಷ್ಠಸ್ಥಾನದಲ್ಲಿದ್ದರೆ ಆರೋಗ್ಯಕ್ಕೆ ಹಾನಿಕಾರಕ ಹಾಗೂ ಆ ಸ್ತ್ರೀಯರಿಗೆ ಶತ್ರುಕಾಟ ಬಹಳ ಹಾಗೂ ಈ ಸ್ತ್ರೀಯರು ಕೃಪಣರಿರುತ್ತಾರೆ.

೭) ಲಗ್ನೇಶನು ಸಪ್ತಮಸ್ಥಾನದಲ್ಲಿದ್ದ ಸ್ತ್ರೀಯರ ವಿವಾಹವು ಬೇಗ ಆಗುವದಲ್ಲದೆ ಪತಿಸೌಖ್ಯವು ಸಿಗುತ್ತದೆ.

೮) ಲಗ್ನೇಶನು ಅಷ್ಟಮದಲ್ಲಿದ್ದರೆ ಆರೋಗ್ಯಕ್ಕೆ ಹಾನಿಕಾರಕವು.

೯) ಲಗ್ನೇಶನು ಭಾಗ್ಯದಲ್ಲಿದ್ದರೆ, ಆ ಸ್ತ್ರೀಯು ಕೀರ್ತಿವಂತಳೂ ಭಾಗ್ಯವಂತಳೂ ಇದ್ದು ಸಿರಿವಂತ ವರನ ಕೈ ಹಿಡಿಯುವಳು.

೧೦) ಲಗ್ನೇಶನು ದಶಮದಲ್ಲಿದ್ದ ಸ್ತ್ರೀಯರು ದೊಡ್ಡ ಅಧಿಕಾರಿಯ ತಾಯಿ ಅಥವಾ ಪತ್ನಿಯಾಗುತ್ತಾರೆ. ಇಂಥ ಸ್ತ್ರೀಯರಿಗೆ ತಂದೆಯ ಸೌಖ್ಯವು ಚೆನ್ನಾಗಿರುತ್ತದೆ.

೧೧) ಲಗ್ನೇಶನು ಲಾಭಸ್ಥಾನದಲ್ಲಿದ್ದರೆ ಅನೇಕ ತರಹದ ಸುಖ-ವನ್ನು ಅನುಭೋಗಿಸುವರು.

೧೨) ಲಗ್ನೇಶನು ದ್ವಾದಶಸ್ಥಾನದಲ್ಲಿದ್ದರೆ ಆ ಸ್ತ್ರೀಯು ದುಃಖ-ಮಯವಾಗಿ ಜೀವನಕಳೆಯುತ್ತಾಳೆ. ಲಗ್ನೇಶ ರವಿ, ಚಂದ್ರರಿದ್ದು ದ್ವಾದಶ-ಸ್ಥಾನದಲ್ಲಿದ್ದರೆ ನೇತ್ರಪೀಡೆಯು ಇರುತ್ತದೆ.

# ಧನಸ್ಥಾನ

ಧನಸ್ಥಾನ ಅಥವಾ ಕುಂಡಲಿಯ ದ್ವಿತೀಯ ಸ್ಥಾನದಿಂದ ಪಿತ್ರಾರ್ಜಿತ ಆಸ್ತಿ ಕೌಟುಂಬಿಕ ಸೌಖ್ಯ ಸಾಂಪತ್ತಿಕ ಯೋಗವಾಗಲಿ, ಭಾಷಾ ಕಲ್ಪ. ಬಿನ್ನಾಣ್ಣದ ಪದಾರ್ಥಗಳಲ್ಲಿರುವ ಅಭಿರುಚಿ, ಯಶಸ್ಸು ಮುಂತಾದ ಸಂಗತಿಗಳನ್ನು ಹೇಗೆ ನೋಡಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ.

ಈ ಸ್ಥಾನದಲ್ಲಿ ಜಲರಾಶಿಯಿದ್ದು ಧನೇಶನು ಉದಿತ ಗೋಲಾರ್ಧದಲ್ಲಿದ್ದರೆ, ಅಥವಾ ಧನೇಶನು ಉಚ್ಚ ಮೂಲ ತ್ರಿಕೋಣನಾಗಿ ಭಾಗ್ಯ, ಲಾಭದಲ್ಲಿದ್ದರೆ ಅಥವಾ ಧನಸ್ಥಾನದಲ್ಲಿ ಗುರು, ಶುಕ್ರ, ಚಂದ್ರರಿದ್ದರೆ ಇಂಥ ಸ್ತ್ರೀಯರು ಸಿರಿವಂತರಲ್ಲಿ ಹುಟ್ಟುತ್ತಾರೆ ಅಥವಾ ಸಿರಿವಂತನನ್ನು ಲಗ್ನವಾಗುತ್ತಾರೆ. ಧನೇಶನು ಪಾಪಗ್ರಹವಿದ್ದು ಉಚ್ಚ ಸ್ವಗೃಹ, ಮೂಲ-ತ್ರಿಕೋಣ-ದಲ್ಲಿದ್ದರೂ ಇಂಥ ಸ್ತ್ರೀಯರು ಸಿರಿವಂತರಿರುತ್ತಾರೆ. ಆದರೆ ಧನಸ್ಥಾನದಲ್ಲಿ ರಾಹು, ಶನಿ, ಕೇತು, ಈ ಯಾವುದೇ ಗ್ರಹವಿದ್ದರೂ ಅಥವಾ ಈ ಗ್ರಹಗಳು ಶುಭಗ್ರಹಗಳೊಂದಿಗೆ ಇದ್ದರೂ ಅವರುಮನೆಯ ಬಡತನ ಸೂಚಿಸುತ್ತದೆ. ದ್ವಿತಿಯಾಧೀಶನು ಶುಭಗ್ರಹವಿದ್ದು ಉಚ್ಚ, ಮೂಲತ್ರಿಕೋಣ, ಸ್ವಗೃಹವಿದ್ದರೆ ಸ್ತ್ರೀಯರು ಎಂಥ ಬಡತನದಲ್ಲಿ ಹುಟ್ಟಿದರೂ ಸಿರಿವಂತನ ಕೈ ಹಿಡಿಯುತ್ತಾರೆ.

ದ್ವಿತೀಯ ಸ್ಥಾನದಲ್ಲಿ ಒಂದು ಶುಭಗ್ರಹ ಇನ್ನೊಂದು ಅಶುಭಗ್ರಹ ಇದ್ದರೆ ಮಿಶ್ರಫಲ ದೊರೆಯುತ್ತದೆ. ಉದಾಹರಣೆ—' ಒಂದು ಜಾತಕದ ಧನಸ್ಥಾನದಲ್ಲಿ ಗುರು-ರಾಹು ಅಥವಾ ಶುಕ್ರ-ಶನಿ ಇದ್ದಾರೆಂದು ತಿಳಿಯಿರಿ. ಇಂಥ ಸ್ತ್ರೀಯರು ಕೆಲಕಾಲ ದಾರಿದ್ರ್ಯವನ್ನೂ ಕೆಲಕಾಲ ಐಶ್ವರ್ಯವನ್ನು ಭೋಗಿಸುವರು. ಶುಭಾಶುಭಗಳನ್ನು ಆಯಾ ವರ್ಷದ ಗೋಚರಿ ಗ್ರಹಗಳ ಪರಿಭ್ರಮಣದಿಂದ ಹೇಳಬೇಕಾಗುತ್ತದೆ.

ಸಾಂಪತ್ತಿಕ ಸ್ಥಿತಿಯ ಬಗ್ಗೆ ಹೇಳಬೇಕಾದರೆ ಧನಾಧೀಶ ಧನಸ್ಥಾನದಲ್ಲಿರುವ ಗ್ರಹಗಳು ಇವರ ಬಲಾಬಲದಿಂದ ಹೇಳಬೇಕು.

## ಧನಯೋಗ

(೧) ಧನಸ್ಥಾನದಲ್ಲಿ ಗುರು, ಶುಕ್ರ, ಚಂದ್ರರಲ್ಲೊಬ್ಬರಿದ್ದು ಧನಾಧೀಶನು ಉಚಿತ ಗೋಲಾರ್ಧದಲ್ಲಿದ್ದರೆ ಸಿರಿವಂತರಾಗಿರುತ್ತಾರೆ.

(೨) ಧನೇಶನು ಯಾವುದೇ ಗ್ರಹವಿದ್ದು ೩, ೮, ೧೨, ಈ ಸ್ಥಾನದಲ್ಲಿಂದ ಗುರು, ಶುಕ್ರರಿಂದ ನೋಡಲ್ಪಟ್ಟರೆ,

(೩) ಧನಸ್ಥಾನವು ಜಲರಾಶಿಯಿದ್ದು ೨-೩ ಶುಭಗ್ರಹಗಳಿದ್ದರೆ.

(೪) ಸಪ್ತಮಾಧೀಶನು ರವಿಯಿಂದ ದ್ವಿತೀಯ ಅಥವಾ ದಶಮದಲ್ಲಿ ಶುಭಗ್ರಹವಾಗಿದ್ದರೆ ಶ್ರೀಮಂತ ಮನೆಯವರಿರುತ್ತಾರೆ.

(೫) ಚತುರ್ಥದಲ್ಲಿ ಗುರು–ಚಂದ್ರ, ಶುಕ್ರ-ಚಂದ್ರ, ಗುರು-ಶುಕ್ರ ಬಲಾಢ್ಯರಾಗಿದ್ದರೆ ಪಿತ್ರಾರ್ಜಿತ ಆಸ್ತಿ ಸಿಗುತ್ತದೆ.

(೬) ೧, ೨, ೯, ೧೦, ೧೧ ಈ ಸ್ಥಾನದ ಅಧೀಶರು ಪರಸ್ಪರರ ಸ್ಥಾನದಲ್ಲಿದ್ದರೆ ಕೌಟುಂಬಿಕ ಸೌಖ್ಯ ಸಿಗುತ್ತದೆ.

## ದಾರಿದ್ರ್ಯಯೋಗ

(೧) ಶನಿಯಿಂದ ದ್ವಿತೀಯ ದ್ವಾದಶ ಸ್ಥಾನದಲ್ಲಿ ಕ್ರೂರ ಗ್ರಹಗಳು ಬಲವಂತರಾಗಿದ್ದರೆ.

(೨) ಧನೇಶನು ವ್ಯಯಸ್ಥಾನದಲ್ಲಿದ್ದರೆ.

(೩) ಧನೇಶನು ಅಸ್ತ, ನೀಚ, ಪಾಪಗ್ರಹಯುಕ್ತ, ಪಾಪಗ್ರಹ ಮಧ್ಯವಿದ್ದರೆ.

(೪) ಸಪ್ತಮದಲ್ಲಿ ಅಥವಾ ಲಗ್ನದಲ್ಲಿ ರಾಹು-ಶನಿ, ಶನಿ–ಮಂಗಳ ರವಿ–ಶನಿ ಇದ್ದರೆ ಅಥವಾ ಅನೇಕ ಪಾಪಗ್ರಹಗಳು ಸಪ್ತಮದಲ್ಲಿದ್ದರೆ.

(೫) ದ್ವಿತೀಯೇಶ, ಭಾಗ್ಯೇಶ, ಸಪ್ತಮೇಶ ಇವರು ನಿರ್ಬಲರಾಗಿದ್ದರೆ.

(೬) ಪಾಪ ಗ್ರಹಗಳು ಯಾವುದೇ ಸ್ಥಾನದಲ್ಲಿದ್ದರೂ.

(೭) ಧನಸ್ಥಾನದಲ್ಲಿ ಶನಿ ಅಥವಾ ರಾಹು, ಶನಿ-ರಾಹುಗಳಿದ್ದರೆ ದಾರಿದ್ರ್ಯಯೋಗವೆಂದೆನ್ನಬಹುದು.

ಶ್ರೀಮಂತಯೋಗ

(೧) ಸ್ತ್ರೀಯ ಕುಂಡಲಿಯಲ್ಲಿ ಪೂರ್ಣ ಚಂದ್ರನು ಗುರುವಿನೊಂದಿಗೆ ಕರ್ಕ-ವೃಷಭದಲ್ಲಿದ್ದು ದ್ವಿತೀಯ, ಲಗ್ನ, ಸಪ್ತಮ, ಭಾಗ್ಯ ಈ ಯಾವುದೇ ಸ್ಥಾನಗಳಲ್ಲಿದ್ದರೆ ಅಥವಾ ಪೂರ್ಣ ಚಂದ್ರನು ಶುಕ್ರನೊಂದಿಗೆ ವೃಷಭ, ತುಲಾ, ಮೀನದಲ್ಲಿದ್ದು ೧, ೨, ೭, ೯ ಸ್ಥಾನದಲ್ಲಿದ್ದರೆ, ಅವಳು ನಿಶ್ಚಯವಾಗಿ ಸಿರಿವಂತಳಾಗುತ್ತಾಳೆ. ಅವಳ ಗಂಡನು ಅಂಗಹೀನನೂ, ನಿರಕ್ಷರಿಯೂ ಹುಟ್ಟನೂ ಆದರೂ ಕೂಡ ಅವಳ ಯೋಗದ ದೃಷ್ಟಿಯಿಂದ ಅವನು ಅಗರ್ಭ ಸಿರಿವಂತನಿರಲೇಬೇಕು.

(೨) ಸಪ್ತಮ ಸ್ಥಾನದಲ್ಲಿ ಗುರು-ಶುಕ್ರ, ಗುರು-ಚಂದ್ರ, ಶುಕ್ರ-ಚಂದ್ರರು, ಇದ್ದು ಸಪ್ತಮಾಧೀಶನು ಬಲಾಢ್ಯನಾಗಿದ್ದರೆ ವಿವಾಹದ ನಂತರ ಐಶ್ವರ್ಯ ಪ್ರಾಪ್ತವಾಗುತ್ತದೆ.

(೩) ಧನಸ್ಥಾನದಲ್ಲಿ ಉಚ್ಚ, ಮೂಲತ್ರಿಕೋಣ, ಸ್ವಗೃಹದಲ್ಲಿದ್ದ ಯಾವುದೇ ಗ್ರಹವಿದ್ದರೂ ಆ ಸ್ತ್ರೀಯು ಸಿರಿವಂತಳಾಗಿರುತ್ತಾಳೆ.

ವಾಣಿ (ಧ್ವನಿ)

ಸ್ತ್ರೀಯ ಧ್ವನಿ ಅಥವಾ ಮಾತಿನ ಬಗ್ಗೆ ವಿಚಾರಿಸುವಾಗ ಕುಂಡಲಿಯಲ್ಲಿಯ ದ್ವಿತೀಯಸ್ಥಾನ, ದ್ವಿತೀಯಾಧೀಶ, ದ್ವಿತೀಯಸ್ಥಾನದಲ್ಲಿರುವ ಗ್ರಹ, ದ್ವಿತೀಯ ಸ್ಥಾನದ ಮೇಲಿರುವ ದೃಷ್ಟಿ ಇವುಗಳನ್ನು ವಿವೇಚಿಸಬೇಕು. ದ್ವಿತೀಯಸ್ಥಾನವು ವಾಕ್ + ಸ್ಥಾನವಿರುತ್ತದೆ. ಅದುದರಿಂದ ಮಾತಿನಲ್ಲಿಯ ಮಾಧುರ್ಯ ಇಲ್ಲವೆ ವಾಕ್‌ಶಕ್ತಿಯಲ್ಲಿರುವ ದೋಷ ಇವುಗಳನ್ನು ಹೇಗೆ ನೋಡಬೇಕೆಂಬುದನ್ನು ಕೆಳಗೆ ಕೊಡಲಾಗಿದೆ.

ವಾಯುರಾಶಿಗಳು (ಮಿಥುನ, ತುಲಾ, ಕುಂಭ) ಮಾತಿನಲ್ಲಿ ಮಾಧುರ್ಯವನ್ನು ತೋರಿಸುತ್ತವೆ. ಅಗ್ನಿರಾಶಿಗಳು ಸ್ಪಷ್ಟ ಉಚ್ಚಾರವನ್ನು ಪೃಥ್ವಿ

ರಾಶಿಗಳು ಮಿತಭಾಷಿತ್ವವನ್ನು ತೋರಿಸುತ್ತವೆ. ಜಲರಾಶಿಗಳು ಮಾತ್ರ ಮಾತಿನಲ್ಲಿ ಅಸ್ಪಷ್ಟತೆಯನ್ನು (ತೊದಲು ನುಡಿ) ತೋರಿಸುತ್ತವೆ. ಬುಧನು ವಾಣೀಕಾರಕಗ್ರಹವಾಗಿದ್ದಾನೆ. ಆದುದರಿಂದ ಕುಂಡಲಿಯಲ್ಲಿ ಬುಧ ನಿರ್ಬಲನಾಗಿದ್ದರೆ ಆ ವ್ಯಕ್ತಿಯು ಅಸ್ಪಷ್ಟವಾಗಿ ಮಾತನಾಡುತ್ತಾನೆ. ದ್ವಿತೀಯ ಸ್ಥಾನದಲ್ಲಿ ಶನಿ ಇದ್ದರಂತೂ ಮಾತಿನಿಂದ ಇಂತಹರ ಕೆಲಸವೇ ಆಗುವದಿಲ್ಲ. ಮಂಗಳ, ರಾಹು ಇದ್ದರೆ ಮಾತಿನಲ್ಲಿ ಒರಟರೂ ಧಾಡಸೀ ಪ್ರವೃತ್ತಿಯವರೂ ಇರುತ್ತಾರೆ. ಶುಕ್ರನಿದ್ದರೆ ಇಂಪಾಗಿಯೂ ಸೀರವಾಗಿಯೂ ಮಧುರ ವಾಣಿಯಿಂದ ಕೂಡಿದವರಾಗಿರುತ್ತಾರೆ. ಗುರು, ಚಂದ್ರರಿದ್ದರೆ ವಕ್ತೃತ್ವಶೈಲಿ ಸಾಧಿಸುತ್ತದೆ.

ಜಲರಾಶಿಯ ದ್ವಿತೀಯಸ್ಥಾನದಲ್ಲಿ ಶನಿ, ರಾಹು, ಮಂಗಳ, ಕೇತು ದುರ್ಬಲ ಬುಧ ಇವರಲ್ಲಿ ಯಾರಾದರೂ ಇದ್ದರೆ– ಇದು ನಿಶ್ಚಯವಾಗಿಯೂ ಮಾತಿನಲ್ಲಿ ದೋಷವನ್ನು ತೋರಿಸುತ್ತದೆ. ದ್ವಿತೀಯಾಧಿಪತಿ ಅಥವಾ ದ್ವಿತೀಯಸ್ಥಾನದಲ್ಲಿ ಯಾವುದೇ ಗ್ರಹ ಅಸ್ತ, ನೀಚ, ಪಾಪಗ್ರಹಯುಕ್ತ ಪಾಪಮಧ್ಯನಿದ್ದರೆ ಆ ಸ್ತ್ರೀಯಳಿಗೆ ಮಾತು ಬೇಗ ಬರುವದಿಲ್ಲ. ಅವೇ ಗ್ರಹಗಳು ಜಲರಾಶಿಯಲ್ಲಿದ್ದರಂತೂ ಮೂಕತನವನ್ನು ತೋರಿಸುತ್ತವೆ.

ಬಹಳ ಮಾತುಗಾರಿಕೆಯನ್ನು ಕೊಡುವ ಗ್ರಹಗಳೆಂದರೆ— ಬುಧ, ಶುಕ್ರ, ಚಂದ್ರ, ಗುರು, ಮಂಗಳ, ರವಿ, ರಾಶಿಗಳೆಂದರೆ ಅಗ್ನಿರಾಶಿಗಳು.

ದ್ವಿತೀಯಸ್ಥಾನದಲ್ಲಿ ಅಗ್ನಿರಾಶಿಯಿದ್ದು ಅಲ್ಲಿಯೇ ಕುಜ-ಚಂದ್ರರಿದ್ದರೆ ಅಥವಾ ಬುಧ ಮಂಗಳರಿದ್ದರೆ ಬಹಳ ಮಾತುಗಾರಿಕೆಯನ್ನು ತೋರಿಸುತ್ತಾರೆ.

ಮೇಷ, ಕರ್ಕ, ವೃಶ್ಚಿಕ ಈ ರಾಶಿಯು ಶನಿಯು ದ್ವಿತೀಯ ಸ್ಥಾನದಲ್ಲಿದ್ದರೆ ಆ ಸ್ತ್ರೀಯರು ಮಿತಭಾಷಿಗಳಾಗಿರುತ್ತಾರೆ. (ಗುಮ್ಮನಗುಸಕಿಯರೂ ಇರಬಹುದು) ಅಥವಾ ಇವರ ನಾಲಿಗೆ ದಪ್ಪವಾಗಿರುತ್ತದೆ. ಶುಕ್ರ-ಚಂದ್ರ, ರವಿ-ಶುಕ್ರ, ಬುಧ-ಶುಕ್ರ, ಗುರು-ಬುಧ, ರವಿ-ಬುಧ, ಗುರು-ಚಂದ್ರ, ಶುಕ್ರ-ಚಂದ್ರ, ಬುಧ-ಮಂಗಳ, ಈ ಯುತಿಗಳು ದ್ವಿತೀಯಸ್ಥಾನದಲ್ಲಿದ್ದರೆ ವಕ್ತೃತ್ವವನ್ನು ತೋರಿಸುತ್ತವೆ

ಕೇತುವೊಬ್ಬನೇ ದ್ವಿತೀಯ ಸ್ಥಾನದಲ್ಲಿದ್ದರೆ ಮಾತಿನಲ್ಲಿ ದೋಷವನ್ನು ಕೊಡಲಾರ. ಆದರೆ ಶನಿಯೊಂದಿಗೆ ಆವನಿದ್ದರೆ ದೋಷವನ್ನು ಕೊಡುತ್ತಾನೆ. ರಾಹು, ಶನಿ, ಕೇತು ಇವರು ದ್ವಿತೀಯೇಶನೊಂದಿಗೆ ಇದ್ದರೆ ಮಾತಿನಲ್ಲಿ ತೊದಲುತ್ತಾರೆ. (ನಿರ್ಬಲ ದ್ವಿತೀಯೇಶನಿದ್ದರೆ) ಬುಧನು ಜಲರಾಶಿಯಲ್ಲಿ ಇದ್ದು ಪಾಪಗ್ರಹಗಳ ಮಧ್ಯದಲ್ಲಿದ್ದರೆ ಅಥವಾ ನಿರ್ಬಲನಿದ್ದರೆ ಮಾತುಗಾರಿಕೆ ಸಾಧಿಸುವದಿಲ್ಲ. ಧನಸ್ಥಾನದಲ್ಲಿ ಶನಿ ರವಿ, ಶನಿ-ಮಂಗಳ, ಅಸ್ತ-ಬುಧ, ರಾಹು-ಶನಿ, ರಾಹು-ರವಿ, ರವಿ-ಕೇತು ಹೀಗಿದ್ದ ಸ್ತ್ರೀಯರು ಸ್ವಲ್ಪ ಮೂಕರಾಗುವ ಸಂಭವವಿರುತ್ತದೆ ದ್ವಿತಿಯಾಧಿಪತಿ ಹಾಗೂ ಬುಧನು ನಿರ್ಬಲರಾಗಿದ್ದರೆ ಮಾತಿನಲ್ಲಿ ದೋಷವನ್ನು ತೋರಿಸುತ್ತದೆ.

## ಮೂಗಿನಲ್ಲಿ ಮಾತು

(೧) ಕರ್ಕ, ವೃಶ್ಚಿಕ, ಮೀನ ಈ ರಾಶಿಯಲ್ಲಿ ಬುಧನಿದ್ದು, ಅಶುಭ ಚಂದ್ರನಿಂದ ನೋಡಲ್ಪಡುತ್ತಿದ್ದರೆ ಅಥವಾ ಆ ಸ್ತ್ರೀಯು ಮಧ್ಯರಾತ್ರಿಯಲ್ಲಿ ಜನಿಸಿದ್ದರೆ (ಚತುರ್ಥದಲ್ಲಿ ರವಿ) ಈ ಯೋಗವು ಬರುತ್ತದೆ.

(೨) ಶುಕ್ಲಪಕ್ಷದಲ್ಲಿ ಜನ್ಮಿಸಿದ್ದು ಕರ್ಕ, ವೃಶ್ಚಿಕ, ಮೀನ ಈ ರಾಶಿಯ ದ್ವಿತಿಯಸ್ಥಾನದಲ್ಲಿ ಚಂದ್ರ ಮಂಗಳರಿದ್ದರೆ.

(೩) ಪೃಥ್ವಿ ಅಥವಾ ಜಲರಾಶಿಯ ರಾಹು ದ್ವಿತೀಯದಲ್ಲಿದ್ದರೆ ಮಾತಿನಲ್ಲಿ ಉಗ್ಗುವ ಸ್ವಭಾವವಿರುತ್ತದೆ.

## ಮಧುರ ಧ್ವನಿ ಅಥವಾ ಹಾಡಿನಲ್ಲಿ ಲವಲವಿಕೆ

(೧) ವೃಷಭ, ಮಿಥುನ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಗಳು ದ್ವಿತಿಯ ಅಥವಾ ಲಗ್ನದಲ್ಲಿದ್ದು ಬುಧ, ಶುಕ್ರ, ಚಂದ್ರ, ಗುರು ಈ ಯಾವುದೇ ಗ್ರಹಗಳು ದ್ವಿತೀಯದಲ್ಲಿದ್ದರೆ ಹಾಡುಗಾರಿಕೆಯನ್ನು ಕೊಡುತ್ತವೆ.

(೨) ದ್ವಿತೀಯ ಅಥವಾ ಪಂಚಮ ಈ ಸ್ಥಾನಗಳಲ್ಲಿ ವಾಯು ಅಥವಾ ಪೃಥ್ವಿರಾಶಿಗಳಿದ್ದು ಬುಧ-ಶುಕ್ರ, ಗುರು-ಶುಕ್ರ, ಗುರು-ಚಂದ್ರ, ಶುಕ್ರ-ಚಂದ್ರ; ಗುರು-ಬುಧ ಹಾಗಿದ್ದರೆ ಒಳ್ಳೆಯ ಗಮಕಿಗಳಾಗಿರುತ್ತಾರೆ.

(೩) ಬುಧನು ಪೃಥ್ವಿ ಅಥವಾ, ವಾಯುರಾಶಿಯಲ್ಲಿದ್ದು ದ್ವಿತೀಯ ಪಂಚಮದಲ್ಲಿದ್ದರೆ ಮಾಧುರ್ಯಯುಕ್ತ ಹಾಡುಗಳನ್ನು ಹಾಡುತ್ತಾರೆ. ಇವರ ವಾಣಿ ಅಸ್ಖಲಿತವಾಗಿರುತ್ತದೆ.

ಹೀಗೆ ಗ್ರಹಗಳ ಯೋಗವಿದ್ದರೆ ಒಳ್ಳೇ ಸಂಗೀತತಜ್ಞರಾಗುತ್ತಾರೆ.

ತಿನ್ನುಣ್ಣುವುದರಲ್ಲಿ ಅಪೇಕ್ಷೆ

ಅಗ್ನಿರಾಶಿ ಅಥವಾ ಪೃಥ್ವಿರಾಶಿಯು ದ್ವಿತೀಯಸ್ಥಾನದಲ್ಲಿದ್ದರೆ ಕೂಳ-ಬಕ್ಕತನವನ್ನು ತೋರಿಸುತ್ತವೆ. ಜಲರಾಶಿಯು ಮಿತಾಹಾರವನ್ನು ವಾಯುರಾಶಿಯು ಅಲ್ಪ ಆಹಾರವನ್ನು ಸೂಚಿಸುತ್ತವೆ.

ಶನಿ, ರಾಹು, ಮಂಗಳ, ಗುರು, ಕೇತು ಈ ಗ್ರಹಗಳು ಕೂಳಬಕ್ಕತನವನ್ನು ತೋರಿಸುತ್ತದೆ. ಇವೇ ಗ್ರಹಗಳು ಅಗ್ನಿ ಅಥವಾ ಪೃಥ್ವಿರಾಶಿಯಲ್ಲಿದ್ದು ದ್ವಿತೀಯ ಸ್ಥಾನದಲ್ಲಿದ್ದರೆ ಈ ಸ್ತ್ರೀಯರು ಬಹಳ ತಿನ್ನುವವರಾಗಿರುತ್ತಾರೆ.

ಗುರು, ಚಂದ್ರ, ಶುಕ್ರರು ದ್ವಿತೀಯಸ್ಥಾನದಲ್ಲಿದ್ದ ಸ್ತ್ರೀಯರಿಗೆ ಸಿಹಿ, ಸ್ನಿಗ್ಧ, ಮಧುರ ಪದಾರ್ಥಗಳು ರುಚಿಸುತ್ತವೆ. ಗುರುವೊಬ್ಬನೇ ದ್ವಿತೀಯ ಸ್ಥಾನದಲ್ಲಿದ್ದರೆ ಸಿಹಿ ಪದಾರ್ಥಗಳೇ ರುಚಿಸುತ್ತವೆ. ಶುಕ್ರನೊಬ್ಬನೇ ಬಲವಂತನಾಗಿ ದ್ವಿತೀಯ ಸ್ಥಾನದಲ್ಲಿದ್ದರೆ ಹುಳಿ ಪದಾರ್ಥಗಳು ( ಆಮ್ಲ ) ರುಚಿಸುತ್ತವೆ. ಮಂಗಳನು ದ್ವಿತೀಯ ಸ್ಥಾನದಲ್ಲಿದ್ದರೆ ಕಹಿ ಪದಾರ್ಥಗಳು ರುಚಿಸುತ್ತವೆ. ರವಿ-ಮಂಗಳರು ದ್ವಿತೀಯದಲ್ಲಿದ್ದರೆ ಉಷ್ಣ ಹಾಗೂ ಖಾರ ಪದಾರ್ಥಗಳು ರುಚಿಸುತ್ತವೆ. ಮಂಗಳ-ಶುಕ್ರರು ಅಥವಾ ರವಿ-ಮಂಗಳರು ದ್ವಿತೀಯ ಸ್ಥಾನದಲ್ಲಿದ್ದರೆ ಮಸಾಲೆಯ ಸಾಮಾನುಗಳು ರುಚಿಸುತ್ತವೆ. ಶನಿಯು ದ್ವಿತೀಯ ಸ್ಥಾನದಲ್ಲಿದ್ದರೆ ಎಣ್ಣೆಯ ಸಾಮಾನುಗಳು ರುಚಿಸುತ್ತವೆ. ರಾಹು, ಕೇತು, ಶನಿ, ಬುಧ ಈ ಗ್ರಹಗಳು ಮಾಂಸಾಹಾರವನ್ನು ಸೂಚಿಸು-ತ್ತವೆ.

ಬುಧ, ಮಂಗಳ, ರಾಹು ಈ ಗ್ರಹಗಳು ದ್ವಿತೀಯ ಸ್ಥಾನದಲ್ಲಿದ್ದ ಸ್ತ್ರೀಯರು ಪ್ರಸಂಗಕ್ಕೆ ಅನುಕೂಲವಾದ ಆಹಾರವನ್ನು ಸೇವಿಸುವರು.

ದ್ವಿತೀಯ ಸ್ಥಾನವಲ್ಲಿ ಗುರು, ಶುಕ್ರ, ಚಂದ್ರರಿದ್ದರೆ ಬಹಳ ಧಾರ್ಮಿಕರಾಗಿರುತ್ತಾರೆ. (ಸಿಕ್ಕಡೆಗಳಲ್ಲೆಲ್ಲ ಆಹಾರ ಸೇವಿಸುವದಿಲ್ಲ).

ಶುಕ್ರ-ಚಂದ್ರರು ಬಲವತ್ತರವಾಗಿ ದ್ವಿತೀಯ ಸ್ಥಾನದಲ್ಲಿದ್ದರೆ ಐಸ-ಕ್ರೀಮ, ಸೋಡಾ, ಶರಬತ್ ಮುಂತಾದ ತಂಪಾದ ಪಾನೀಯಗಳು ರುಚಿಸುತ್ತವೆ.

## ನೇತ್ರ

ದ್ವಿತೀಯ ದ್ವಾದಶ ಸ್ಥಾನಗಳಿಂದ ನೇತ್ರಗಳ ವಿಚಾರಮಾಡಲು ಬರುತ್ತದೆ. ನೇತ್ರ ದೋಷಗಳನ್ನು ತರುವಂಥ ಗ್ರಹಗಳೆಂದರೆ ಶುಕ್ರ, ರವಿ, ಚಂದ್ರ ರಾಹು ಇವು. ದ್ವಿತೀಯ ದ್ವಾದಶ ಸ್ಥಾನದಲ್ಲಿ ರವಿ ಚಂದ್ರ, ರವಿ-ಶುಕ್ರ ರವಿ-ರಾಹುಗಳ ಯುತಿಯಿದ್ದರೆ ನೇತ್ರದೋಷವಿರುತ್ತದೆ. ದ್ವಿತೀಯಸ್ಥಾನದಲ್ಲಿ ದುರ್ಬಲ ಶನಿಯಿದ್ದರೆ ಸಣ್ಣ ಕಣ್ಣುಗಳು (ಚಿಪ ಗಣ್ಣು) ಇರುತ್ತವೆ. ಆದರೆ ಇವುಗಳಲ್ಲಿ ಕಣ್ಣಿನ ದೋಷವಿರುವದಿಲ್ಲ. ಬುಧನು ದ್ವಿಸ್ವಭಾವ ರಾಶಿಯಲ್ಲಿ ಚಂದ್ರ, ಶುಕ್ರ, ರವಿ ಇವರೊಂದಿಗೆ ಇದ್ದರೆ ತಿರುವು ಗಣ್ಣನ್ನು ಕೊಡುತ್ತಾನೆ. (ದ್ವಿತೀಯ ಸ್ಥಾನದಲ್ಲಿ) ದ್ವಿತೀಯ, ದ್ವಾದಶದಲ್ಲಿ ಅಗ್ನಿರಾಶಿಯ ಮಂಗಳನೊಬ್ಬನೇ ಇದ್ದರೆ ಕಣ್ಣುಗಳು ಯಾವಾಗಲೂ ಕೆಂಪಾಗಿರುತ್ತವೆ. ಜಲರಾಶಿಯ ಮಂಗಳನು ದ್ವಿತೀಯ ಸ್ಥಾನದಲ್ಲಿದ್ದರೆ ಬಾಲ್ಯದಲ್ಲಿ ಕಣ್ಣಿನ ಬೇನೆಯನ್ನು ಬಹಳ ಕೊಡುತ್ತಾನೆ. ರವಿ ಚಂದ್ರ ಶುಕ್ರರ ಯುತಿಯು ದ್ವಿತೀಯ-ದ್ವಾದಶದಲ್ಲಿದ್ದರೆ ಅವರ ಕಣ್ಣುಗಳ ರೆಪ್ಪೆಗಳು ಜಿಗಟು ಹಿಡಿಯುತ್ತ—ಹಾಗೂ ಏಟ್ಟು ಬಹಳ, ಅಲ್ಲದೆ ಕಣ್ಣಿನಲ್ಲಿ ದೋಷವೂ ಕಂಡುಬರುತ್ತದೆ. ರವಿ ಮಂಗಳ ಯುತಿಯು ಕಣ್ಣಿನ ದೋಷವನ್ನು ಕೊಡುವದಿಲ್ಲ ಹಾಗೂ ತೀಕ್ಷ್ಣ ಕಣ್ಣನ್ನು ತೋರಿಸುತ್ತವೆ. ದ್ವಿತೀಯ ಸ್ಥಾನದಲ್ಲಿ ಶುಕ್ರನಿದ್ದು ದ್ವಿತೀಯೇಶನು ಷಷ್ಠದಲ್ಲಿದ್ದರೆ ಕಣ್ಣಿನ ರೋಗವು ಬರುತ್ತದೆ. ರವಿ-ಚಂದ್ರ, ರವಿ-ಶುಕ್ರ ಇವ ಯುತಿಯು ದ್ವಿತೀಯ ಇಲ್ಲವೆ ದ್ವಾದಶದಲ್ಲಿದ್ದರೆ ಅಥವಾ ರವಿ, ಶುಕ್ರರಲ್ಲಿ ಒಬ್ಬರು ದ್ವಿತೀಯ ಇನ್ನೊಬ್ಬರು ದ್ವಾದಶದಲ್ಲಿದ್ದರೆ ಕಣ್ಣಿನ ದೋಷ ಬಹಳವಾಗಿರುತ್ತದೆ. ಸ್ವಗೃಹದಲ್ಲಿ ಗುರು, ಬುಧ, ಶನಿ, ರಾಹು, ಮಂಗಳ ಇದ್ದರೆ

ನೇತ್ರಗಳಲ್ಲಿ ತೇಜಸ್ಸನ್ನು ಕೊಡುತ್ತಾರೆ. ಬುಧನು ಪಾಪಗ್ರಹಗಳ ಮಧ್ಯದಲ್ಲಿ ಇದ್ದು, ದ್ವಿತೀಯ-ದ್ವಾದಶದಲ್ಲಿದ್ದರೆ ತಿರುವುಗಣ್ಣನ್ನು ಕೊಡುತ್ತಾನೆ. ಶುಕ್ರನು ಪಾಪಗ್ರಹಗಳೊಂದಿಗೆ ದ್ವಿತೀಯ ಅಥವಾ ದ್ವಾದಶದಲ್ಲಿದ್ದರೆ ಏಕಾಕ್ಷವನ್ನು ಕೊಡುತ್ತಾನೆ. ನೀಚರಾಶಿಯ ರವಿಯು ದ್ವಿತೀಯ ದ್ವಾದಶ ಸ್ಥಾನದಲ್ಲಿದ್ದು ಶನಿಯಿಂದ ಈಕ್ಷಿಸಲ್ಪಟ್ಟಿದ್ದರೆ ಕಣ್ಣಿನ ದೋಷವನ್ನು ಕೊಡುತ್ತಾನೆ. ಚಂದ್ರ ಶುಕ್ರರ ಯುತಿಯು ನೀಚರಾಶಿಯಲ್ಲಿದ್ದರೆ ಇರುಳಿನಲ್ಲಿ ಕಣ್ಣುಗಳು ಚೆನ್ನಾಗಿ ಕಾಣುವದಿಲ್ಲ.

## ಅಂಧ ಯೋಗ

(೧) ಸಿಂಹಲಗ್ನವಿದ್ದು ರವಿಯು ಶುಕ್ರನೊಂದಿಗೆ ೨, ೬, ೮, ೧೨, ಈ ಸ್ಥಾನಗಳಲ್ಲಿದ್ದರೆ,

(೨) ದ್ವಿತೀಯಾಧಿಪತಿಯಾದ ಶುಕ್ರನು ದ್ವಾದಶದಲ್ಲಿ ಒಬ್ಬನೇ ಇದ್ದು ಶನಿಯಿಂದ ನೋಡಲ್ಪಟ್ಟಿದ್ದರೆ,

(೩) ದ್ವಿತೀಯದಲ್ಲಿ ರವಿಯೂ ದ್ವಾದಶದಲ್ಲಿ ಶುಕ್ರನೂ ಅಥವಾ ದ್ವಿತೀಯದಲ್ಲಿ ಶುಕ್ರನೂ ದ್ವಾದಶದಲ್ಲಿ ರವಿಯೂ ಇದ್ದರೆ,

(೪) ಚಂದ್ರ-ಮಂಗಳರ ಅಥವಾ ಶುಕ್ರ-ಮಂಗಳರ ಯುತಿಯು ೨, ೬, ೮, ೧೨ ಸ್ಥಾನಗಳಲ್ಲಿದ್ದರೆ ಅಪಘಾತದಿಂದ ಕಣ್ಣಿನ ದೋಷವು ಬರುತ್ತದೆ.

(೫) ರವಿ-ಚಂದ್ರ-ಶುಕ್ರ ಈ ಮೂರು ಗ್ರಹಗಳ ಯುತಿಯು ೨,೬,೮,೧೨ಸ್ಥಾನಗಳಲ್ಲಿದ್ದರೆ,

(೬) ಕುಂಭದಲ್ಲಿಯ ಮಂಗಳನು ಲಗ್ನದಲ್ಲಿದ್ದರೆ, ಇರುಳಿನಲ್ಲಿ ಕಣ್ಣಿನ ದೋಷವನ್ನು ಕೊಡುತ್ತಾನೆ.

(೭) ರವಿ-ಚಂದ್ರ-ಶನಿ ಈ ಮೂರೂ ಗ್ರಹಗಳ ಯುತಿಯು ದ್ವಿತೀಯ ದ್ವಾದಶದಲ್ಲಿದ್ದರೆ.

(೮) ಸಿಂಹಲಗ್ನವಿದ್ದು ರವಿಯು ಶುಕ್ರನೊಂದಿಗೆ ೨, ೬, ೮, ೧೨ ಈ ಸ್ಥಾನಗಳಲ್ಲಿದ್ದರೆ ಅಥವಾ ಸಿಂಹಲಗ್ನವಿದ್ದು ಶುಕ್ರನೊಬ್ಬನೇ ದ್ವಿತೀಯ ದ್ವಾದಶದಲ್ಲಿದ್ದರೆ,

(೯) ರವಿ, ಶುಕ್ರ, ಚಂದ್ರ ಈ ಮೂರು ಗ್ರಹಗಳಲ್ಲಿ ಯಾರೊಬ್ಬರೂ ನೀಚ, ಅಸ್ತಂಗತ, ವಕ್ರ, ಪಾಪಗ್ರಹ ಮಧ್ಯ, ಪಾಪಗ್ರಹಯುಕ್ತರಾಗಿ, ದ್ವಿತೀಯ ದ್ವಾದಶದಲ್ಲಿದ್ದರೆ.

ಮೇಲ್ಕಂಡ ಯೋಗಗಳಿದ್ದರೆ ಸ್ತ್ರೀಯರಿಗೆ ಕಣ್ಣಿನ ದೋಷ ಕಂಡುಬರುತ್ತದೆ ದ್ವಿತೀಯ ಸ್ಥಾನದಿಂದ ಎಡಗಣ್ಣನ್ನೂ, ದ್ವಾದಶ ಸ್ಥಾನದಿಂದ ಬಲಗಣ್ಣನ್ನೂ ನೋಡಬೇಕು.

## ಕೌಟುಂಬಿಕ ಸೌಖ್ಯ

ಕೌಟುಂಬಿಕ ಸೌಖ್ಯವು ಸ್ತ್ರೀಯರಿಗೆ ಅತ್ಯವಶ್ಯಕವಾದದ್ದು. ಪತಿಯು ಬೇಕಾದಷ್ಟು ಸಿರಿವಂತನಾದಾಗ್ಯೂ ವಿವಾಹವಾದ ಮೇಲೆ ಕೆಲವು ವರುಷಗಳ ವರೆಗೆ ಸ್ತ್ರೀಯರು ಇತರ ಹಿರಿಯರೊಂದಿಗೆ ಹೊಂದಿಕೊಂಡಿರಬೇಕಾಗುವುದು. ಅತ್ತೆ-ಮಾವ, ಅತ್ತಿಗೆ-ನಾದಿನಿ, ಭಾವ-ಮೈದುನರೊಂದಿಗೆ ಅವಳ ಸಂಬಂಧವು ಬರುತ್ತದೆ. ಇವರೆಲ್ಲರೊಂದಿಗೆ ಇವಳ ಸೌಖ್ಯ ಎಷ್ಟರಮಟ್ಟಿಗೆ ಇದೆಯೆಂಬುದನ್ನು ದ್ವಿತೀಯಸ್ಥಾನ ಹಾಗೂ ದ್ವಿತೀಯಾಧೀಶನಿಂದ ನೋಡಬೇಕು.

ದ್ವಿತೀಯ ಸ್ಥಾನದಲ್ಲಿ ಯಾವುದೇ ರಾಶಿಯಿದ್ದು ಅಲ್ಲಿ ಚಂದ್ರ, ಗುರು, ಶುಕ್ರ ಈ ಯಾವುದೇ ಒಂದು ಗ್ರಹವಿದ್ದರೂ ಅವಳು ಕುಟುಂಬದೊಂದಿಗೆ ಹೊಂದಿಕೊಂಡಿರುವಳು. ಮೇಷ, ಕರ್ಕ, ಸಿಂಹ, ವೃಶ್ಚಿಕ ಈ ಯಾವುದೇ ರಾಶಿಯ ಶನಿಯು ದ್ವಿತೀಯದಲ್ಲಿದ್ದರೆ ಆ ಸ್ತ್ರೀಯು ಕುಟುಂಬದವರೊಡನೆ ಹೊಂದಿಕೊಂಡಿರಲಾರಳು. ಪೃಥ್ವಿ ಅಥವಾ ವಾಯು ರಾಶಿಯ ದ್ವಿತೀಯ ಸ್ಥಾನದಲ್ಲಿಯ ಶನಿಯು ಇದ್ದ ಸ್ತ್ರೀಯರು ಧೂರ್ತರೂ, ಜುಣಾಕ್ಷನರೂ ಇದ್ದು ಸವಿ ಮಾತಿನಿಂದ ಕಾರ್ಯ ಸಾಧಿಸುತ್ತಾರೆ. ಪೃಥ್ವಿ ಹಾಗೂ ವಾಯು ರಾಶಿಯ ದ್ವಿತೀಯ ಸ್ಥಾನದಲ್ಲಿ ರಾಹು ಇದ್ದ ಸ್ತ್ರೀಯರು ಮಿತಭಾಷಿಗಳಾಗಿರುತ್ತಾರೆ. (ಗುಮ್ಮನಗುಸುಗರು) ಮೇಷ, ವೃಶ್ಚಿಕ, ಮಕರ, ಸಿಂಹ, ಕುಂಭ ಈ ರಾಶಿಯ ದ್ವಿತೀಯ ಸ್ಥಾನದಲ್ಲಿದ್ದ ಮಂಗಳನು ಜಗಳಗಂಟತನವನ್ನು ತೋರಿಸುತ್ತಾನೆ. ಇಂಥ ಸ್ತ್ರೀಯರು ಕ್ರೋಧಿಗಳಾಗಿದ್ದು ಏಕತ್ರ ಕುಟುಂಬದಲ್ಲಿ ಹೊಂದಿಕೊಂಡಿರಲಾರರು. ಇಂಥ ಮಂಗಳನೊಂದಿಗೆ ಶನಿ, ರಾಹು ಅಥವಾ ಕ್ಷೀಣ ಚಂದ್ರರಿದ್ದರಂತೂ ಏಕತ್ರ ಕುಟುಂಬದಲ್ಲಿ ಇರುವುದೇ

ಅಸಾಧ್ಯ. ಅಗ್ನಿರಾಶಿಯ ಶನಿ-ಮಂಗಳರ ಯುತಿಯು ದ್ವಿತೀಯದಲ್ಲಿದ್ದರೆ ಏಕತ್ರ ಕುಟುಂಬಕ್ಕೆ ಹಾನಿಕಾರಕವು. ಶನಿ-ಚಂದ್ರ, ಶನಿ-ರವಿ, ಮಂಗಳ-ಶನಿ, ಚಂದ್ರ-ರಾಹು, ಇವರ ಯುತಿಯು ದ್ವಿತೀಯದಲ್ಲಿದ್ದರೆ ಅಂಥವರಿಗೆ ಆಪ್ತೇಷ್ಟರ ಸಹಾಯ ಸಿಗಲಾರದು. ದ್ವಿತೀಯದಲ್ಲಿ ಬುಧನೊಬ್ಬನೇ ಬಲಾಢ್ಯನಿದ್ದರೆ ಆಪ್ತೇಷ್ಟರ ಸಹಾಯ ಬಹಳ ಲಭಿಸುವದು. ಶುಕ್ರ-ಮಂಗಳ, ಗುರು-ಮಂಗಳ, ಚಂದ್ರ ರವಿ, ಗುರು-ಶನಿ, ಶುಕ್ರ-ಶನಿ, ಹೀಗೆ ಒಂದು ಶುಭ ಇನ್ನೊಂದು ಅಶುಭ ಗ್ರಹಗಳು ಯುತಿಯಿದ್ದರೆ ಏಕತ್ರ ಕುಟುಂಬದಲ್ಲಿ ಕೆಲದಿನ ತೊಂದಿಕೊಂಡು ಕೆಲದಿನ ದೂರ ಇರುವರು. ಶನಿ ಬುಧರ ಯುತಿಯು ದ್ವಿತೀಯ ಸ್ಥಾನದಲ್ಲಿದ್ದ ಸ್ತ್ರೀಯರು ಸಿಹಿಮಾತಿನಿಂದ ಕಾರ್ಯ ಸಾಧಿಸುವ ಧೂರ್ತರಾಗಿರುತ್ತಾರೆ.

### ಯಶಸ್ಸು

ಜಯಾಪಜಯಗಳ ವಿಚಾರ ಮಾಡುವಾಗ ದ್ವಿತೀಯ ಸ್ಥಾನವನ್ನು ನೋಡಬೇಕು. ದ್ವಿತೀಯ ಸ್ಥಾನದಲ್ಲಿ ಬಲಾಢ್ಯ ಗುರು, ಶುಕ್ರ, ಚಂದ್ರರಿದ್ದರೆ ಎಲ್ಲ ಕೆಲಸಗಳಲ್ಲಿ ಜಯ ಲಭಿಸುವದು. ಪಾಪಗ್ರಹಗಳಿದ್ದರೆ ಇವರ ಇಚ್ಛೆಯಂತೆ ಕೆಲಸವಾಗದೆ ಸಂಕಟಕ್ಕೊಳಗಾಗುತ್ತಾರೆ.

### ದ್ವಿತೀಯ ಸ್ಥಾನದಲ್ಲಿರುವ ಗ್ರಹಗಳ ಕಾರ್ಯ

ರವಿ:— ರವಿಯು ದ್ವಿತೀಯ ಸ್ಥಾನದಲ್ಲಿದ್ದರೆ ಪಿತ್ರಾರ್ಜಿತ ಆಸ್ತಿಯು ಚೆನ್ನಾಗಿರುತ್ತದೆ. ಹೀಗಿರುವ ಸ್ತ್ರೀಯರು ಕರ್ತವ್ಯದಕ್ಷರೂ, ವ್ಯವಹಾರದಕ್ಷರೂ ಇರುತ್ತಾರೆ. ಮೇಷ ರಾಶಿಯ ದ್ವಿತೀಯ ಸ್ಥಾನದಲ್ಲಿದ್ದ ರವಿಯು ಶತ್ರು ನಿರ್ಮೂಲನ ಸಮರ್ಥನಾಗಿರುತ್ತಾನೆ. ಸಿಂಹ ಹಾಗೂ ವೃಶ್ಚಿಕ ರಾಶಿಯ ದ್ವಿತೀಯ ಸ್ಥಾನದಲ್ಲಿದ್ದ ರವಿಯು ಸಾಂಪತ್ತಿಕ ಸ್ಥಿತಿಯು ಚೆನ್ನಾಗಿರುವದನ್ನು ತೋರಿಸುತ್ತಾನೆ. ಧನು ರಾಶಿಯ ದ್ವಿತೀಯ ಸ್ಥಾನದಲ್ಲಿರುವ ರವಿಯು ಪಿತ್ರಾರ್ಜಿತ ಸೌಖ್ಯವನ್ನು ಕೊಡುತ್ತಾನೆ. ಮೀನ ರಾಶಿಯ ದ್ವಿತೀಯ ಸ್ಥಾನದಲ್ಲಿದ್ದ ರವಿಯು ವಿವಾಹದ ನಂತರ ಭಾಗ್ಯೋದಯವನ್ನು ಕೊಡುತ್ತಾನೆ. ವೃಷಭ, ಮಿಥುನ, ಕರ್ಕ ರಾಶಿಗಳ ದ್ವಿತೀಯ ಸ್ಥಾನದಲ್ಲಿದ್ದ

ರವಿಯು ಸಾಂಪತ್ತಿಕ ಸ್ಥಿತಿಯನ್ನು ಅಷ್ಟೊಂದು ಚೆನ್ನಾಗಿ ಕೊಡಲಾರನು. ಮೇಷ-ಸಿಂಹ ರಾಶಿಗಳ ದ್ವಿತೀಯ ಸ್ಥಾನದಲ್ಲಿದ್ದ ರವಿ-ಮಂಗಳರ ಯುತಿಯು ಪಿತ್ರಾರ್ಜಿತ ಆಸ್ತಿಯನ್ನೂ ಸ್ಥಾವರ ಸಂಪತ್ತಿನ ಸೌಖ್ಯವನ್ನೂ ಕೊಡುತ್ತಾನೆ.

ಚಂದ್ರ :— ಬಲಾಢ್ಯನಾದ ಚಂದ್ರನು ದ್ವಿತೀಯ ಸ್ಥಾನದಲ್ಲಿದ್ದರೆ, ಸುಖಭೋಗವನ್ನೂ ಕಲಾವಂತಿಕೆಯನ್ನೂ ಕೊಡುತ್ತಾನೆ. ವೃಷಭ, ಕರ್ಕ, ಮೀನ ಈ ರಾಶಿಗಳ ದ್ವಿತೀಯ ಸ್ಥಾನದದರುವ ಚಂದ್ರನು ಸಾಂಪತಿಕ ಸ್ಥಿತಿಯನ್ನು ತೋರಿಸುತ್ತಾನೆ. ಗುರು-ಚಂದ್ರ, ಶುಕ್ರ-ಚಂದ್ರ ಇವರ ಯುತಿಯು ದ್ವಿತೀಯ ಸ್ಥಾನದಲ್ಲಿರುವದು ಸಿರಿವಂತಿಕೆಯ ಲಕ್ಷಣವು ಯಾವುದೇ ರಾಶಿಯ ಪೂರ್ಣ ಚಂದ್ರನು ದ್ವಿತೀಯ ಸ್ಥಾನದಲ್ಲಿನುವದು ಸಿರಿವಂತಿಕೆಯನ್ನು ತೋರಿಸುತ್ತದೆ. ಯಾವದೇ ರಾಶಿಯ ಚಂದ್ರ, ಬುಧರ ಯುತಿ ಇದ್ದ ಸ್ತ್ರೀಯರಿಗೆ ಮಾತುಗಾರಿಕೆಯಲ್ಲಿ ಪ್ರಾವೀಣ್ಯತೆ ಕೊಡುತ್ತಾನೆ.

ಮಂಗಳ:— ಮಂಗಳನು ದ್ವಿತೀಯ ಸ್ಥಾನದಲ್ಲಿರುವವರು ದುಂದು-ಗಾರರು ಸಿಡುಕ ಸ್ವಭಾವದವರಾಗಿರುತ್ತಾರೆ. ಎಂಥ ಮಂಗಳನು ಈ ಸ್ಥಾನದಲ್ಲಿದ್ದರೂ ಇವರ ಸಾಂಪತ್ತಿಕ ಸ್ಥಿತಿ ಅಷ್ಟಕ್ಕಷ್ಟೇ ಇರುತ್ತದೆ.

ಬುಧ:— ಬಲಾಢ್ಯ ಬುಧನು ದ್ವಿತೀಯ ಸ್ಥಾನದಲ್ಲಿದ್ದರೆ, ಸ್ತ್ರೀಯರನ್ನು ಕೋಟ್ಯಾಧೀಶರನ್ನಾಗಿ ಮಾಡುತ್ತಾನೆ. ವೃಷಭ, ಮಿಥುನ, ಕನ್ಯಾ, ತುಲಾ, ಕುಂಭ ಈ ರಾಶಿಗಳ ದ್ವಿತೀಯ ಸ್ಥಾನದಲ್ಲಿನುವ ಬುಧನು ಸಾಹಿತ್ಯ, ಸಂಗೀತ, ಲೇಖನ, ಕಾವ್ಯ, ಮುಂತಾದ ಕಲೆಗಳಲ್ಲಿ ನೈಪುಣ್ಯತೆ-ಯನ್ನು ತೋರಿಸುತ್ತಾನೆ. ಬಲಾಢ್ಯ ಬುಧನು ದ್ವಿತೀಯ ಸ್ಥಾನದಲ್ಲಿರುವದು ವ್ಯವಹಾರದಲ್ಲಿ ಕುಶಲತೆಯನ್ನು ತೋರಿಸುತ್ತದೆ. ದೊಡ್ಡ ದೊಡ್ಡ ವ್ಯಾಪಾರಿಗಳಿಗಿರುವ ಯೋಗ್ಯತೆ ಇವರಿಗಿರುತ್ತದೆ. ಬುಧ, ಶುಕ, ಬುಧ, ಶನಿ, ಬುಧ-ರಾಹು ಇವರ ಯುತಿಯ ದ್ವಿತೀಯ ಸ್ಥಾನದಲ್ಲಿರುವದು ಲಾಭ-ದಾಯಕವು ಕನ್ಯಾ ರಾಶಿಯ ದ್ವಿತಿಯದಲ್ಲಿ ಚಂದ್ರ, ಬುಧರ ಯುತಿ ಇದ್ದ ಸ್ತ್ರೀಯರು ಬಹಳ ಮಾತುಗಾರಿಕೆಯವರಿರುತ್ತಾರೆ.

ಗುರು:— ಯಾವುದೇ ರಾಶಿಯ ಗುರು ದ್ವಿತೀಯ ಸ್ಥಾನದಲ್ಲಿರುವದು ಶುಭದಾಯಕವು. ಕರ್ಕ, ಧನು, ಮೀನ, ತುಲಾ ಈ ರಾಶಿಗಳಿರುವ

ದ್ವಿತೀಯ ಸ್ಥಾನದಲ್ಲಿರುವ ಗುರು ಅಗರ್ಭ ಸಿರಿವಂತಿಕೆಯನ್ನು ತೋರಿಸು ತ್ತಾನೆ. ದ್ವಿತೀಯ ಸ್ಥಾನದಲ್ಲಿರುವ ಗುರು ಕೂಳುಬಕ್ಕತನವನ್ನು ಸೂಚಿಸು ತ್ತಾನೆ. ಗುರು–ಶುಕ್ರ, ಗುರು–ಚಂದ್ರ, ಗುರು–ಮಂಗಳ ಇವರ ಯುತಿಯು ದ್ವಿತೀಯ ಸ್ಥಾನದಲ್ಲಿರುವದು ಶುಭದಾಯಕವು.

ಶುಕ್ರ:— ಶುಕ್ರನು ದ್ವಿತೀಯ ಸ್ಥಾನದಲ್ಲಿರುವುದು ಸಂಗೀತ ಸಾಹಿತ್ಯ, ಮುಂತಾದ ಲಲಿತ ಕಲೆಗಳಿಗಾಗಿ ಶುಭದಾಯಕವು. ವೃಷಭ, ಮಿಥುನ, ಕನ್ಯಾ, ತುಲಾ, ಮೀನ, ಕುಂಭ ಈ ರಾಶಿಗಳ ದ್ವಿತೀಯ ಸ್ಥಾನ ದಲ್ಲಿರುವ ಶುಕ್ರನು ಸಾಂಪತ್ತಿಕ ಸ್ಥಿತಿಯ ಅನುಕೂಲತೆಯೊಂದಿಗೆ ಲಲಿತ ಕಲೆಗಳಲ್ಲಿ ಅಭಿರುಚಿಯನ್ನು ತೋರಿಸುತ್ತಾನೆ. ಶುಕ್ರ–ಗುರು, ಶುಕ್ರ–ಚಂದ್ರ, ಶುಕ್ರ–ಬುಧ ಈ ಯುತಿಯು ದ್ವಿತೀಯ ಸ್ಥಾನದಲ್ಲಿರುವದು ಶುಭದಾಯಕವು. ಮೀನ ರಾಶಿಯ ದ್ವಿತೀಯ ಸ್ಥಾನದಲ್ಲಿರುವ ಶುಕ್ರನು ಅಗರ್ಭ ಶ್ರೀಮಂತಿಕೆ- ಯನ್ನು ತೋರಿಸುತ್ತಾನೆ ಹಾಗೂ ಇಂಶಹರ ಭಾಗ್ಯೋದಯ ವಿವಾಹದ ನಂತರ ಇರುತ್ತದೆ.

ಶನಿ:— ದ್ವಿತೀಯ ಸ್ಥಾನದಲ್ಲಿ ಶನಿಯಿರುವದು ಅಶುಭದಾಯಕವು ಇದು ಮಿತಭಾಷಣವನ್ನು ಸೂಚಿಸುತ್ತದೆ. ಇಂಶಹರು ದುಃಖಜೀವಿಗಳು ಆಗಿರುತ್ತಾರೆ. ಇವರಿಗೆ ತಿರುಗಾಟ ಬಹಳ ಸೇರುತ್ತದೆ. ಮಿಥುನ, ತುಲಾ, ಕುಂಭ, ಮಕರ ಈ ರಾಶಿಗಳ ದ್ವಿತೀಯ ಸ್ಥಾನದಲ್ಲಿರುವ ಶನಿಯು ಲಾಭದಾಯಕನು.

ರಾಹು:— ದ್ವಿತೀಯ ಸ್ಥಾನದಲ್ಲಿರುವ ರಾಹು, ಕೇತುಗಳು ಅಶುಭ- ದಾಯಕರು. ಆದರೆ ಮಿಥುನ–ಕನ್ಯಾದಲ್ಲಿಯ ರಾಹು ಬುಧನೊಂದಿಗೆ ಇದ್ದರೆ ವ್ಯವಹಾರ ಕೌಶಲ್ಯವನ್ನು ತೋರಿಸುತ್ತಾನೆ. ಧನು–ಮೀನಗಳ ಕೇತು ಗುರುವಿನೊಂದಿಗಿದ್ದರೆ ಧಾರ್ಮಿಕ ಪ್ರವೃತ್ತರನ್ನಾಗಿ ಮಾಡುತ್ತಾನೆ.

### ಭಾವೇಶನ ಫಲ

(೧) ಧನೇಶನು ಲಗ್ನದಲ್ಲಿದ್ದರೆ ಆ ಸ್ತ್ರೀಯು ಕೃಪಣಳಿದ್ದು ಸ್ವಂತ ಕಾರ್ಯಕ್ಕಾಗಿ ಖರ್ಚುಮಾಡುವ ಪ್ರವೃತ್ತಿಯುಳ್ಳವಳಾಗುತ್ತಾಳೆ.

(೨) ಧನೇಶನು ಧನಸ್ಥಾನದಲ್ಲಿದ್ದರೆ ಆ ಸ್ತ್ರೀಯು ಭೋಗ ವಿಲಾಸಗಳೊಂದಿಗೆ ಜೀವನವನ್ನು ನಡೆಸುತ್ತಾಳೆ ಮತ್ತು ಉತ್ತಮ ಮಾತುಗಳಾಗಿರುತ್ತಾಳೆ. ಧನೇಶನು ಧನಸ್ಥಾನದಲ್ಲಿರುವದು ಶ್ರೀಮಂತಿಕೆಯ ಲಕ್ಷಣವನ್ನು ತೋರಿಸುತ್ತದೆ. (೩) ಧನೇಶನು ತೃತೀಯದಲ್ಲಿದ್ದರೆ ಜಗಳಗಂಟ ಸ್ವಭಾವವಿರುವದು. (೪) ಧನೇಶನು ಚತುರ್ಥದಲ್ಲಿದ್ದರೆ ಧನಾಗಮನ ಸೂಚಕವು, ೫) ಧನೇಶನು ಪಂಚಮದಲ್ಲಿದ್ದರೆ ವಕ್ತೃತ್ವ, ಸಂಗೀತ, ಸಾಹಿತ್ಯ ಮುಂತಾದ ಕಲೆಗಳಲ್ಲಿ ನೈಪುಣ್ಯತೆಯ ಸೂಚಕವು (೬) ಧನೇಶನು ಶುಭಗ್ರಹನಿದ್ದು ಷಷ್ಠದಲ್ಲಿದ್ದರೆ ಭಾಗ್ಯವಂತಳು ಆದರೆ ನಿತ್ಯ ರೋಗಪೀಡಿತಳು ಧನೇಶನು ಪಾಪಗ್ರಹನಿದ್ದು, ಷಷ್ಠದಲ್ಲಿದ್ದರೆ, ಧನಕ್ಷಯವಾಗುವದು. (೭) ಧನೇಶನು ಸಪ್ತಮದಲ್ಲಿದ್ದರೆ ವಿವಾಹದ ನಂತರ ಭಾಗ್ಯೋದಯವು. (೮) ಧನೇಶನು ಅಷ್ಟಮದಲ್ಲಿದ್ದರೆ ಆ ಸ್ತ್ರೀಯಳಿಗೆ ಕೌಟುಂಬಿಕ ಸುಖದ ಅಭಾವವಿರುವುದು. (೯) ಧನೇಶನು ಭಾಗ್ಯದಲ್ಲಿದ್ದರೆ ಪಿತ್ರಾರ್ಜಿತ ಸಂಪತ್ತಿನ ಸೌಖ್ಯ ಹಾಗೂ ಆಕಸ್ಮಿಕ ಧನಲಾಭವಾಗುವುದು. (೧೦) ಧನೇಶನು ದಶಮದಲ್ಲಿದ್ದರೆ ಪ್ರತಿಷ್ಠಿತ ಮನೆತನದ ಪತಿಯು ದೊರೆಯುವನು. (೧೧) ಧನೇಶನು ಲಾಭಸ್ಥಾನದಲ್ಲಿದ್ದರೆ ಅನೇಕ ಬಗೆಯಿಂದ ದ್ರವ್ಯಲಾಭವಾಗುತ್ತದೆ. (೧೨) ಧನೇಶನು ವ್ಯಯದಲ್ಲಿದ್ದರೆ ಮುಂದುಗಾರಳೂ ನೇತ್ರ ದೋಷದಿಂದ ಪೀಡಿತಳೂ ಆಗುವಳು.

೩

# ಸಹಜ ಸ್ಥಾನ

ಕುಂಡಲಿಯಲ್ಲಿಯ ತೃತೀಯ ಸ್ಥಾನಕ್ಕೆ ಸಹಜಸ್ಥಾನ-ನ್ನುತ್ತಾರೆ. ಈ ಸ್ಥಾನದಿಂದ ಬಂಧುಭಗಿನಿಯರ ಸೌಖ್ಯ, ಪರಾಕ್ರಮ, ಹಸ್ತಾಕ್ಷರ, ಸ್ನೇಹ ಸಂಬಂಧ, ಕಲಾ ಕೌಶಲ್ಯದ ಅಭಿರುಚಿ, ಕೀರ್ತಿ, ಕರ್ಣರೋಗ ಮುಂತಾದ ವಿಷಯಗಳನ್ನು ನೋಡಲು ಬರುತ್ತದೆ.

**ಬಂಧುಭಗಿನಿಯರು :—** ತೃತೀಯಸ್ಥಾನದ ಕಾರಕನು ಮಂಗಳ, ಯಾವುದೇ ರಾಶಿಯ ಮಂಗಳನು ತೃತೀಯ ಸ್ಥಾನದಲ್ಲಿದ್ದರೂ ಶುಭದಾಯಕನು. ರವಿ, ಮಂಗಳ ಅಥವಾ ಬಲಾಢ್ಯ ಗುರು ಇವರು ಸಿಂಹ, ಮೇಷ, ಧನು ಈ ರಾಶಿಗಳಲ್ಲಿದ್ದು ತೃತೀಯದಲ್ಲಿದ್ದ ಸ್ತ್ರೀಯರು ಬಹುತರ ಜ್ಯೇಷ್ಠ ಕನ್ಯೆಯರಾಗಲೀ, ಮನೆಯಲ್ಲಿಯೆ ಹಿರಿಯರಾಗಿಯೂ ಇರುತ್ತಾರೆ. ತೃತೀಯ ಸ್ಥಾನದಲ್ಲಿ ಜಲರಾಶಿಯಿದ್ದರೆ ಸಹೋದರ ಸಹೋದರಿಯರ ಸಂಖ್ಯೆ ಅಧಿಕವಾಗಿರುತ್ತದೆ. ಇದು ಹತ್ತು- ಹನ್ನೊಂದರವರೆಗೆ ಇರಬಹುದು. ಪೃಥ್ವಿ ರಾಶಿಯು ತೃತೀಯ ಸ್ಥಾನದಲ್ಲಿದ್ದರೆ ಸಹೋದರ ಸಹೋದರಿಯರ ಸಂಖ್ಯೆ ೮-೯ರ ವರೆಗೆ ಇರುವುದು. ವಾಯು ರಾಶಿಯಾಗಿದ್ದರೆ ೪-೫ರ ವರೆಗೆ ಇರುವುದು. ಅಗ್ನಿ ರಾಶಿಯಾಗಿದ್ದರೆ ೧-೨ ಇರುವದು ಅಥವಾ ಇದಕ್ಕೂ ಕಡಿಮೆ ಇರುವ ಸಂಭವವಿದೆ ಮಂಗಳನು ಭ್ರಾತೃಕಾರಕ ಗ್ರಹನು. ಆದುದರಿಂದ ಅವನು ಸ್ವಗೃಹ, ಉಚ್ಚ ಅಥವಾ ಮಿತ್ರಕ್ಷೇತ್ರದಲ್ಲಿದ್ದು ತೃತೀಯ, ಷಷ್ಠ, ದಶಮ ಏಕಾದಶ ಈ ಯಾವುದೇ ಸ್ಥಾನದಲ್ಲಿದ್ದರೂ ಬಂಧು-ಸೌಖ್ಯ-ವನ್ನು ಕೊಡುತ್ತಾನೆ. ಮೇಷ ರಾಶಿಯು ಬಂಧುಭಗಿನಿಯರ ಕಡಿಮೆ ಸಂಖ್ಯೆಯನ್ನು ತೋರಿಸುತ್ತದೆ. ಆದರೆ ಅಲ್ಲಿ ಮಂಗಳನಿದ್ದರೆ ಮಾತ್ರ ಬಂಧುಭಗಿನಿಯರ ಸಂಖ್ಯೆ ಅಧಿಕವಾಗಿರುತ್ತದೆ. ಇದರಂತೆ ವೃಶ್ಚಿಕ

ರಾಶಿಯು ತೃತೀಯ ಸ್ಥಾನದಲ್ಲಿದ್ದು ಅಲ್ಲಿ ಮಂಗಳನಿದ್ದರೂ ಅಧಿಕ ಸಂಖ್ಯೆಯನ್ನು ತೋರಿಸುತ್ತದೆ. ಮೇಷ, ಸಿಂಹ, ವೃಶ್ಚಿಕ, ಧನು, ಮೀನ ಈ ರಾಶಿಗಳೊಡನೆ ತೃತೀಯ, ನವಮ, ಏಕಾದಶ ಈ ಮೂರು ಸ್ಥಾನಗಳಲ್ಲಿ ಮಂಗಳನು ಇದ್ದರೆ ಬಂಧು ಭಗಿನಿಯರ ಸೌಖ್ಯವನ್ನು ಕೊಡುತ್ತಾನೆ. ತೃತೀಯೇಶ ಹಾಗೂ ಮಂಗಳನ ಶುಭ-ಸಂಬಂಧವಿದ್ದರೆ ಬಂಧುಗಳ ಅಧಿಕ ಸೌಖ್ಯವನ್ನು ಕೊಡುವವು. ಬಲಾಢ್ಯ ಗುರು, ಚಂದ್ರ, ಮಂಗಳ, ಶುಕ್ರ ಇವರು ಬಂಧು-ಭಗಿನಿಯರ ಸೌಖ್ಯವನ್ನು ಹೆಚ್ಚಾಗಿ ಕೊಡುತ್ತಾರೆ.

ತೃತೀಯ ಸ್ಥಾನದಲ್ಲಿ ರವಿಯಿದ್ದ ಸ್ತ್ರೀಯರು ಬಂಧು-ಭಗಿನಿಯರಲ್ಲಿ ಓರಿಯರಿದ್ದು ಅಭಿಮಾನಿಗಳೂ, ಕರ್ತವ್ಯದಕ್ಷರೂ ಇದ್ದು ಧನಾರ್ಜನೆಯಲ್ಲಿ ಸ್ವಾವಲಂಬಿಗಳಾಗಿರುತ್ತಾರೆ. ತೃತೀಯ ಸ್ಥಾನದಲ್ಲಿ ಗುರು, ಚಂದ್ರ ಶುಕ್ರರಿದ್ದರೆ ಸ್ತ್ರೀಯರಿಗೆ ಬಂಧು-ಭಗಿನಿಯರ ಸೌಖ್ಯ ಸಿಗುತ್ತದೆ. ತೃತೀಯ ಸ್ಥಾನದಲ್ಲಿ ಅನೇಕ ಗ್ರಹಗಳಿದ್ದರೆ ಬಂಧು-ಭಗಿನಿಯರ ಸೌಖ್ಯ ಕಡಿಮೆ. ತೃತೀಯ ಸ್ಥಾನದಲ್ಲಿ ಶನಿ ಅಥವಾ ರಾಹು ಇದ್ದರೆ ಬಾಂಧವರ ಸೌಖ್ಯ ಕಡಿಮೆ.

ತೃತೀಯ ಸ್ಥಾನದಲ್ಲಿ ಶುಕ್ರ, ಚಂದ್ರರ ಯುತಿಯಿದ್ದರೆ ಬಂಧುಗಳಗಿಂತ ಭಗಿನಿಯರ ಸಂಖ್ಯೆ ಹೆಚ್ಚಾಗಿದ್ದು ಅವರ ಸೌಖ್ಯ ಸಿಗುತ್ತದೆ. ರವಿ-ಮಂಗಳ, ಗುರು-ಮಂಗಳ, ರವಿ-ಗುರು ಹೀಗಿದ್ದರೆ, ಭಗಿನಿಯರಿಗಿಂತ ಬಂಧುಗಳು ಹೆಚ್ಚಾಗಿರುತ್ತಾರೆ. ಗುರು-ಶುಕ್ರ, ಗುರು-ಚಂದ್ರ, ರವಿ-ಶುಕ್ರ, ರವಿ-ಚಂದ್ರ, ಚಂದ್ರ-ಶುಕ್ರ, ಚಂದ್ರ-ಮಂಗಳ ಹೀಗಿದ್ದರೆ ಬಂಧುಗಳ ಮತ್ತು ಭಗಿನಿಯರ ಸಂಖ್ಯೆ ಸರಿಯಾಗಿರುತ್ತದೆ. ಶನಿ-ಬುಧ, ಶನಿ-ರಾಹುಗಳಿದ್ದರೆ ಬಂಧು-ಭಗಿನಿಯರ ಅಭಾವವಿರುತ್ತದೆ. ಶನಿ-ಮಂಗಳ, ರವಿ-ಶನಿ, ರವಿ-ರಾಹು, ಶನಿ-ಚಂದ್ರ, ರವಿ-ಕೇತು, ಚಂದ್ರ, ಕೇತು, ಚಂದ್ರ, ರಾಹು, ಹೀಗಿದ್ದರೆ ಬಂಧು-ಭಗಿನಿಯರ ಸೌಖ್ಯ ಕಡಿಮೆ. ತೃತೀಯ ಸ್ಥಾನದಲ್ಲಿ ರವಿ, ಚಂದ್ರ, ಮಂಗಳ, ಗುರು, ಶುಕ್ರ ಈ ಯಾವುದೇ ಗ್ರಹವಿದ್ದರೂ ಬಂಧುಭಗಿನಿಯರ ಸೌಖ್ಯ ಸಿಗುತ್ತದೆ.

ಪರಾಕ್ರಮ:— ಪರಾಕ್ರಮವೆಂಬ ಶಬ್ದ ಸ್ತ್ರೀಯರಿಗೆ ಅಷ್ಟೊಂದು ಶೋಭಿಸುವದಿಲ್ಲವೆಂದೇ ಹೇಳಬೇಕು. ತೃತೀಯ ಸ್ಥಾನದಲ್ಲಿ ಬಲಾಢ್ಯ

ಪಾಪಗ್ರಹಗಳಿವೆ ಪುರುಷನಲ್ಲಿ ಹಟವಾದಿ, ದೃಢಸಂಕಲ್ಪ ಮನೋನಿಗ್ರಹ, ಜಗಳಗಂಟತನ, ಸಾಹಸ, ಧೈರ್ಯ, ಶೌರ್ಯ, ಮುಂತಾದ ಗುಣ ದೋಷಗಳು ಅವನ ಪರಾಕ್ರಮಕ್ಕೆ ಶೋಭೆಯನ್ನು ತರುತ್ತವೆ. ಆದರೆ ಇವೇ ಗ್ರಹಗಳು ಸ್ತ್ರೀಯರ ಕುಂಡಲಿಯಲ್ಲಿದ್ದುದಾದರೆ ಮೇಲ್ಕಾಣಿಸಿದ ಗುಣ ದೋಷಗಳು ಅವಳಲ್ಲಿ ಕಂಡುಬರುತ್ತವೆಯೆಂಬುದರಲ್ಲಿ ಸಂಶಯವಿಲ್ಲ.

ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಗಳು ತೃತೀಯ ಸ್ಥಾನದಲ್ಲಿದ್ದು ಅಲ್ಲಿ ರವಿ, ಮಂಗಳನಿದ್ದರೆ ಸ್ತ್ರೀಯರು ಪರಾಕ್ರಮಿಗಳಾಗಿರು-ತ್ತಾರೆ. ಇಂಥ ಸ್ತ್ರೀಯರು ಧನಾರ್ಜನೆಯಲ್ಲಿ ಸ್ವಾವಲಂಬಿಗಳಾಗಿರುವಂಲ್ಲದೆ ಸಾಮಾಜಿಕ ಹಾಗೂ ರಾಜಕೀಯ ರಂಗಗಳಲ್ಲಿಯೂ ಮುಂದುವರಿದವರಾಗಿರು ತ್ತಾರೆ. ಇಂತಹವರಿಗೆ ಹೆಚ್ಚು ವಿದ್ಯೆ ಲಭಿಸುತ್ತದೆ. ಆದರೆ ಇವರ ವೈವಾಹಿಕ ಜೀವನ ತಕ್ಕಮಟ್ಟಿಗೆ ಇದ್ದು, ವಿವಾಹವು ಕೂಡ ತಡವಾಗಿ ಜರುಗುವ ಸಂಭವ ವಿರುತ್ತದೆ. ಇಂತಹರಿಗೆ ಬಂಧುಗಳ ಸಂಪತ್ತೆ ಹಾಗೂ ಸೌಖ್ಯ ಚೆನ್ನಾಗಿರುತ್ತದೆ.

ಮಿಥುನ, ತುಲಾ, ಕುಂಭ, ಮೀನ, ವೃಷಭ ಈ ರಾಶಿಗಳು ತೃತೀಯ ಸ್ಥಾನದಲ್ಲಿದ್ದು, ಅಲ್ಲಿ ಶುಕ್ರನಿದ್ದರೆ ಇಂಥ ಸ್ತ್ರೀಯರು ವಿದ್ಯಾವಂತರಿದ್ದು, ಕಲೆಯಲ್ಲಿ ಪ್ರಖ್ಯಾತರಾಗುತ್ತಾರೆ. ಇಂತಹರಿಗೆ ಸಹೋದರಿಯರು ಬಹಳ.

ಮಿಥುನ, ಕನ್ಯಾ, ವೃಷಭ, ತುಲಾ, ಮಕರ ಈ ರಾಶಿಗಳು ತೃತೀಯ ಸ್ಥಾನದಲ್ಲಿದ್ದು ಅಲ್ಲಿ ಬುಧನಿದ್ದರೆ ಇಂಥ ಸ್ತ್ರೀಯರು ವ್ಯಾಪಾರ ಉದ್ಯಮದಲ್ಲಿ ಪ್ರವೀಣರಾಗಿರುತ್ತಾರೆ.

ಕರ್ಕ, ಧನು, ಮೀನ, ವೃಷಭ ತುಲಾ, ಕುಂಭ ಈ ರಾಶಿಗಳು ತೃತೀಯ ಸ್ಥಾನದಲ್ಲಿದ್ದು, ಅಲ್ಲಿ ಗುರು, ಚಂದ್ರರಿದ್ದರೆ ಇಂಥ ಸ್ತ್ರೀಯರು ವಿದ್ಯೆಯಲ್ಲಿ ಪ್ರವೀಣರಾಗಿರುತ್ತಾರೆ. ಇವರು ಸಾಹಿತಿಗಳೂ ಲೇಖಕಿಯರೂ ಇದ್ದು ಕಾರಕೂನ, ಪ್ರೊಫೆಸರ, ಟೀಚರ ಮುಂತಾದ ಕೆಲಸದಲ್ಲಿ ಪ್ರಖ್ಯಾತರಿರುತ್ತಾರೆ.

**ಹಸ್ತಾಕ್ಷರ :—** ತೃತೀಯ ಸ್ಥಾನದಿಂದ ಹಸ್ತಾಕ್ಷರ ಹಾಗೂ ಕಲೆ-ಗಳಲ್ಲಿಯ ಕೌಶಲ್ಯವನ್ನು ಹೇಳಲಿಕ್ಕೆ ಬರುತ್ತದೆ. ವಾಯುರಾಶಿ ಹಾಗೂ

ವೃಶ್ಚಿರಾಶಿಗಳು ಹಸ್ತಾಕ್ಷರ ಹಾಗೂ ಕಲಾಕೌಶಲ್ಯಕ್ಕೆ ಉತ್ತಮವು. ಅಗ್ನಿರಾಶಿಗಳು ಮಧ್ಯಮ ಹಾಗೂ ಜಲರಾಶಿಗಳು ಕನಿಷ್ಠವಾಗಿರುತ್ತವೆ. ತೃತೀಯ ಸ್ಥಾನದಲ್ಲಿ ಅಗ್ನಿರಾಶಿಯಿದ್ದ ಸ್ತ್ರೀಯರ ಬರಹವು ತೀವ್ರ ಗತಿಯದಾಗಿರುತ್ತದೆ. ಚಂದ್ರ, ಶುಕ್ರ, ಬುಧರು ಬಲಿಷ್ಠರಾಗಿದ್ದು ತೃತೀಯ ಸ್ಥಾನದಲ್ಲಿದ್ದರೆ ಆ ಸ್ತ್ರೀಯರು ಹೆಣಿಕೆ ಚಿತ್ರಕಲಾ ಸಾಹಿತ್ಯ ಮತ್ತು ಅನೇಕ ಕಲೆಗಳಲ್ಲಿ ಪ್ರಾವೀಣ್ಯತೆಯನ್ನು ಪಡೆಯುತ್ತಾರೆ. ರವಿ–ಮಂಗಳರು ತೃತೀಯ ಸ್ಥಾನದಲ್ಲಿದ್ದರೆ ಆಟ–ಪಾಟಗಳಲ್ಲಿ ಉತ್ತಮರಿರುತ್ತಾರೆ ಇವರು ಪಂಚಮ ಸ್ಥಾನದಲ್ಲಿದರುತಊ ಆಟಗಳಲ್ಲಿ ಪ್ರಖ್ಯಾತರೂ ಬಹುಮಾನಿತರೂ ಆಗುತ್ತಾರೆ. ಗುರು ಶನಿ ತೃತೀಯ ಸ್ಥಾನದಲ್ಲಿದ್ದರೆ ಸದ್ಗುಣೆಗಳಿರುತ್ತಾರೆ. ಬುಧ ಶುಕ್ರರ ಯುತಿಯು ತೃತೀಯದಲ್ಲಿದ್ದರೆ, ಲಲಿತ ಕಲೆಗಳಲ್ಲಿ ಪ್ರಖ್ಯಾತರಾಗಿರುತ್ತಾರೆ ವಾಯು ಅಥವಾ ಜಲರಾಶಿಯ ಗುರು ತೃತೀಯ ಸ್ಥಾನದಲ್ಲಿದ್ದರೆ ವಿದ್ಯಾವಂತರಿದ್ದು. ಪರೋಪಕಾರಿಗಳಾಗಿರುತ್ತಾರೆ. ಗುರು, ಶುಕ್ರರ ಯುತಿಯು ತೃತೀಯ ಸ್ಥಾನದಲ್ಲಿರುವುದು ವಿಖ್ಯಾತಿಯನ್ನು ತೋರುತ್ತದೆ. ಮಿಥುನ, ಕನ್ಯಾ ರಾಶಿಯ ರಾಹು ತೃತೀಯದಲ್ಲಿದ್ದರೆ ಹಸ್ತಾಕ್ಷರಗಳು ಉತ್ತಮವಿರುತ್ತವೆ

## ಪ್ರವಾಸ

ಸ್ತ್ರೀಯರ ಪ್ರವಾಸವು ಬಾಲ್ಯದಲ್ಲಿ ಮಾತಾ–ಪಿತೃಗಳೊಂದಿಗೂ ಯೌವನದಲ್ಲಿ ಪತಿಯೊಂದಿಗೂ ವೃದ್ಧಾಪ್ಯದಲ್ಲಿ ಪುತ್ರರೊಂದಿಗೂ ಇರುತ್ತದೆ. ಬಾಲ್ಯಾವಸ್ಥೆಯಲ್ಲಿಯೂ ಪ್ರವಾಸವೆಂದರೆ ವಿದ್ಯೆಗೋಸ್ಕರವಾಗಿರುವದರಿಂದ ಪಂಚಮಸ್ಥಾನವನ್ನು ನೋಡಬೇಕಾಗುವುದು. ತಾರುಣ್ಯಾವಸ್ಥೆಯಲ್ಲಿ ಸಪ್ತಮಸ್ಥಾನವನ್ನು. ಸ್ವಾವಲಂಬನದಿಂದ ಧನಾರ್ಜನೆ ಮಾಡುತ್ತಿರುವವರ ದಶಮಸ್ಥಾನವನ್ನು, ವೃದ್ಧಾಪ್ಯದಲ್ಲಿ ಪಂಚಮ ಹಾಗೂ ಭಾಗ್ಯಸ್ಥಾನವನ್ನೂ ನೋಡಬೇಕಾಗುವದು.

ಚರರಾಶಿಗಳು ಹೆಚ್ಚು ಪ್ರವಾಸವನ್ನು ಕೊಡುತ್ತವೆ. ರವಿ. ಚಂದ್ರ, ಮಂಗಳ, ಶುಕ್ರರು ಮೇಲಿಂದ ಮೇಲೆ ಪ್ರವಾಸವನ್ನು ಕೊಡತಕ್ಕ ಗ್ರಹಗಳು. ತೃತೀಯ ಸಪ್ತಮ ನವಮ, ದ್ವಾದಶ, ಲಗ್ನ ಇವು ಪ್ರವಾಸವನ್ನು ಕೊಡತಕ್ಕ

ತೃತೀಯ ಸ್ಥಾನದಲ್ಲಿ ಚರರಾಶಿಯಿದ್ದು, ತೃತಿಯೇಶನು ಹಾಗೂ ಚಂದ್ರನು ಚರರಾಶಿಯಲ್ಲಿದ್ದರೆ, ಆ ಸ್ತ್ರೀಯು ಹೆಚ್ಚು ಪ್ರವಾಸವನ್ನು ಮಾಡಬೇಕಾಗುತ್ತದೆ. ತೃತೀಯ ಸ್ಥಾನವು ಚರರಾಶಿ ಇದ್ದು, ರವಿ, ಚಂದ್ರ, ಶುಕ್ರ, ಮಂಗಳರಿದ್ದರೆ ಆ ಸ್ತ್ರೀಯರಿಗೆ ಹೆಚ್ಚು ಪ್ರವಾಸ ಇರುತ್ತದೆ. ತೃತೀಯ ದಲ್ಲಿ ರವಿ, ಗುರು, ಇದ್ದರೆ ನೈಮಿತ್ತಿಕ ಪ್ರವಾಸವನ್ನು ಕೊಡುತ್ತಾರೆ. ಶನಿ ಇದ್ದರೆ ದೂರದ ಪ್ರವಾಸವನ್ನು ಕೊಡುತ್ತಾನೆ. ತೃತೀಯಾಧೀಶನು ಭಾಗ್ಯ ಸಪ್ತಮ, ದ್ವಾದಶ (ಚರರಾಶಿಗಳಿದ್ದ) ಸ್ಥಾನಗಳಲ್ಲಿದ್ದರೆ ಆ ಸ್ತ್ರೀಯರಿಗೆ ಬಹಳ ಪ್ರವಾಸ ಇರುತ್ತದೆ. ತೃತೀಯ, ಭಾಗ್ಯ, ದ್ವಾದಶ ಸ್ಥಾನಾಧೀಶರು ಪರಸ್ಪರರ ಮನೆಯಲ್ಲಿದ್ದರೆ ಮೇಲಿಂದ ಮೇಲೆ ಪ್ರವಾಸವನ್ನು ಕೈಕೊಳ್ಳು ತ್ತಾರೆ. ಹೀಗೆ ಪ್ರವಾಸದ ಬಗ್ಗೆ ಹೇಳುವದಾದರೆ ತೃತೀಯ ಸಪ್ತಮ, ಭಾಗ್ಯ, ದ್ವಾದಶ ಲಗ್ನ ಸ್ಥಾನಗಳಿಂದಲೂ ಚರರಾಶಿಗಳಿಂದಲೂ ಚಂದ್ರ, ರವಿ ಶುಕ್ರ, ಮಂಗಳ ಗ್ರಹಗಳಿಂದಲೂ ನೋಡಬೇಕಾಗುತ್ತದೆ. ಸಪ್ತಮ, ಹಾಗೂ ಭಾಗ್ಯ ಸ್ಥಾನಗಳು ದೂರದ ಪ್ರವಾಸವನ್ನು ತೋರಿಸುತ್ತವೆ.

## ಕರ್ಣ (ಕಿವಿ)

ತೃತೀಯ ಹಾಗೂ ಏಕಾದಶ ಸ್ಥಾನಗಳು ಶ್ರವಣೇಂದ್ರಿಯ ಸ್ಥಾನಗಳು. ವಾಯು ರಾಶಿಗಳು ಬಧಿರತ್ವ ಇಲ್ಲವೆ ಕರ್ಣ ರೋಗಗಳನ್ನು ತೋರಿಸುತ್ತವೆ. ಪೃಥ್ವಿ ರಾಶಿಗಳು ಮಂದತ್ವವನ್ನೂ ಅಗ್ನಿ ಹಾಗೂ ಜಲರಾಶಿಗಳು ತೀಕ್ಷ್ಣತೆಯನ್ನು ತೋರಿಸುತ್ತವೆ.

ರವಿ, ಮಂಗಳ, ಗುರು ಈ ಗ್ರಹಗಳು ತೀಕ್ಷ್ಣತೆಯನ್ನು ತೋರಿಸು ತ್ತವೆ. ಶುಕ್ರ, ಚಂದ್ರರು ಮಧ್ಯಮ ತೀಕ್ಷ್ಣತೆಯನ್ನು ತೋರಿಸುತ್ತಾರೆ. ಶನಿ, ಬುಧ, ರಾಹು ಮತ್ತು ಕೇತು ಗ್ರಹಗಳು ಬಧಿರತ್ವವನ್ನು ಅಥವಾ ಕರ್ಣರೋಗವನ್ನು ತೋರಿಸುತ್ತವೆ.

ಅಥವಾ ರವಿ-ಶನಿಗಳ ಯುತಿ ಇದ್ದರೆ (೩) ತೃತೀಯಾಧಿಪತಿಯಾದ ಬುಧನು ೬, ೮, ೧೨ ಸ್ಥಾನಗಳಿದ್ದರೆ (೪) ಶನಿಯಿಂದ ೪ನೆಯ ಸ್ಥಾನದಲ್ಲಿ ಬುಧ ಇದ್ದು, ತೃತಿಯೇಶನು ೬, ೮, ೧೨ ಸ್ಥಾನಗಳಲ್ಲಿದ್ದರೆ (೫) ರಾತ್ರಿ ಜನನವಾಗಿದ್ದು ಷಷ್ಠದಲ್ಲಿ ಶನಿ-ಬುಧರ ಯುತಿಯು ಇದ್ದರೆ (೬) ೧೨ನೆಯ ಸ್ಥಾನದಲ್ಲಿ ಶುಕ್ರನೂ ಮತ್ತು ಏಕಾದಶ ಸ್ಥಾನದಲ್ಲಿ ಬುಧನೂ ಇದ್ದರೆ (೭) ತೃತೀಯದಲ್ಲಿ ಶನಿಯಿದ್ದು, ಏಕಾದಶದಲ್ಲಿ ಬುಧನೊಬ್ಬನೇ ಇಲ್ಲವೆ ತೃತೀಯದಲ್ಲಿ ಬುಧನೊಬ್ಬನೇ ಇದ್ದು, ಏಕಾದಶದಲ್ಲಿ ಶನಿಯು ಇದ್ದರೆ.

ಹೀಗೆ ಮೇಲೆ ಕಂಡ ಯೋಗಗಳು ಸ್ತ್ರೀಯರ ಕುಂಡಲಿಯಲ್ಲಿ ಇದ್ದರೆ ಆ ಸ್ತ್ರೀಯರು ಬಧಿರರು ಇಲ್ಲವೆ ಕರ್ಣರೋಗದಿಂದ ಪೀಡಿತರಾದವರು ಇಲ್ಲವೆ ಮಂದ ಶ್ರವಣಗಳು ಇರುತ್ತಾರೆ.

## ತೃತೀಯೇಶನ ಪರಿಣಾಮ

ರವಿಯು ತೃತಿಯೇಶನಾಗಿದ್ದರೆ ವಿಶೇಷವಾಗಿ ಪ್ರವಾಸವನ್ನು ಹೆಚ್ಚು ಕೊಡುತ್ತಾನೆ. ಮತ್ತು ಬಂಧು-ಮಿತ್ರರ ಸೌಖ್ಯ ಹಾಗೂ ಯಾವಾಗಲೂ ತಂದೆಯ ಸಂಗಡ ಇರುವಿಕೆಯನ್ನೂ ಕೊಡುತ್ತಾನೆ. ( ತಂದೆಯ ಸಂಗಡ ಪ್ರವಾಸ ).

ತೃತಿಯೇಶನು ಚಂದ್ರನಿದ್ದರೆ ಪ್ರವಾಸಮಯ ಜೀವನವು. ಮತ್ತು ಮನೋರಂಜಕ, ಧಾರ್ಮಿಕ, ಮತ್ತು ಶೈಕ್ಷಣಿಕ ಮುಂತಾದ ಅನೇಕ ಬಗೆಯ ಪ್ರವಾಸಗಳು ಜೀವನದಲ್ಲಿ ಲಭಿಸುತ್ತವೆ. ಇಂಥ ಸ್ತ್ರೀಯರು ಪಟ್ಟಣದಲ್ಲಿ ವಾಸವಾಗಿರುತ್ತಾರೆ

ತೃತೀಯೇಶನು ಮಂಗಳನಿದ್ದರೆ ಆ ಸ್ತ್ರೀಯರ ಪ್ರವಾಸ ತಕ್ಕಮಟ್ಟಿಗೆ ಇಂಥ ಸ್ತ್ರೀಯರು ಯಾವದೇ ವಿಷಯವನ್ನು ಗೌಪ್ಯವಾಗಿ ಇಡಲು ಅಸಮರ್ಥರಿರುತ್ತಾರೆ. ಇವರ ಬಾಯಲ್ಲಿ ಒಂದು ಮಾತೂ ನಿಲ್ಲುವದಿಲ್ಲ. ತೃತೀಯೇಶನು ಮಂಗಳನಿದ್ದ ಸ್ತ್ರೀಯರು ಸಾಹಸಿಗಳು, ಧೈರ್ಯಶಾಲಿಗಳಾಗಿದ್ದು, ಉಚಿತ ಭಾಷಣಕಾರರಾಗಿರುತ್ತಾರೆ.

ತೃತೀಯೇಶನು ಬುಧನಿದ್ದರೆ, ನೃತ್ಯ, ಸಂಗೀತ, ಸಾಹಿತ್ಯ ಮುಂತಾದ ಕಲೆಗಳಲ್ಲಿ ಪ್ರವೀಣರಿದ್ದು ವಾಕ್ಪಟುಗಳೂ ಆಗಿರುತ್ತಾರೆ. ಇಂಥ ಸ್ತ್ರೀಯರಿಗೆ

ಅನೇಕ ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸುವ ಸಂಯೋಗಗಳು ಒದಗುತ್ತವೆ. ಎಲ್ಲ ವಿದ್ಯೆಗಳನ್ನು ಕಲಿಯಬೇಕೆಂಬ ಪ್ರವೃತ್ತಿಯುಳ್ಳ ಈ ಸ್ತ್ರೀಯರು ಯಾವುದನ್ನೂ ಪೂರ್ತಿಗೊಳಿಸಲಾರರು. (Jack of all trades but master of none) ಈ ಸ್ತ್ರೀಯರು ಅಲಸಿಗಳಾಗಿರುತ್ತಾರೆ.

ತೃತೀಯೇಶನು ಗುರು ಇದ್ದರೆ ಬಂಧು-ಭಗಿನಿಯರ ಸೌಖ್ಯ ಸಿಗುತ್ತದೆ. ಹಾಗೂ ಇವರು ಆಧ್ಯಾತ್ಮಿಗಳಿದ್ದು, ಎಲ್ಲರ ಸಂಗಡ ಹೊಂದಿಕೊಂಡು ಹೋಗುವ ಪ್ರವೃತ್ತಿಯುಳ್ಳವರಾಗಿರುತ್ತಾರೆ. ಇವರಿಗೆ ಎಲ್ಲ ಬಗೆಯ ಸೌಖ್ಯವು ಸಿಗುತ್ತದೆ. ಆದರೆ ಮುಂದುವರಿದು ಕೆಲಸ ಮಾಡುವ ಪ್ರವೃತ್ತಿಯುಳ್ಳವರಲ್ಲ.

ತೃತೀಯೇಶನು ಶುಕ್ರನಿದ್ದರೆ ಕಲಾಕೌಶಲ್ಯದ ಪ್ರಾವೀಣ್ಯತೆಯನ್ನೂ, ವಿಲಾಸಮಯ ಜೀವನವನ್ನೂ, ಅನೇಕ ಬಗೆಯ ಪ್ರವಾಸವನ್ನೂ ಕೊಡುತ್ತಾನೆ. ಇಂಥ ಸ್ತ್ರೀಯರಿಗೆ ಬಂಧು ಭಗಿನಿಯರ ಹಾಗೂ ಆಪ್ತೇಷ್ಟರ ಸೌಖ್ಯ ಚೆನ್ನಾಗಿರುತ್ತದೆ. ಇಂಥ ಸ್ತ್ರೀಯರು ತನುಮನಧನದಿಂದ ಸಹಾಯವನ್ನು ಮಾಡುವದಕ್ಕೂ ಅದರಂತೆಯೇ ತಿರುಗಿ ಪಡೆಯಲು ಸಹ ಹಿಂದುಮುಂದೆ ನೋಡಲಾರರು.

ತೃತೀಯೇಶನು ಶನಿಯಿದ್ದರೆ ಮಾತ್ರ ಸೌಖ್ಯ ಕಡಿಮೆ ಇಂಥ-ಸ್ತ್ರೀಯರಿಗೆ ಕಲಾಕೌಶಲ್ಯದಲ್ಲಿ ಅಭಿರುಚಿ ಕಡಿಮೆ ಇವರು ಆಧ್ಯಾತ್ಮಿಗಳಾಗಿದ್ದು, ಬಂಧು-ಬಳಗಗಳ ಸೌಖ್ಯವನ್ನು ಪಡೆಯಲಾರರು.

### ತೃತೀಯ ಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ :— ಸಹೋದರ ಸಹೋದರಿಯರಲ್ಲಿ ಹಿರಿಯಳು. (ಜ್ಯೇಷ್ಠ ಕನ್ಯೆ). ಸಹೋದರ-ಸಹೋದರಿಯರ ಸಂಖ್ಯೆ ಕಡಿಮೆ. ಸಮಾಜದಲ್ಲಿ ಶ್ರೇಷ್ಠತ್ವ-ಭಾಗ್ಯಶಾಲಿಗಳೂ, ಅಧಿಕಾರಿಗಳೂ ಆಗಿರುತ್ತಾರೆ. ಮೇಷ, ಸಿಂಹ ರಾಶಿಗಳ ತೃತೀಯ ಸ್ಥಾನದಲ್ಲಿದ್ದ ರವಿಯು ಪ್ರಖ್ಯಾತಿಯನ್ನೂ ಸ್ವಾವಲಂಬನದಿಂದ ಧನಾರ್ಜನೆಯನ್ನೂ, ವಿದ್ಯಾಸಂಪನ್ನತೆಯನ್ನೂ ಕೊಡುತ್ತಾನೆ. ಜಲರಾಶಿಯ ರವಿ ತೃತೀಯ ಸ್ಥಾನದಲ್ಲಿದ್ದರೆ ಪ್ರವಾಸವನ್ನು ನೀರಿನ ಮೇಲೆ ಕೊಡುತ್ತಾನೆ. ಅಗ್ನಿರಾಶಿಯ ತೃತೀಯ ಸ್ಥಾನದಲ್ಲಿದ್ದ ರವಿಯು ಸಮಾಜ

ಧುರೀಣರನ್ನಾಗಿಯೂ, ರಾಜಕಾರಣೆಯನ್ನಾಗಿಯೂ ಮಾಡುತ್ತಾನೆ. ವಾಯು ರಾಶಿಗಳ ರವಿಯು ತೃತೀಯ ಸ್ಥಾನದಲ್ಲಿರುವದು ಅಶುಭಕಾರಕ ವಾಗೂ ಹಾನಿದಾಯಕವಾಗಿರುತ್ತದೆ. ಜಲರಾಶಿಯು ತೃತೀಯಸ್ಥಾನದಲ್ಲಿದ್ದ ರವಿಯು ಲಾಭದಾಯಕನು. ಪೃಥ್ವಿ ರಾ ಶಿ ಯ ತೃತೀಯಸ್ಥಾನದಲ್ಲಿದ್ದ ರವಿಯು ಅಶುಭದಾಯಕನು.

ಚಂದ್ರ :— ತೃತೀಯ ಸ್ಥಾನದಲ್ಲಿ ಚಂದ್ರನಿದ್ದರೆ ಸಹೋದರ ಸಹೋದರಿಯರ ಸಂಖ್ಯೆ ಬಹಳ. ಅದರಲ್ಲಿಯೂ ಸಹೋದರರಿಗಿಂತ ಸಹೋದರಿಯರು ಬಹಳ. ಇಂಥ ಸ್ತ್ರೀಯರಿಗೆ ಬಂಧು-ಬಳಗದ ಸೌಖ್ಯ ಚೆನ್ನಾಗಿದ್ದು, ಪ್ರವಾಸವು ಮೇಲಿಂದ ಮೇಲೆ ಒದಗುತ್ತದೆ. ಇವರ ಹಸ್ತಾಕ್ಷರಗಳ ಸುಂದರವಾಗಿದ್ದು ಕಲಾಕೌಶಲ್ಯಗಳಲ್ಲಿ ನೈಪುಣ್ಯತೆಯುಳ್ಳವರಾಗುತ್ತಾರೆ. ಇಂಥ ಸ್ತ್ರೀಯರ ಆರ್ಥಿಕ ಪರಿಸ್ಥಿತಿಯು ಚೆನ್ನಾಗಿರುತ್ತದೆ. ಇವರು ಅಹಂಭಾವಿಗಳೂ ಗರ್ವಿಷ್ಠರೂ ಇರುತ್ತಾರೆ. ವೃಷಭ, ಕರ್ಕ, ಮೀನ, ಮಿಥುನ, ಈ ರಾಶಿಗಳ ತೃತೀಯ ಸ್ಥಾನದಲ್ಲಿದ್ದ ಚಂದ್ರನು ಧನವಂತರನ್ನಾಗಿ ಮಾಡುತ್ತಾನೆ. ವಾಯುರಾಶಿಗಳ ತೃತೀಯ ಸ್ಥಾನದಲ್ಲಿದ್ದ ಚಂದ್ರನು ಆಲಸಿಗಳನ್ನಾಗಿಯೂ, ದಯಾನಿಧಿಗಳನ್ನಾಗಿಯೂ ಮಾಡುತ್ತಾನೆ. ಅಗ್ನಿ ರಾಶಿಯು ತೃತೀಯಸ್ಥಾನದಲ್ಲಿದ್ದ ಚಂದ್ರನು ಹೆಚ್ಚು ಅಶುಭದಾಯಕನು. ಚರರಾಶಿಯ ತೃತೀಯ ಸ್ಥಾನದಲ್ಲಿದ್ದ ಚಂದ್ರನು ಹೆಚ್ಚು ಪ್ರವಾಸವನ್ನು ಕೊಡುತ್ತಾನೆ.

ಮಂಗಳ :— ತೃತೀಯ ಸ್ಥಾನದಲ್ಲಿ ಮಂಗಳನಿದ್ದರೆ ಸಹೋದರ ಸಹೋದರಿಯರ ಸಂಖ್ಯೆ ಕಡಿಮೆ. ಆದರೆ ಮೇಷ, ವೃಶ್ಚಿಕ, ಮಕರ, ಸಿಂಹ, ಧನು ಈ ರಾಶಿಗಳ ಮಂಗಳನು ತೃತೀಯದಲ್ಲಿದ್ದರೆ ಸಹೋದರ ಸಹೋದರಿಯರ ಸಂಖ್ಯೆ ಅಧಿಕವಾಗಿರುತ್ತದೆ. ಇವರು ಸ್ವಾಭಿಮಾನಿಗಳೂ ಅಹಂಮನ್ಯರೂ, ಸಾಹಸಿಗಳೂ, ಧೈರ್ಯಶಾಲಿಗಳೂ, ಇರುತ್ತಾರೆ. ಮೇಷ, ವೃಶ್ಚಿಕ, ಮಕರ ಈ ರಾಶಿಗಳ ತೃತೀಯ ಸ್ಥಾನದಲ್ಲಿದ್ದ ಮಂಗಳನು ಪರಾಕ್ರಮಿಗಳನ್ನಾಗಿಯೂ ಸಾಹಸಿಗಳನ್ನಾಗಿಯೂ ಪ್ರಖ್ಯಾತಿಗಳನ್ನಾಗಿಯೂ ಸತತೋದ್ಯೋಗಿಗಳನ್ನಾಗಿಯೂ, ಕೋಪಿಷ್ಠರನ್ನಾಗಿಯೂ ಮಾಡುತ್ತಾನೆ. ತೃತೀಯ ಸ್ಥಾನದಲ್ಲಿ ಮಂಗಳನಿದ್ದ ಸ್ತ್ರೀಯರು ಸಮಾಜಧುರೀಣರಿರುತ್ತಾರೆ. ಮೇಷ.

ವೃಶ್ಚಿಕ, ಮಕರ, ಸಿಂಹ, ಧನು ಈ ರಾಶಿಗಳ ತೃತೀಯ ಸ್ಥಾನದಲ್ಲಿದ್ದ ಮಂಗಳನು ನಾಟ್ಯಕಲೆಯಲ್ಲಿ ಪ್ರಾವೀಣ್ಯತೆಯನ್ನೂ ವಾಹನಚಾಲಕರನ್ನಾಗಿಯೂ, (ಯಾಂತ್ರಿಕ ಜ್ಞಾನವುಳ್ಳವರು) ಮಾಡುತ್ತಾನೆ. ಹಾಗೂ ಈ ಸ್ತ್ರೀಯರು ಸಮಾಜದ ಮುಂದಾಳುಗಳಾಗಿರುತ್ತಾರೆ. (ಪ್ರಾಯಶಃ ವಕೀಲರು, ಸಂಘಸಂಸ್ಥೆಗಳ ಅಧ್ಯಕ್ಷರೂ, ರಾಜಕಾರಣಿಗಳೂ ಇರುತ್ತಾರೆ.) ಬಲಾಢ್ಯ ಮಂಗಳನು ತೃತೀಯ ಸ್ಥಾನದಲ್ಲಿದ್ದರೆ ನೌಕರಿ, ಉದ್ಯೋಗಗಳನ್ನು ಮಾಡಿ ಸ್ವಾವಲಂಬನದಿಂದ ಧನಾರ್ಜನೆಯನ್ನು ಮಾಡುತ್ತಾರೆ. ಅಗ್ನಿರಾಶಿಯ ತೃತೀಯ ಸ್ಥಾನದಲ್ಲಿದ್ದ ಮಂಗಳನು ಸಾಹಸ-ಪರಾಕ್ರಮಗಳಿಗೆ ಅನುಕೂಲನು. ವಾಯುರಾಶಿಯ ತೃತೀಯ ಸ್ಥಾನದಲ್ಲಿದ್ದ ಮಂಗಳನು ಪ್ರತಿಕೂಲನು ಹಾಗೂ ಹಾನಿದಾಯಕನು.

ಬುಧ :— ತೃತೀಯ ಸ್ಥಾನದಲ್ಲಿ ಬುಧನಿದ್ದರೆ ಲಲಿತಕಲೆಗಳಲ್ಲಿ ಪ್ರಖ್ಯಾತಿಯನ್ನು ಕೊಡುತ್ತಾನೆ. ಯಾವದೇ ರಾಶಿಯ ತೃತೀಯ ಸ್ಥಾನದಲ್ಲಿದ್ದ ಬುಧನು ಸಹೋದರ ಸಹೋದರಿಯರ ಸಂಖ್ಯೆಯನ್ನು ಕಡಿಮೆ ತೋರಿಸುತ್ತಾನೆ. ಆದರೆ ಸೌಖ್ಯವನ್ನು ಕೊಡುತ್ತಾನೆ. ಮಿಥುನ, ಕನ್ಯಾ, ವೃಷಭ, ತುಲಾ, ಕುಂಭ, ರಾಶಿಗಳ ತೃತೀಯ ಸ್ಥಾನದಲ್ಲಿದ್ದ ಬುಧನು ಸಾಂಪತ್ತಿಕ ಸ್ಥಿತಿಯನ್ನು ಹೆಚ್ಚಿಸುತ್ತಾನೆ. ಹಾಗೂ ನೃತ್ಯ, ಸಂಗೀತ, ಸಾಹಿತ್ಯಗಳಲ್ಲಿ ಪ್ರಖ್ಯಾತಿಯನ್ನು ಕೊಡುತ್ತಾನೆ. ವಾಯು ಹಾಗೂ ಪೃಥ್ವಿ ರಾಶಿಗಳ ಬುಧನು ತೃತೀಯದಲ್ಲಿರುವವದು ಲಾಭದಾಯಕವು. ಜಲ ಹಾಗೂ ಅಗ್ನಿರಾಶಿಗಳ ತೃತೀಯದಲ್ಲಿರುವ ಬುಧನು ಪ್ರತಿಕೂಲನು

ಗುರು :— ಗುರು ತೃತೀಯ ಸ್ಥಾನದಲ್ಲಿದ್ದರೆ ಸಹೋದರ ಸಹೋದರಿಯರ ಸಂಖ್ಯೆ ಹಾಗೂ ಸೌಖ್ಯವನ್ನು ಅಧಿಕ ಕೊಡುತ್ತಾನೆ. ಇವರು [illegible] ಇದ್ದು, ವಿದ್ಯಾವಂತರಿರುತ್ತಾರೆ. ಕರ್ಕ, ಧನು, ಮೀನ ಈ ರಾಶಿಗಳ ತೃತೀಯ ಸ್ಥಾನದಲ್ಲಿದ್ದ ಗುರುವು ಸಾಂಪತ್ತಿಕ ಸ್ಥಿತಿಯನ್ನೂ ಪ್ರಖ್ಯಾತಿಯನ್ನೂ ಬಂಧುಬಳಗದವರ ಸೌಖ್ಯವನ್ನೂ ಕೊಡುತ್ತಾನೆ. ಜಲರಾಶಿಯ ತೃತೀಯ ಸ್ಥಾನದಲ್ಲಿ ಗುರುವು ಸಾಂಪತ್ತಿಕ ಸ್ಥಿತಿಯನ್ನೂ ಹಾಗೂ ಕೀರ್ತಿಯನ್ನೂ ಕೊಡುತ್ತಾನೆ ವಾಯುರಾಶಿಗಳ

ತೃತೀಯ ಸ್ಥಾನದಲ್ಲಿದ್ದ ಗುರುವು ಕಲಾಕೌಶಲ್ಯದಲ್ಲಿ ನೈಪುಣ್ಯವನ್ನು ಕೊಡುತ್ತಾನೆ. ಪೃಥ್ವಿರಾಶಿಗಳ ತೃತೀಯ ಸ್ಥಾನದಲ್ಲಿದ್ದ ಗುರುವು ಉದಾರಿಗಳನ್ನಾಗಿಯೂ, ಪರೋಪಕಾರಿಗಳನ್ನಾಗಿಯೂ ಸತತೋದ್ಯೋಗಿಗಳನ್ನಾಗಿಯೂ ಮಾಡುತ್ತಾನೆ. ಯಾವದೇ ರಾಶಿಯ ತೃತೀಯ ಸ್ಥಾನದಲ್ಲಿದ್ದ ಗುರುವು ಬಂಧುಬಳಗದ ಸೌಖ್ಯವನ್ನು ಕೊಡುತ್ತಾನೆ.

ಶುಕ್ರ :— ತೃತೀಯ ಸ್ಥಾನದಲ್ಲಿ ಶುಕ್ರನಿದ್ದರೆ ಸಹೋದರ ಸಹೋದರಿಯರ ಸಂಖ್ಯೆ ಹಾಗೂ ಸೌಖ್ಯ ಅಧಿಕ ಮತ್ತು ಸಹೋದರರಿಗಿಂತ ಸಹೋದರಿಯರ ಸಂಖ್ಯೆ ಅಧಿಕವಿರುತ್ತದೆ. ತೃತೀಯ ಸ್ಥಾನದಲ್ಲಿ ಶುಕ್ರನಿದ್ದರೆ ಸಂಗೀತ, ಸಾಹಿತ್ಯ ಮುಂತಾದ ಲಲಿತ ಹಾಗೂ ಭಾವನಾ ಕಲೆಗಳಲ್ಲಿ ಪ್ರಾವಿಣ್ಯತೆ ಹಾಗೂ ಪ್ರಖ್ಯಾತಿಯನ್ನು ಕೊಡುತ್ತಾನೆ. ವೃಷಭ, ತುಲಾ, ಮೀನ ರಾಶಿಗಳ ತೃತೀಯ ಸ್ಥಾನದಲ್ಲಿದ್ದ ಶುಕ್ರನು ಅಧಿಕ ಸಾಂಪತ್ತಿಕ ಸ್ಥಿತಿಯನ್ನು ತೋರಿಸುತ್ತಾನೆ. ವಾಯು ಹಾಗೂ ಪೃಥ್ವಿರಾಶಿಯ ತೃತೀಯ ಸ್ಥಾನದಲ್ಲಿದ್ದ ಶುಕ್ರನು ಕಲಾಕೌಶಲ್ಯ ಹಾಗೂ ಕೀರ್ತಿಯನ್ನು ಕೊಡುತ್ತಾನೆ. ಕರ್ಕ, ವೃಶ್ಚಿಕ ಹಾಗೂ ಅಗ್ನಿರಾಶಿಗಳ ಶುಕ್ರನು ತೃತೀಯ ಸ್ಥಾನದಲ್ಲಿರುವದು ಅಶುಭದಾಯಕವು. ವಾಯು ಹಾಗೂ ಪೃಥ್ವಿರಾಶಿಗಳ ತೃತೀಯ ಸ್ಥಾನದಲ್ಲಿದ್ದ ಶುಕ್ರನು ವಿದ್ಯೆ ಹಾಗೂ ಕಲೆಗಳಲ್ಲಿ ಪ್ರಾವೀಣ್ಯತೆಯನ್ನು, ಅನೇಕ ಬಗೆಯ ಪ್ರವಾಸವನ್ನು ಕೊಡುತ್ತಾನೆ.

ಶನಿ :— ತೃತೀಯ ಸ್ಥಾನದಲ್ಲಿದ್ದ ಶನಿಯು ಸಹೋದರ ಸಹೋದರಿಯರ ಸಂಖ್ಯೆ ಹಾಗೂ ಸೌಖ್ಯವನ್ನು ಕಡಿಮೆ ಕೊಡುತ್ತಾನೆ. ತೃತೀಯ ಸ್ಥಾನದಲ್ಲಿ ಶನಿ ಇದ್ದ ಸ್ತ್ರೀಯರಿಗೆ ಕಲಾಕೌಶಲ್ಯಗಳಲ್ಲಿ ಅಭಿರುಚಿಯು ಇರುವದಿಲ್ಲ. ಇವರ ಅಕ್ಷರಗಳು ಸಹ ಹೊಲಸಾಗಿರುತ್ತವೆ. ಇವರು ವೇದಾಂತಿಗಳೂ, ಅಧ್ಯಾತ್ಮಿಗಳೂ, ದೇವ-ಧರ್ಮಶ್ರದ್ಧೆಯುಳ್ಳವರು. ಯಾವ ಕೆಲಸಕ್ಕೂ ಮುಂದುವರಿಯದ ಸ್ವಭಾವದವರಿರುತ್ತಾರೆ. ವಾಯು ಹಾಗೂ ಪೃಥ್ವಿರಾಶಿಗಳ ತೃತೀಯ ಸ್ಥಾನದಲ್ಲಿರುವ ಶನಿಯು ಲಾಭದಾಯಕನು. ಅಗ್ನಿ ಹಾಗೂ ಜಲರಾಶಿಗಳ ತೃತೀಯ ಸ್ಥಾನದಲ್ಲಿದ್ದ ಶನಿಯು ಹಾನಿದಾಯಕನು. ಯಾವದೇ ರಾಶಿಯ ತೃತೀಯ ಸ್ಥಾನದಲ್ಲಿದ್ದ ಶನಿಯು ಪ್ರತಿಕೂಲನು.

**ರಾಹು-ಕೇತು** :— ಯಾವುದೇ ರಾಶಿಯ ತೃತೀಯ ಸ್ಥಾನದಲ್ಲಿರುವ ರಾಹು, ಕೇತುಗಳು ಸಹೋದರ-ಸಹೋದರಿಯರ ಸಂಖ್ಯೆ ಹಾಗೂ ಸೌಖ್ಯ ಕಡಿಮೆ ಎಂದು ತೋರಿಸುತ್ತವೆ. ಮಿಥುನ, ಕನ್ಯಾ ರಾಶಿಗಳ ತೃತೀಯ ಸ್ಥಾನದ ರಾಹು ಹಾಗೂ ಧನು ಮೀನಗಳ ತೃತೀಯ ಸ್ಥಾನದಲ್ಲಿರುವ ಕೇತು ಪ್ರಖ್ಯಾತಿಯನ್ನು ಹಾಗೂ ಸಾಂಪತ್ತಿಕ ಸೌಖ್ಯವನ್ನು ಕೊಡುತ್ತವೆ. ಸಿಂಹ, ಮೇಷ, ವೃಶ್ಚಿಕ, ರಾಶಿಗಳ ರಾಹು ತೃತೀಯ ಸ್ಥಾನದಲ್ಲಿದ್ದರೆ ಸಾಹಸಿಗಳನ್ನಾಗಿಯೂ ಸತತೋದ್ಯೋಗಿಗಳನ್ನಾಗಿಯೂ ಮಾಡುತ್ತಾನೆ.

### ತೃತೀಯ ಸ್ಥಾನದಲ್ಲಿರುವ ಗ್ರಹಗಳ ಯುತಿ

ಗುರು-ಚಂದ್ರ, ಗುರು-ಶುಕ್ರ, ಗುರು-ಮಂಗಳ, ಬುಧ-ಶುಕ್ರ, ರವಿ-ಮಂಗಳರ ಈ ಯುತಿಗಳು ತೃತೀಯ ಸ್ಥಾನದಲ್ಲಿರುವದು ಲಾಭದಾಯಕವು. ಶನಿ-ಮಂಗಳ, ಶನಿ-ರವಿ, ರವಿ-ಕೇತು, ರವಿ-ರಾಹು, ಶನಿ-ಚಂದ್ರರ ಯುತಿಗಳು ಹಾನಿದಾಯಕಗಳು ಇರುತ್ತವೆ.

### ಭಾವೇಶನ ಫಲ

(೧) ತೃತೀಯಾಧೀಶನು ಲಗ್ನದಲ್ಲಿದ್ದರೆ ಅತ್ಯಲ್ಪ ಧನ ಹಾಗೂ ಬಂಧುಭಗಿನಿಯರಲ್ಲಿ ವಿರೋಧವಿರುತ್ತದೆ. ತೃತೀಯಾಧೀಶನು ಶುಭಗ್ರಹವಿದ್ದು ಲಗ್ನದಲ್ಲಿದ್ದರೆ ಅನುಕೂಲನು. ಪಾಪಗ್ರಹವಿದ್ದರೆ ಹಾನಿದಾಯಕವು. (೨) ತೃತೀಯೇಶನು ಧನಸ್ಥಾನದಲ್ಲಿರುವದು ಸಾಂಪತ್ತಿಕ ದೃಷ್ಟಿಯಿಂದ ಅನುಕೂಲವು (೩) ತೃತೀಯೇಶನು ತೃತೀಯದಲ್ಲಿಯೇ ಇದ್ದರೆ ಬಂಧು-ಭಗಿನಿಯರಿಂದ ಸೌಖ್ಯ ಸಿಗುತ್ತದೆ. ಪರೋಪಕಾರಿಗಳೂ ಪ್ರಖ್ಯಾತರೂ ಇದ್ದು ಸಮಾಜದ ಮುಂದಾಳುಗಳಾಗಿರುತ್ತಾರೆ. (೪) ತೃತೀಯೇಶನು ಚತುರ್ಥದಲ್ಲಿದ್ದರೆ ಮಾತೃ-ಸೌಖ್ಯದ ಅಭಾವ. ಹಾಗೂ ವಾಹನಗಳಿಂದ ಅ[illegible]. (೫) ತೃತೀಯೇಶನು ಪಂಚಮದಲ್ಲಿದ್ದರೆ ಭಾಗ್ಯಶಾಲಿಯರಾಗಿದ್ದು, ಸುಪುತ್ರರ ಮಾತೆಯರಾಗುವರು. ತೃತೀಯೇಶನು ರವಿ, ಮಂಗಳ, ಗುರು ಇದ್ದು ಪಂಚಮದಲ್ಲಿದ್ದರೆ ಪುತ್ರ ಸಂಖ್ಯೆ ಅಧಿಕ. (೬) ತೃತೀಯೇಶನು ಷಷ್ಠದಲ್ಲಿದ್ದರೆ ಬಂಧುವಿರೋಧ. ತೃತೀಯೇಶನು ಪಾಪಗ್ರಹವಿದ್ದು, ಷಷ್ಠದಲ್ಲಿದ್ದರೆ ಶತ್ರು

ನಿರ್ನಾಮರಾಗಿರುತ್ತಾರೆ. (೭) ತೃತೀಯೇಶನು ಸಪ್ತಮದಲ್ಲಿದ್ದರೆ ಪ್ರವಾಸ ಅಧಿಕ. ತೃತೀಯೇಶನು ಗುರು, ಚಂದ್ರ, ಶುಕ್ರನಿದ್ದು ಸಪ್ತಮದಲ್ಲಿದ್ದರೆ ಪತಿ ಸೌಖ್ಯ ಸಿಗುತ್ತದೆ. (೮) ತೃತೀಯೇಶನು ಅಷ್ಟಮದಲ್ಲಿದ್ದರೆ ಬಂಧು ಭಗಿನಿಯರ ಸೌಖ್ಯ ಕಡಿಮ ಹಾಗೂ ವ್ಯಾಧಿಯಿಂದ ಪೀಡಿತರಾಗುವರು. (೯) ತೃತೀಯೇಶನು ನವಮದಲ್ಲಿದ್ದರೆ ಬಂಧು-ಭಗಿನಿಯರ ಸೌಖ್ಯ ಹೆಚ್ಚು. ಹಾಗೂ ವಿವಾಹದ ನಂತರ ಭಾಗ್ಯವೃದ್ಧಿ ತೀರ್ಥಯಾತ್ರಾ ಸಂದರ್ಶನ ಬಹಳ. (೧೦) ತೃತೀಯೇಶನು ದಶಮದಲ್ಲಿದ್ದರೆ ಪಿತೃಸೌಖ್ಯ ಸಿಗುವದು. ಹಾಗೂ ಸ್ವಾವಲಂಬನದಿಂದ ಧನಾರ್ಜನೆ. (೧೧) ತೃತೀಯೇಶನು ಏಕಾದಶ ಸ್ಥಾನದಲ್ಲಿದ್ದರೆ ಸಾಹಸಿಯರು. ತೃತೀಯೇಶನು ಪುರುಷಗ್ರಹವಿದ್ದು ಏಕಾದಶದಲ್ಲಿದ್ದರೆ ಜೇಷ್ಠಬಂಧುವಿನ ಸಹಾಯ (೧೨) ತೃತೀಯೇಶನು ವ್ಯಯಸ್ಥಾನದಲ್ಲಿದ್ದರೆ ಆಪ್ತೇಷ್ಟರಲ್ಲಿ ವಿರೋಧ.



# ಸುಖಸ್ಥಾನ

ಕುಂಡಲಿಯ ಚತುರ್ಥ ಸ್ಥಾನದಿಂದ ಕೆಳಗಿನ ಸಂಗತಿಗಳನ್ನು ನೋಡಲಾಗುವದು. ಮನೆ, ಬಂಗಲೆ, ಸ್ಥಾವರಾಸ್ಟೇಟ, ಕೌಟುಂಬಿಕ ಸೌಖ್ಯ, ಮಾತೃ-ಸೌಖ್ಯ, ಪಿತ್ರಾರ್ಜಿತ ಆಸ್ತಿ, ವಾಹನ-ಸೌಖ್ಯ, ತೋಟಪಟ್ಟಿ ಮುಂತಾದವುಗಳು.

## ಮಾತೃ-ಸೌಖ್ಯ

ಮಾತೃ-ಸೌಖ್ಯದ ಬಗ್ಗೆ ನೋಡಬೇಕಾದರೆ ಚತುರ್ಥ ಸ್ಥಾನ ಚತುರ್ಥಾಧೀಶ, ಚತುರ್ಥಸ್ಥಾನದಲ್ಲಿರುವ ಗ್ರಹ, ಕರ್ಕರಾಶಿ, ಯಾವದೇ ಲಗ್ನದ ಕರ್ಕರಾಶಿಯಲ್ಲಿರುವ ಗ್ರಹಗಳ ಸ್ಥಿತಿ ಮತ್ತು ಶುಕ್ರ, ಚಂದ್ರರನ್ನು ನೋಡಬೇಕಾಗುವದು.

ಶುಕ್ಲಪಕ್ಷದ ರಾತ್ರಿಯಲ್ಲಿಯೂ, ಕೃಷ್ಣಪಕ್ಷದ ಹಗಲಿನಲ್ಲಿಯೂ ಜನ್ಮಿಸಿದರೆ ಚಂದ್ರನು ಮಾತೃಕಾರಕನೆಂದು ತಿಳಿಯಬೇಕು. ಆದರೆ ಶುಕ್ಲಪಕ್ಷದ ಹಗಲಿನಲ್ಲಿಯೂ, ಕೃಷ್ಣಪಕ್ಷದ ರಾತ್ರಿಯಲ್ಲಿಯೂ ಜನ್ಮಿಸಿದರೆ ಶುಕ್ರನು ಮಾತೃಕಾರಕನೆಂದು ತಿಳಿಯಬೇಕು. ಚತುರ್ಥಸ್ಥಾನದಲ್ಲಿ ವೃಷಭ, ಕರ್ಕ, ಸಿಂಹ, ತುಲಾ, ಧನು, ಮೀನ ಈ ರಾಶಿಗಳು ಮಾತೃಸೌಖ್ಯದ ಪೋಷಕ ರಾಶಿಗಳು ಆಗುತ್ತವೆ. ಮಿಥುನ, ಕನ್ಯಾ, ಈ ರಾಶಿಗಳು ಸಾಧಾರಣ ಸುಖವನ್ನು ಕೊಡುತ್ತವೆ. ಮೇಷ, ವೃಶ್ಚಿಕ, ಮಕರ, ಕುಂಭ ಈ ರಾಶಿಗಳು ಮಾರಕವಾದವುಗಳು. ಚಂದ್ರ, ಶುಕ್ರ, ಗುರು ಈ ಗ್ರಹಗಳು ಬಲಾಢ್ಯರಿದ್ದು, ಚತುರ್ಥದಲ್ಲಿದ್ದರೆ ಮಾತೃಸೌಖ್ಯವು ಸಿಗುತ್ತದೆ. ಬಲಾಢ್ಯ ರವಿಯೂ ಸಹ ಮಾತೃಸೌಖ್ಯವನ್ನು ಸಾಧಾರಣವಾಗಿ ಕೊಡುತ್ತಾನೆ. ಯಾವದೇ ರಾಶಿಯ ಮಂಗಳನು ಚತುರ್ಥದಲ್ಲಿದ್ದರೆ ಮಾತೃಸೌಖ್ಯದ ಮಾರಕನು

ಚತುರ್ಥ ಸ್ಥಾನದಲ್ಲಿ ಶನಿ, ಮಂಗಳ, ರಾಹು, ಕೇತು ಯಾರೊಬ್ಬರಿದ್ದರೂ ಮಾತೃಸೌಖ್ಯದ ಅಭಾವವಿರುತ್ತದೆ. ಚತುರ್ಥ ಸ್ಥಾನದಲ್ಲಿ ಚಂದ್ರನಿದ್ದು ಜನ್ಮತಃ ಸಾಡೇಸಾತಿಯಿದ್ದರೆ ಮಾತೃಸೌಖ್ಯ ಸಿಗಲಾರದು.

ರವಿ–ಮಂಗಳ, ಶನಿ-ಮಂಗಳ, ಚಂದ್ರ-ಮಂಗಳ, ಕೇತು-ಶನಿ, ರಾಹು ಶನಿ ಈ ಜೋಡಿಗಳು ಚತುಸ್ಥಾನದಲ್ಲಿದ್ದರೆ ಮಾತೃ ಸೌಖ್ಯವು ಸಿಗಲಾರದು. ರಾಹು ಒಬ್ಬನೇ ಚತುರ್ಥದಲ್ಲಿದ್ದರೂ ಮಾತೃಸೌಖ್ಯ ಸಿಗಲಾರದು. ಯಾವದೇ ಲಗ್ನದ ಕರ್ಕರಾಶಿಯಲ್ಲಿ ಶನಿ-ಮಂಗಳ, ರಾಹು-ಮಂಗಳ, ರಾಹು-ಶನಿ, ಚಂದ್ರ-ಶನಿ ಇದ್ದರೂ ಮಾತೃಸೌಖ್ಯ ಸಿಗಲಾರದು.

## ಮಾತೃಸೌಖ್ಯದ ಅಭಾವದ ಯೋಗಗಳು

(೧) ಚಂದ್ರನು ಷಷ್ಠ, ಅಷ್ಟಮ, ದ್ವಾದಶ ಸ್ಥಾನಗಳಲ್ಲಿ ಕ್ರೂರಗ್ರಹ ಯುಕ್ತನಾಗಿದ್ದರೆ, (೨) ಚತುರ್ಥಸ್ಥಾನದಲ್ಲಿ ಶನಿ–ಮಂಗಳ, ರವಿ–ಶನಿ, ರವಿ-ಕೇತು, ಚಂದ್ರ-ಶನಿ, ಚಂದ್ರ-ರಾಹು, ರಾಹು-ಮಂಗಳ, ರಾಹು-ಶನಿ, ಕೇತು-ಮಂಗಳ, ಕೇತು-ಶನಿ ಈ ಜೋಡಿಗಳಲ್ಲೊಂದಿದ್ದರೆ (೩) ಜನ್ಮತಃ ಸಾಡೇಸಾತಿ ಇಲ್ಲದೆ ಮುಚಮು ಶನಿ ಇದ್ದರೆ (೪) ಚತುರ್ಥ ಸ್ಥಾನದಲ್ಲಿದ್ದ ರವಿ, ಇಲ್ಲವೆ ಮಂಗಳ ಇದ್ದು, ಗೋಚರೀ ಶನಿಯು ಪರಿಭ್ರಮಣ ಚತುರ್ಥಸ್ಥಾನದ ಮೇಲಿಂದ ಇದ್ದರೆ (ಬಾಲ್ಯಾವಸ್ಥೆಯಲ್ಲಿ) (೫) ಚಂದ್ರನಿಂದ ಸಪ್ತಮದಲ್ಲಿ ಪಾಪಗ್ರಹಗಳಿದ್ದರೆ (೬) ಯಾವದೇ ಸ್ಥಾನದಲ್ಲಿ ಚಂದ್ರ-ಶನಿ, ಚಂದ್ರ-ರಾಹು ಇವರ ಯುತಿ ಇದ್ದು ಮಂಗಳನಿಂದ ನೋಡಲ್ಪಟ್ಟರೆ (೭) ಲಗ್ನದಲ್ಲಿ ಕುಜನಿದ್ದು ಚತುರ್ಥದಲ್ಲಿ ಶನಿ ಇದ್ದರೆ ಅಥವಾ ಚತುರ್ಥದಲ್ಲಿ ಕುಜ ಇಲ್ಲವೆ ರವಿ ಇದ್ದು, ದ್ವಿತೀಯದಲ್ಲಿ ಶನಿ ಇದ್ದರೆ (೮) ಶನಿ, ಮಂಗಳರ ಸಮಸಪ್ತಕವು ಚತುರ್ಥ ದಶಮದಲ್ಲಿದ್ದರೆ (೯) ಅನೇಕ ಪಾಪಗ್ರಹಗಳು ಚತುರ್ಥದಲ್ಲಿದ್ದರೆ (೧೦) ಚಂದ್ರನು ಗ್ರಹಣಪೀಡಿತನಾಗಿ ಚತುರ್ಥದಲ್ಲಿದ್ದರೆ (೧೧) ಕ್ಷೀಣಚಂದ್ರನು ಚತುರ್ಥದಲ್ಲಿದ್ದು ಶನಿ-ಮಂಗಳರಿಂದ ಈಕ್ಷಿಸಲ್ಪಟ್ಟರೆ (೧೨) ಚತುರ್ಥೇಶನು ನಿರ್ಬಲನಿದ್ದು ಚತುರ್ಥದಲ್ಲಿ ಕ್ರೂರಗ್ರಹಗಳಿದ್ದರೆ (೧೩) ಮೇಷ, ಕರ್ಕ ಸಿಂಹ, ವೃಶ್ಚಿಕ ಈ ರಾಶಿಗಳ ಶನಿಯು ಚತುರ್ಥದಲ್ಲಿದ್ದರೆ

(೧೪) ಧನಸ್ಥಾನದಲ್ಲಿ ಶನಿ, ತೃತೀಯದಲ್ಲಿ ರಾಹು, ಚತುರ್ಥದಲ್ಲಿ ಮಂಗಳ ಇದ್ದರೆ (೧೫) ಜೇಷ್ಠಾ, ಮೂಲಾ, ಅಶ್ಲೇಷಾ ನಕ್ಷತ್ರಗಳಲ್ಲಿ ಜನ್ಮಿಸ್ಸಿ ಚತುರ್ಥಾಧೀಶನು ಅಸ್ತಂಗತ, ನೀಚ, ವೃದ್ಧಾವ್ಯ ಶತೃಕ್ಷೇತ್ರಿ ಇದ್ದರೆ,

ಮೇಲೆ ತೋರಿಸಿದ ಯೋಗಗಳು ಇದ್ದರೆ ಮಾತೃಸೌಖ್ಯದ ಅಭಾವ ಇರುತ್ತದೆ.

## ಮಾತಾ ದೀರ್ಘಾಯು ಯೋಗ

(೧) ವೃಷಭ ಕರ್ಕ, ತುಲಾ, ಮೀನ ಈ ರಾಶಿಗಳ ಚಂದ್ರ, ಗುರು, ಶುಕ್ರರು ಚತುರ್ಥದಲ್ಲಿದ್ದರೆ (೨) ಗುರು-ಚಂದ್ರ, ಗುರು-ಶುಕ್ರ, ಶುಕ್ರ-ಚಂದ್ರ, ಇವರ ಯುತಿಯು ಚತುರ್ಥದಲ್ಲಿದ್ದರೆ (೩) ಬಲವಾನ ಚಂದ್ರನು ಚತುರ್ಥದಲ್ಲಿದ್ದರೆ (೪) ಗುರುವಿನ ದೃಷ್ಟಿಯು ಚತುರ್ಥದಲ್ಲಿದ್ದರೆ (೫) ಶುಕ್ರ-ಚಂದ್ರರ ಯುತಿ ವೃಷಭ, ತುಲಾ, ಮೀನದಲ್ಲಿದ್ದರೆ (೬) ಗುರು-ಚಂದ್ರರ ಯುತಿ ಕರ್ಕ, ಧನು, ಮೀನದಲ್ಲಿದ್ದರೆ (೭) ಕ್ರೂರ ಗ್ರಹಗಳ ದೃಷ್ಟಿರಹಿತ ಚತುರ್ಥಸ್ಥಾನವಿದ್ದರೆ,

ಈ ಯೋಗಗಳಿದ್ದರೆ ಮಾತಾ ದೀರ್ಘಾಯು ಯೋಗವಿರುತ್ತದೆ.

## ಗೃಹ-ಸೌಖ್ಯ ಅಥವಾ ಐಹಿಕಸುಖ

ಚಂದ್ರ, ಗುರು, ಶುಕ್ರ, ಬುಧ ಹಾಗೂ ಬಲಾಢ್ಯ ರವಿ ಈ ಗ್ರಹಗಳು ಗೃಹಸೌಖ್ಯ, ಮಾನಸಿಕಸುಖ, ಐಹಿಕ ಸೌಖ್ಯವನ್ನು ಕೊಡತಕ್ಕಂಥವುಗಳು. ಮೇಲೆ ಹೇಳಿದ ಯಾವದಾದರೂ ಎರಡು ಗ್ರಹಗಳ ಯುತಿ ಚತುರ್ಥ ಸ್ಥಾನದಲ್ಲಿದ್ದ ಸ್ತ್ರೀಯರು ಎಂಥ ಪ್ರಸಂಗ ಬಂದರೂ ಶಾಂತಿ ಸಮಾಧಾನ ಮತ್ತು ಸೌಖ್ಯದಿಂದ ಕಾಲ ಕಳೆಯುತ್ತಾರೆ.

ಬಲಾಢ್ಯ ಶನಿ ಅಥವಾ ಮಂಗಳ ಚತುರ್ಥದಲ್ಲಿದ್ದ ಸ್ತ್ರೀಯರು ಎಂಥ ಐಶ್ವರ್ಯದಲ್ಲಿ ಬೆಳೆದರೂ ಅಥವಾ ಅಧಿಕಾರಿಗಳ ಪತ್ನಿ ಇಲ್ಲವೆ ವ್ಯಕ್ತಿಯಾದಾಗ್ಯೂ ಅವರಿಗೆ ಐಹಿಕ ಸುಖ ಸಿಗಲಾರದು. ಅವರ ಮಹತ್ವಾಕಾಂಕ್ಷೆಗಳು ಬಹಳವಿರುತ್ತವೆ. ಲಕ್ಷಾಧೀಶರ ಪತ್ನಿಯಾದಾಗ್ಯೂ ಕೋಟ್ಯಾಧೀಶರ ಪತ್ನಿಯಾಗಬೇಕೆಂಬ ಪ್ರವೃತ್ತಿಯುಳ್ಳವರಿರುತ್ತಾರೆ. ಇಂಥ

ಸ್ತ್ರೀಯರಿಗೆ ಯಾವ ತರಹದ ಸೌಖ್ಯವು ದೊರೆತರೂ ಮನಸ್ಸಿಗೆ ಶಾಂತಿಯು ಇರುವದಿಲ್ಲ.

ಬಲಾಢ್ಯ ರವಿ ಚತುರ್ಥ ಸ್ಥಾನದಲ್ಲಿದ್ದರೆ ಪಿತ್ರಾರ್ಜಿತ ಸೌಖ್ಯ ಚನ್ನಾಗಿರುತ್ತದೆ. ಹಾಗೂ ಇಂಥ ಸ್ತ್ರೀಯರಿಗೆ ತವರುಮನೆಯ ಸೌಖ್ಯ ಚನ್ನಾಗಿ ಸಿಗುತ್ತದೆ.

ಯಾವದೇ ರಾಶಿಯು ರಾಹು ಚತುರ್ಥದಲ್ಲಿದ್ದರೆ ಮನಸ್ಸಿಗೆ ಶಾಂತತೆ ಸಿಗಲಾರದು. ಇಂಥ ಸ್ತ್ರೀಯರಿಗೆ ಅತ್ತೆ, ಮಾವ, ಭಾವ, ನಾದಿನಿ, ಮೈದುನ ಮುಂತಾದ ಮನೆಯ ಜನರಿಂದ ಕಿರುಕಳ ಉಪದ್ರವು ಬಹಳವಿರುತ್ತದೆ ಅದೇ ರಾಹು ಕ್ರೂರ ಗ್ರಹಗಳಿಂದ ಯುಕ್ತನಾಗಿದ್ದರೆ ಅನೇಕ ತೊಂದರೆಗಳಿಗೆ ಈಡಾಗುತ್ತಾರೆ.

ಚಂದ್ರ, ಶುಕ್ರ, ಗುರು, ಈ ಗ್ರಹಗಳು ಬಲಿಷ್ಠರಾಗಿ ಚತುರ್ಥದಲ್ಲಿದ್ದರೆ ಆಯುಷ್ಯದ ಉತ್ತರಾರ್ಧದ ವರೆಗೂ ಸುಖಮಯವಾಗಿ ಹೋಗುವದು

**ಸ್ಥಾವರ, ಜಂಗಮ ಆಸ್ತಿ**

ಚತುಸ್ಥಾನದಿಂದ ಸ್ಥಾವರ ಮತ್ತು ಜಂಗಮ ಆಸ್ತಿಗೆ ಸಂಬಂಧಿಸಿದ ಎಲ್ಲ ವಿಷಯಗಳು ಗೊತ್ತಾಗುತ್ತವೆ ಸ್ಥಾವರ ಜಂಗಮದ ಕಾರಕ ಗ್ರಹಗಳೆಂದರೆ ಶನಿ, ಮಂಗಳರು. ವಾಹನ ಸೌಖ್ಯದ ಹಾಗೂ ಮನೆ ಇಮಾರತಿ ಬಂಗಲೆಗಳ ಸೌಖ್ಯದ ಕಾರಕರೆಂದರೆ ಶುಕ್ರ, ಚಂದ್ರ, ಮತ್ತು ಗುರು. ಚತುರ್ಥೇಶನು ಶನಿ ಅಥವಾ ಮಂಗಳನಿದ್ದು, ಬಲಿಷ್ಠನಾಗಿ ಯಾವದೇ ಸ್ಥಾನದಲ್ಲಿದ್ದರೂ ಸ್ಥಾವರ ಆಸ್ತಿಯ ಸೌಖ್ಯವು ಸಿಗುತ್ತದೆ ಚತುರ್ಥೇಶನು ಶುಭಗ್ರಹನಿದ್ದು, ಉದಿತ ಗೋಲಾರ್ಧಗಳಾದ ೭, ೯, ೧೦, ೧೧ ಈ ಸ್ಥಾನಗಳಲ್ಲಿದ್ದರೆ ಅಥವಾ ಲಗ್ನದಲ್ಲಿದ್ದರೆ ಸ್ಥಾವರ ಆಸ್ತಿಯ ಸೌಖ್ಯ ಸಿಗುತ್ತದೆ ಚತುರ್ಥ ಸ್ಥಾನದಲ್ಲಿ ನಿರ್ಬಲರಾದ ಚಂದ್ರ, ಗುರು, ಶುಕ್ರರಿದ್ದು, ಚತುರ್ಥೇಶನು ದುರ್ಬಲನಾಗಿದ್ದರೆ ಸ್ಥಾವರ ಆಸ್ತಿಯ ಸೌಖ್ಯವು ಸಿಗಲಾರದು. ಮೇಷ, ವೃಶ್ಚಿಕ, ಮಕರ ರಾಶಿಗಳ ಮಂಗಳನು ಚತುರ್ಥದಲ್ಲಿದ್ದರೆ ಸ್ವಪರಾಕ್ರಮದಿಂದ ಸ್ಥಾವರ ಆಸ್ತಿಯನ್ನು ಸಂಪಾದಿಸುತ್ತಾರೆ. ಮಿಥುನ, ತುಲಾ, ಕುಂಭ

ಮತ್ತು ಮಕರ ಈ ರಾಶಿಗಳ ಶನಿಯು ಚತುರ್ಥದಲ್ಲಿದ್ದರೂ ಸ್ಥಾವರ ಆಸ್ತಿಯ ಸೌಖ್ಯವು ಸಿಗುತ್ತದೆ. ವೃಷಭ ತುಲಾ ಇಲ್ಲವೆ ಮೀನ, ರಾಶಿಯ ಶುಕ್ರನು ಚತುರ್ಥದಲ್ಲಿದ್ದರೆ ಸ್ಥಾವರ ಆಸ್ತಿಯ ಸೌಖ್ಯವು ಹಾಗೂ ವಾಹನ ಸೌಖ್ಯವು ಲಭಿಸುತ್ತದೆ. ವೃಷಭ, ಕರ್ಕ, ಮೀನ, ರಾಶಿಗಳ ಚಂದ್ರನು ಚತುರ್ಥದಲ್ಲಿದ್ದರೆ ಸ್ಥಾವರ ಆಸ್ತಿಯ ಮತ್ತು ವಾಹನ ಸೌಖ್ಯವು ಲಭಿಸುತ್ತದೆ. ಕರ್ಕ, ಧನು, ಮೀನ ಈ ರಾಶಿಗಳ ಗುರು ಚತುರ್ಥದಲ್ಲಿದ್ದರೂ ಸ್ಥಾವರ ಆಸ್ತಿಯ ಮತ್ತು ವಾಹನ ಸೌಖ್ಯವು ಸಿಗುತ್ತದೆ.

### ಚತುರ್ಥ ಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ :— ಪಿತ್ರಾರ್ಜಿತ ಸೌಖ್ಯ ಚೆನ್ನಾಗಿರುತ್ತದೆ. ಅಗ್ನಿರಾಶಿಯ ರವಿಯು ಚತುರ್ಥದಲ್ಲಿದ್ದರೆ ಶ್ರೇಷ್ಠ ಅಧಿಕಾರಿಯ ತಾಯಿಯಾಗುತ್ತಾಳೆ. ವಾಯುರಾಶಿಗಳ ಹಾಗೂ ಮಕರ ರಾಶಿಯ ರವಿಯು ಚತುರ್ಥದಲ್ಲಿದ್ದರೆ ಅನೇಕ ಸಂಕಟಗಳು ಒದಗುತ್ತವೆ. ಹಾಗೂ ಹೃದಯರೋಗದ ಬಾಧೆಯಿರುತ್ತದೆ.

ಚಂದ್ರ:— ಯಾವದೇ ರಾಶಿಯ ಚಂದ್ರನು ಚತುರ್ಥದಲ್ಲಿರುವದು ಲಾಭದಾಯಕವು. ವೃಷಭ, ಕರ್ಕ, ಸಿಂಹ, ತುಲಾ, ಧನು, ಮೀನ ಈ ರಾಶಿಗಳ ಚಂದ್ರನು ಚತುರ್ಥದಲ್ಲಿದ್ದರೆ ಮಾತೃಸೌಖ್ಯವೂ, ವಾಹನ ಸೌಖ್ಯವೂ, ಸ್ಥಾವರ ಆಸ್ತಿಯ ಸೌಖ್ಯವೂ, ಸುಂದರವಾದ ಇಮಾರತಿಗಳ ಸೌಖ್ಯವೂ. ತೋಟಪಟ್ಟಿಗಳ ಸೌಖ್ಯವೂ ಸಿಗುವದಲ್ಲದೆ ಇಂಥ ಸ್ತ್ರೀಯರ ವಿಲಾಸಿಗಳೂ, ಉದಾರಿಗಳೂ ಇರುತ್ತಾರೆ. ಚರರಾಶಿಯ ಹಾಗೂ ದ್ವಿಸ್ವಭಾವರಾಶಿಯ ಚಂದ್ರನು ಚತುರ್ಥದಲ್ಲಿದ್ದರೆ ಮೇಲಿಂದ ಮೇಲೆ ಪ್ರವಾಸ ಕೊಡುತ್ತಾನೆ.

ಮಂಗಳ:— ಯಾವದೇ ರಾಶಿಯ ಮಂಗಳನು ಚತುರ್ಥದಲ್ಲಿದ್ದರೆ ಮಾತೃಸೌಖ್ಯದ ಅಭಾವವನ್ನು ತೋರಿಸುತ್ತದೆ. ಮೇಷ. ವೃಶ್ಚಿಕ. ಮಕರ, ಸಿಂಹ, ಧನು ಈ ರಾಶಿಗಳ ಮಂಗಳನು ಚತುರ್ಥದಲ್ಲಿದ್ದರೆ ಸ್ಥಾವರಲಾಭ ದಿಂದ ಧನಾರ್ಜನೆ ಮಾಡಿ ಸ್ಥಾವರ ಆಸ್ತಿಯನ್ನು ಸಂಪಾದಿಸುವುದಲ್ಲದೆ ವಾಹನಸೌಖ್ಯವನ್ನೂ ಪಡೆಯುವರು

ಬುಧ :— ಚತುರ್ಥ ಸ್ಥಾನದಲ್ಲಿ ಬುಧನಿದ್ದರೆ ಮಾತೃಸೌಖ್ಯ ತಕ್ಕಮಟ್ಟಿಗೆ. ವಾಯುರಾಶಿ ಹಾಗೂ ಪೃಥ್ವಿರಾಶಿಗಳ ಬುಧನು ಚತುರ್ಥದಲ್ಲಿದ್ದರೆ ಸಾಹಿತ್ಯ, ಸಂಗೀತ, ನೃತ್ಯಕಲಾ ಮುಂತಾದ ಮನೋರಂಜಕ ಕಲೆಗಳಲ್ಲಿ ಅಭಿರುಚಿಯುಳ್ಳವರಿರುತ್ತಾರೆ. ಚತುರ್ಥಸ್ಥಾನದಲ್ಲಿ ಬುಧನಿದ್ದರೆ ವಿದ್ಯಾವಂತರೂ ಬುದ್ಧಿವಂತರೂ ಇದ್ದು ಸಂಸಾರದಲ್ಲಿ ಅಸುಖಿಗಳಾಗಿರುತ್ತಾರೆ.

ಗುರು :— ಯಾವದೇ ರಾಶಿಯ ಗುರು ಚತುರ್ಥದಲ್ಲಿದ್ದರೆ ಗೃಹ ಸೌಖ್ಯ ಚನ್ನಾಗಿ ಲಭಿಸುತ್ತದೆ. ಇಂಥ ಸ್ತ್ರೀಯರು ಇದ್ದ ಸ್ಥಿತಿಯಲ್ಲಿಯೇ ಸಮಾಧಾನಿ ಹಾಗೂ ಸುಖಿಗಳಾಗಿದ್ದು ಆದರ್ಶ ಗೃಹಿಣಿಯರಾಗಿರುತ್ತಾರೆ. ಕರ್ಕ, ಧನು, ಮೀನ, ಮಿಥುನ, ತುಲಾ ಈ ರಾಶಿಗಳ ಚತುರ್ಥಸ್ಥಾನದಲ್ಲಿದ್ದ ಗುರು ಕುಶಾಗ್ರಬುದ್ಧಿಯನ್ನೂ, ಸಂಸಾರದಲ್ಲಿ ದಕ್ಷತೆಯನ್ನೂ ಮತ್ತು ಮಾತೃಸೌಖ್ಯವನ್ನೂ ಕೊಡುತ್ತಾನೆ.

ಶುಕ್ರ :— ಬಲಾಢ್ಯ ಶುಕ್ರನು ಚತುರ್ಥದಲ್ಲಿದ್ದರೆ ಸುಖಭೋಗಿಗಳಿರುತ್ತಾರೆ. ಇಂಥ ಸ್ತ್ರೀಯರಿಗೆ ನಗರಗಳಲ್ಲಿ ವಾಸಿಸುವ ಹಂಬಲವಿದ್ದು ಸಿನೇಮಾ, ನಾಟಕ, ನೃತ್ಯ ಮುಂತಾದ ಮನರಂಜನದಲ್ಲಿ ಕಾಲವನ್ನು ಕಳೆಯುತ್ತಾರೆ. ಇಂಥ ಸ್ತ್ರೀಯರಿಗೆ ವಾಹನಸೌಖ್ಯವು ಚನ್ನಾಗಿರುವದಲ್ಲದೆ ಮಾತೃಸೌಖ್ಯವು ಸುಖಕರವಾಗಿ ಲಭಿಸುತ್ತದೆ. ವೃಷಭ, ತುಲಾ, ಕುಂಭ, ಮೀನ, ಮಿಥುನ ಈ ರಾಶಿಗಳ ಶುಕ್ರನು ಚತುರ್ಥದಲ್ಲಿದ್ದರೆ ಅನೇಕ ಬಗೆಯ ಸೌಖ್ಯಗಳನ್ನು ಅನುಭವಿಸುತ್ತಾರೆ.

ಶನಿ :— ಯಾವದೇ ರಾಶಿಯ ಶನಿಯು ಚತುರ್ಥದಲ್ಲಿರುವದು ಮಾತೃ ಸುಖಕ್ಕೆ ಮಾರಕವು. ಆದರೆ ಅದೇ ಶನಿಯು ಮಿಥುನ, ತುಲಾ, ಕುಂಭ, ಮಕರ, ಧನು, ಮೀನ, ಕನ್ಯಾ ಈ ರಾಶಿಗಳಲ್ಲಿದ್ದರೆ ಸ್ಥಾವರ ಆಸ್ತಿಯ ಸೌಖ್ಯವನ್ನು ಕೊಡುತ್ತಾನೆ. ನಿರ್ಬಲ ಶನಿಯು ಚತುರ್ಥದಲ್ಲಿದ್ದರೆ ಉದರರೋಗ ವಾಯುವಿನ ರೋಗವನ್ನು ಕೊಡುತ್ತಾನೆ.

ರಾಹು-ಕೇತು :— ಯಾವದೇ ರಾಶಿಯ ರಾಹು ಚತುರ್ಥದಲ್ಲಿರುವದು ಮಾತೃಸುಖಕ್ಕೆ ಹಾಗೂ ಐಹಿಕ ಸುಖಕ್ಕೆ ಮಾರಕನು. ಮಿಥುನ,

ಕನ್ಯಾ, ರಾಶಿಗಳ ರಾಹು ಚತುರ್ಥದಲ್ಲಿದ್ದರೆ, ಧನು, ಮೀನಗಳ ಕೇತು ಚತುರ್ಥದಲ್ಲಿದ್ದರೆ ಸ್ವಪರಾಕ್ರಮದಿಂದ ಸ್ಥಾವರ ಆಸ್ತಿಯನ್ನು ಸಂಪಾದಿಸುವರು.

## ಚತುರ್ಥ ಸ್ಥಾನದಲ್ಲಿಯ ಗ್ರಹಗಳ ಯುತಿ

(೧) ಬಲಾಢ್ಯ ಗುರು, ಚಂದ್ರರ ಯುತಿ ಚತುರ್ಥದಲ್ಲಿದ್ದರೆ ಮಾತೃ ಸೌಖ್ಯ ದೊರೆಯುವದಲ್ಲದೆ ಸ್ಥಾವರ ಆಸ್ತಿಯ ಸೌಖ್ಯವೂ ಕೂಡ ದೊರೆಯುತ್ತದೆ. (೨) ಬಲಾಢ್ಯ ರಾಶಿಯ ಶುಕ್ರ-ಚಂದ್ರರ ಯುತಿ ಚತುರ್ಥಸ್ಥಾನದಲ್ಲಿದ್ದರೆ ವಿಲಾಸಮಯವಾಗಿ ಜೀವನ ಕಳೆಯುತ್ತಾರೆ. ಹಾಗೂ ಇವರು ಅನೇಕ ತರಹದ ಪ್ರವಾಸಗಳನ್ನು ಕೈಕೊಳ್ಳುತ್ತಾರೆ. ಇವರಿಗೆ ವಾಹನಸೌಖ್ಯ ಹಾಗೂ ಸ್ಥಾವರ ಆಸ್ತಿಯ ಸೌಖ್ಯ ಮತ್ತು ಮಾತೃಸೌಖ್ಯವು ದೊರೆಯುತ್ತದೆ. (೩) ಗುರು, ಶುಕ್ರರ ಯುತಿಯು ಬಲಾಢ್ಯ ರಾಶಿಯ ಚತುರ್ಥ ಸ್ಥಾನದಲ್ಲಿದ್ದರೆ ಅನೇಕ ತರಹದ ಸೌಖ್ಯಗಳು ದೊರೆಯುತ್ತವೆ. (೪) ಗುರು, ಮಂಗಳರ; ಗುರು-ಶನಿ ; ಚಂದ್ರ, ಶನಿ; ಶುಕ್ರ, ಶನಿ ಇವರ ಯುತಿಯು ಚತುರ್ಥದಲ್ಲಿ ಇದ್ದರೆ ಕೆಲದಿನ ಸೌಖ್ಯವನ್ನೂ ಕೆಲದಿನ ದುಃಖವನ್ನೂ ಅನುಭವಿಸಬೇಕಾಗುತ್ತದೆ. (೫) ಶನಿ–ಮಂಗಳ, ರವಿ–ಶನಿ, ರವಿ–ಮಂಗಳ, ರಾಹು–ಮಂಗಳ, ಶನಿ–ರಾಹು, ಶನಿ–ಕೇತು, ರಾಹು–ರವಿ, ಈ ಯುತಿಗಳು ಚತುರ್ಥದಲ್ಲಿದ್ದರೆ ಅನೇಕ ತರಹದ ಗಂಡಾಂತರಗಳನ್ನು ಎದುರಿಸಬೇಕಾಗುತ್ತದೆ. ಹಾಗೂ ಇಂಥ ಸ್ತ್ರೀಯರ ಜೀವನವು ದುಃಖದಿಂದ ಕೂಡಿದ್ದು ಅಸುಖಮಯವಾಗುತ್ತದೆ.

## ಚತುರ್ಥೇಶನ ಫಲ

ಚತುರ್ಥೇಶನು ರವಿ ಇದ್ದರೆ ವಿವಾಹದ ನಂತರ ಸಾಂಪತ್ತಿಕ ಸ್ಥಿತಿಯು ಊರ್ಜಿತಾವಸ್ಥೆಗೇರುವದು. ಪತಿಸೌಖ್ಯವು ಉತ್ತಮವಿದ್ದು ; ಆಯುಷ್ಯದ ಉತ್ತರಾರ್ಧವು ಪೂರ್ವಾರ್ಧಕ್ಕಿಂತಲೂ ಉತ್ತಮವಿರುತ್ತದೆ.

ಚತುರ್ಥೇಶನು ಚಂದ್ರನಿದ್ದರೆ ಉತ್ತಮ. ಆದರೆ ಯಾವ ಕೆಲಸಕ್ಕೂ ಸ್ಥಿರತೆ ಇರುವದಿಲ್ಲ. ಗೃಹಕೃತ್ಯದಲ್ಲಿ ಪ್ರವೀಣರಿದ್ದು ; ಗಡಿಬಿಡಿಯಿಂದ

ಕಾರ್ಯವನ್ನು ಕೈಕೊಳ್ಳುವರು. ಇಂಥ ಸ್ತ್ರೀಯರ ವಿವಾಹವು (ಪತಿ-ಗೃಹವು) ಜನ್ಮಸ್ಥಳಕ್ಕಿಂತ ಬಹು ದೂರವಿರುತ್ತದೆ.

ಚತುರ್ಥೇಶನು ಮಂಗಳನಿದ್ದರೆ ಯಾವಾಗಲೂ ಚಿಂತಾಮಯ ಜೀವನವಿರುತ್ತದೆ. ಚತುರ್ಥೇಶನು ಮಂಗಳನಿದ್ದು ೩, ೮, ೧೨, ಸ್ಥಾನಗಳಲ್ಲಿ ಕ್ರೂರ ಗ್ರಹಗಳಿಂದ ಯುಕ್ತನಿದ್ದರೆ ಮಾತೃಸೌಖ್ಯದ ಅಭಾವವಿರುತ್ತದೆ. ಹಾಗೂ ಆ ಸ್ತ್ರೀಯು ಅನೇಕ ಗಂಡಾಂತರಗಳನ್ನು ಎದುರಿಸಬೇಕಾಗುತ್ತದೆ.

ಚತುರ್ಥೇಶು ಬುಧನಿದ್ದರೆ ಆಯುಷ್ಯದ ಉತ್ತರಾರ್ಧವು ಮಾನಸಿಕ ಚಿಂತೆಯಿಂದ ಕಳೆಯಲ್ಪಡುತ್ತದೆ. ಹಾಗೂ ಅತ್ತೆಯ ಮನೆಯು ಜನರಿಂದ ತೊಂದರೆಗೀಡಾಗಬೇಕಾಗುತ್ತದೆ.

ಚತುರ್ಥೇಶನು ಗುರು ಇದ್ದರೆ ಪ್ರವಾಸ ಕಡಿಮೆ. ಇಂಥ ಸ್ತ್ರೀಯರ ಗೃಹ-ಸೌಖ್ಯ, ಸಾಮಾಜಿಕ ಸೌಖ್ಯ, ಹಾಗೂ ಸಾಂಪತ್ತಿಕ ಸ್ಥಿತಿ ಉತ್ತಮ-ವಿದ್ದು, ಆಯುಷ್ಯದ ಉತ್ತರಾರ್ಧವು ಸುಖಮಯವಾಗಿ ಹೋಗುವದು. ಇಂಥ ಸ್ತ್ರೀಯರ ವಿವಾಹವು ಜನ್ಮಸ್ಥಳದಿಂದ ಬಟರ್ ಸಮೀಪದಲ್ಲಿರುತ್ತದೆ.

ಚತುರ್ಥೇಶನು ಶುಕ್ರನಿದ್ದರೆ ಅನೇಕ ತರದ ಗೃಹ ಸೌಖ್ಯವು ಸಿಗುತ್ತದೆ. ಇಂಥ ಸ್ತ್ರೀಯರ ಅತ್ತೆಯ ಮನೆಯ ಸಾಂಪತ್ತಿಕ ಸ್ಥಿತಿಯು ಉತ್ತಮವಿದ್ದು ಪತಿಯ ಪ್ರೀತಿಗೆ ಪಾತ್ರರಾಗಿರುತ್ತಾರೆ. ಇಂತಹ ಸ್ತ್ರೀಯರಿಗೆ ವಾಹನ ಸೌಖ್ಯ ಹಾಗೂ ಮಾತೃಸೌಖ್ಯ ಚನ್ನಾಗಿರುತ್ತದೆ.

ಚತುರ್ಥೇಶನು ಶನಿ ಇದ್ದರೆ ಸ್ತ್ರೀಯರು ಲೋಭಿಗಳಾಗಿರುತ್ತಾರೆ. ಇವರು ಗೃಹಕೃತ್ಯಗಳಲ್ಲಿ ದಕ್ಷರಾಗಿದ್ದು; ಮೃದುಮಧುರವಾಗಿ ಮಾತನಾಡಬಲ್ಲರು. ಇಂಥ ಸ್ತ್ರೀಯರಿಗೆ ತವರುಮನೆಯ ಸೌಖ್ಯ ಅಷ್ಟಕ್ಕಷ್ಟೇ ಇರುತ್ತದೆ

## ಭಾವೇಶನ ಫಲ

(೧) ಸುಖೇಶನು ಲಗ್ನದಲ್ಲಿದ್ದರೆ ಪಿರ್ತಾರ್ಜಿತ ಆಸ್ತಿಯ ಸೌಖ್ಯ ಸಿಗುತ್ತದೆ. ಇಂಥ ಸ್ತ್ರೀಯರ ಆರೋಗ್ಯ ಚನ್ನಾಗಿರುತ್ತದೆ (೨) ಸುಖೇಶನು ದ್ವಿತೀಯದಲ್ಲಿದ್ದರೆ ತವರುಮನೆಯ ಕಡೆಯಿಂದ ಆಸ್ತಿ ಹಾಗೂ ಧನದ

ಸಹಾಯ ಸಿಗುತ್ತದೆ. ( ತವರುಮನೆಯವರು ಸಿರಿವಂತರಿರುತ್ತಾರೆ ) ಶುಭಗ್ರಹವಿದ್ದರೆ ಮಾತ್ರ. (೩) ಸುಖೇಶನು ತೃತೀಯದಲ್ಲಿದ್ದರೆ ಬಂಧು-ಭಗಿನಿಯರ ಸಂಗಡ ಹೊಂದಿಕೊಂಡಿರಲಾರರು. ಪಾಪಗ್ರಹವಿದ್ದರಂತೂ ಮಾತಾ-ಪಿತೃಗಳೊಂದಿಗೆ ಸಹ ಹೊಂದಿಕೊಂಡು ಹೋಗಲಾರರು. (೪) ಸುಖೇಶನು ಸುಖಸ್ಥಾನದಲ್ಲಿದ್ದರೆ ಅನೇಕ ಸೌಖ್ಯವನ್ನು ಹೊಂದುತ್ತಾರೆ, ಸುಖೇಶನು ಶುಭಗ್ರಹವಿದ್ದು ಸುಖಸ್ಥಾನದಲ್ಲಿದ್ದರೆ ಮಾತೃ—ಸೌಖ್ಯ, ವಾಹನ-ಸೌಖ್ಯ, ಮನೆ, ಬಂಗಲೆ ಮುಂತಾದವುಗಳ ಸೌಖ್ಯ ಸಿಗುತ್ತದೆ. ಪಾಪಗ್ರಹವಿದ್ದರೆ ಸ್ವಾವಲಂಬನದಿಂದ (ವಿವಾಹದ ನಂತರ ಭಾಗ್ಯೋದಯ) ಸ್ವಾವರ ಆಸ್ತಿಯನ್ನು ಸಂಪಾದಿಸುವರು (೫) ಸುಖೇಶನು ಪಂಚಮ-ದಲ್ಲಿದ್ದರೆ ವಿದ್ಯೆಯಲ್ಲಿ ಯಶಸ್ವಿಗಳೂ ಭಾಗ್ಯಶಾಲಿಗಳೂ. ಆಗಿದ್ದು, ಸುಗುಣ ಪುತ್ರರ ಮಾತೆಯರಾಗುತ್ತಾರೆ. (೬) ಚತುರ್ಥೇಶನು ಷಷ್ಠದಲ್ಲಿದ್ದರೆ ಮಾತೃ-ಪಿತೃ ಸೌಖ್ಯ ಕಡಿಮೆ. ಇಂಥ ಸ್ತ್ರೀಯರ ವಿವಾಹವು ಸಂಬಂಧಿಕರಲ್ಲಿ ಆಗುತ್ತದೆ. ಹಾಗೂ ಇಂಥ ಸ್ತ್ರೀಯರು ಜಿಪುಣರಿರುತ್ತಾರೆ. ಚತುರ್ಥೇಶನು ಪಾಪಗ್ರಹವಿದ್ದು ಷಷ್ಠದಲ್ಲಿದ್ದರೆ ಪತಿಗೆ ಗೋಚರವಾಗದಂತೆ ಹಣವನ್ನು ಸಂಗ್ರಹಿಸುತ್ತಾರೆ. (೭) ಚತುರ್ಥೇಶನು ಸಪ್ತಮದಲ್ಲಿದ್ದರೆ ಅತ್ತೆಯಮನೆಯ ಸೌಖ್ಯ ಚನ್ನಾಗಿರುತ್ತದೆ. ಇಂಥ ಸ್ತ್ರೀಯರ ವಿವಾಹವು ಕೂಡ ಆಪ್ತೇಷ್ಟ-ರಲ್ಲಿ ಆಗುತ್ತದೆ. ಚತುರ್ಥೇಶನು ಪಾಪಗ್ರಹವಿದ್ದು ಸಪ್ತಮದಲ್ಲಿದ್ದರೆ ಅತ್ತೆಯಮನೆಯ ಸೌಖ್ಯವು ಸಿಗಲಾರದು ಹಾಗೂ ವಿವಾಹವು ತಡವಾಗಿ ಆಗುತ್ತದೆ. (೮) ಚತುರ್ಥೇಶನು ಅಷ್ಟಮದಲ್ಲಿದ್ದರೆ ದೈಹಿಕ ಪೀಡೆ ಬಹಳ. ಇಂಥ ಸ್ತ್ರೀಯರಿಗೆ ಕಂಟಕಗಳು ಬಹಳ. ಚತುರ್ಥೇಶನು ಕ್ರೂರಗ್ರಹವಿದ್ದು ಅಷ್ಟಮದಲ್ಲಿದ್ದರೆ ಆತ್ಮಹತ್ಯೆಯನ್ನು ಕೂಡ ಮಾಡಿಕೊಳ್ಳುವ ಸಂಭವವಿರು-ತ್ತದೆ. (೯) ಚತುರ್ಥೇಶನು ಭಾಗ್ಯದಲ್ಲಿದ್ದರೆ ಅತ್ಯುತ್ತಮವು. ಇಂಥ ಸ್ತ್ರೀಗೆ ಮಾತಾಪಿತರ ಸೌಖ್ಯವು ಚನ್ನಾಗಿರುತ್ತದೆ ಹಾಗೂ ವಿವಾಹವು ಕೂಡ ತೀವ್ರವಾಗುತ್ತದೆ. ಮತ್ತು ವಿವಾಹದ ನಂತರ ಪತಿಯ ಭಾಗ್ಯೋ-ದಯವಿರುತ್ತದೆ. ಇಂತಹ ಸ್ತ್ರೀಯರ ಸಾಂಪತ್ತಿಕ ಸ್ಥಿತಿ ಉತ್ತಮವಿದ್ದು, ಅವರಿಗೆ ತೀರ್ಥಯಾತ್ರಾ ಸಂದರ್ಶನದ ಯೋಗವಿರುತ್ತದೆ. ( ಇವರು

ಪ್ರವಾಸಗಳನ್ನು ಬಹಳಷ್ಟು ಕೈಕೊಳ್ಳುತ್ತಾರೆ). (೧೦) ಚತುರ್ಥೇಶನು ದಶಮದಲ್ಲಿದ್ದರೆ ತಂದೆಯ ಸೌಖ್ಯ ನೆಟ್ಟಗೆ. ಹಾಗೂ ಇಂಥ ಸ್ತ್ರೀಯರು ಸ್ವಾವಲಂಬನದಿಂದ ಧನಾರ್ಜನೆಯನ್ನು ಕೈಕೊಳ್ಳುತ್ತಾರೆ. ( ನೌಕರಿಮಾಡಿ ಉಪಜೀವನ ನಡೆಸುತ್ತಾರೆ). ಚತುರ್ಥೇಶನು ಕ್ರೂರಗ್ರಹನಿದ್ದು ದಶಮದಲ್ಲಿದ್ದರೆ ಮಾತೃಸೌಖ್ಯದ ಅಭಾವವಿರುತ್ತದೆ. (೧೧) ಚತುರ್ಥೇಶನು ಲಾಭದಲ್ಲಿದ್ದರೆ ಸಾಂಪತ್ತಿಕ ಸ್ಥಿತಿ ಉತ್ತಮವಿದ್ದು, ದ್ರವ್ಯಸಂಗ್ರಹ ಮಾಡುತ್ತಾರೆ. (೧೨) ಚತುರ್ಥೇಶನು ವ್ಯಯದಲ್ಲಿದ್ದರೆ ಇಂತಹ ಸ್ತ್ರೀಯರಿಗೆ ಪರ್ಟನ ಪ್ರಸಂಗಗಳು ಮೇಲಿಂದ ಮೇಲೆ ಒದಗುತ್ತವೆ. (ದುಂದುಗಾರರಾಗಿರುತ್ತಾರೆ).



# ಪಂಚಮಸ್ಥಾನ, ವಿದ್ಯಾ ಹಾಗೂಸಂತ ಸ್ಥಾನ

ಈ ಸ್ಥಾನದಿಂದ ವಿದ್ಯಾ, ಬುದ್ಧಿ, ಸಂತತಿಸೌಖ್ಯ, ಪ್ರೇಮ, ಪ್ರಣಯ, ಪ್ರವಾಸ ಯೋಗ, ಭಾಗ್ಯ, ವಿಹಿತಸುಖ, ಇಂದ್ರಿಯಜನ್ಯಸುಖ, ಗರ್ಭಧಾರಣ, ಗರ್ಭಪತನ ಮುಂತಾದ ಸಂಗತಿಗಳನ್ನು ಹೇಗೆ ನೋಡಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವರಿಸಿದೆ.

**ವಿದ್ಯೆ ಹಾಗೂ ಬುದ್ಧಿ :—** ಪಂಚಮಸ್ಥಾನದ ಕಾರಕ ಗ್ರಹವೆಂದರೆ ಗುರುವು. ವಿದ್ಯೆ ಹಾಗೂ ಸಂತತಿಗಳಿಗೆ ಅವನೇ ಕಾರಕನು. ಬುದ್ಧಿಕಾರಕ ಗ್ರಹವೆಂದರೆ ಬುಧನು. ಬುಧನು ವಾಯು ಅಥವಾ ಪೃಥ್ವೀರಾಶಿಯಲ್ಲಿದ್ದು ; ೧, ೨, ೩, ೯, ೧೦, ೧೧ ಈ ಸ್ಥಾನಗಳಲ್ಲಿದ್ದರೆ ಉತ್ತಮಬುದ್ಧಿ ಇರುತ್ತದೆ. ಬುಧ-ಶನಿಯರ ಯುತಿಯು ಸಹ ವಾಯು ರಾಶಿಯಲ್ಲಿದ್ದು ಪಂಚಮದಲ್ಲಿದ್ದರೆ ಸ್ಮರಣಶಕ್ತಿಯು ಹೆಚ್ಚಿಗೆ ಇರುತ್ತದೆ. ವಾಯು, ಜಲರಾಶಿಯ ಹಾಗೂ ಧನುರಾಶಿಯ ಗುರುವು ಪಂಚಮದಲ್ಲಿದ್ದರೆ, ಕುಶಾಗ್ರಬುದ್ಧಿ ಇರುತ್ತದೆ. ಪಂಚಮೇಶನು ರವಿ, ಬುಧ, ಗುರು, ಚಂದ್ರ ಶುಕ್ರನಿದ್ದು ೩, ೫, ೯, ೧೧ ಈ ಸ್ಥಾನಗಳಲ್ಲಿದ್ದರೆ ಅವರಿಗೆ ವಿದ್ಯೆಯಲ್ಲಿ ಯಶಸ್ಸು ಸಿಗುತ್ತದೆ. ಸ್ವಗೃಹ ಇಲ್ಲವೆ ಉಚ್ಚ ಕ್ಷೇತ್ರದಲ್ಲಿಯ ಯಾವದೇ ಗ್ರಹವಿದ್ದು ಪಂಚಮದಲ್ಲಿದ್ದ ಸ್ತ್ರೀಯರಿಗೆ ವಿದ್ಯೆ ಪೂರ್ಣವಿರುತ್ತದೆ. ಮೇಷ, ವೃಶ್ಚಿಕ, ಸಿಂಹ, ಮಕರ ಈ ರಾಶಿಗಳ ಮಂಗಳನು ಪಂಚಮದಲ್ಲಿದ್ದರೆ, ಡಾಕ್ಟರ, ನರ್ಸ, ವಕೀಲ, ಇಂಜನಿಯರ ಮುಂತಾದ ವಿದ್ಯೆಗಳಲ್ಲಿ ಪ್ರಾವೀಣ್ಯತೆಯನ್ನು ಪಡೆಯುತ್ತಾರೆ. ಬಲಾಢ್ಯ ಶುಕ್ರನು ಪಂಚಮದಲ್ಲಿರುವದು ಕುಶಾಗ್ರ ಬುದ್ಧಿಯನ್ನು, ಗಾಯನ ಸಾಹಿತ್ಯ, ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳ ವಿದ್ಯೆಗಳಲ್ಲಿ ಪ್ರಾವೀಣ್ಯತೆಯನ್ನು ಕೊಡುತ್ತಾನೆ. ಅವರೆ ಶಾಲೆ, ಕಾಲೇಜು,

ವಿಶ್ವವಿದ್ಯಾಲಯಗಳ ಪರೀಕ್ಷೆಗಳನ್ನು ಪೂರ್ಣಗೊಳಿಸಲಾರನು. ಯಾವದೇ ರಾಶಿಯ ಗುರುವು ೬, ೮, ೧೨ ಈ ಸ್ಥಾನಗಳಲ್ಲಿದ್ದರೆ ಶಿಕ್ಷಣವನ್ನು ಪೂರ್ಣಗೊಳಿಸಲಾರನು. ಪಂಚಮೇಶನು ರವಿ, ಬುಧ, ಗುರು, ಶುಕ್ರ, ಚಂದ್ರರಿದ್ದು ೫, ೯, ೧೧, ೩ ಈ ಯಾವದೆ ಸ್ಥಾನಗಳಲ್ಲಿದ್ದರೆ ಅವರಿಗೆ ವಿದ್ಯೆಯಲ್ಲಿ ಯಶಸ್ಸು ಸಿಗುತ್ತದೆ. ಬಲಾಢ್ಯ ಗುರುವಿನ ದೃಷ್ಟಿ ಪಂಚಮದಲ್ಲಿದ್ದರೆ ಅಥವಾ ಯಾವದೇ ರಾಶಿಯ ಗುರು ಪಂಚಮದಲ್ಲಿದ್ದರೆ ಆ ವಿದ್ಯಾರ್ಥಿನಿಯರ ಶಿಕ್ಷಣವು ಪೂರ್ತಿಗೊಳ್ಳುವದು. ಪಂಚಮಸ್ಥಾನದಲ್ಲಿ ವಾಯುರಾಶಿ ಇದ್ದರೆ ಕುಶಾಗ್ರ ಬುದ್ಧಿಯನ್ನೂ, ಮತ್ತು ಸಾಹಿತ್ಯ, ಸಂಗೀತ ಮೊದಲಾದ ಲಲಿತ ಕಲೆಗಳಲ್ಲಿಯೂ ಆ ಸ್ತ್ರೀಯರು ಪ್ರಾವೀಣ್ಯತೆಯನ್ನೂ ಹೊಂದುತ್ತಾರೆ. ಪಂಚಮ ಸ್ಥಾನದಲ್ಲಿ ಜಲರಾಶಿ ಇದ್ದರೆ ಬುದ್ಧಿಚಾಪಲ್ಯವನ್ನೂ ಪಡೆಯುವರಲ್ಲದೆ ವಿದ್ಯೆಯಲ್ಲಿ ಯಶಸ್ಸನ್ನು ಗಳಿಸುತ್ತಾರೆ ಪಂಚಮ ಸ್ಥಾನದಲ್ಲಿ ಪೃಥ್ವಿರಾಶಿ ಗಳಿದ್ದರೆ ವಕ್ತೃತ್ವದಲ್ಲಿ ಮತ್ತು ನಾಟಕ ಮೊದಲಾದ ಕಲೆಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದುವರು. ಪಂಚಮಸ್ಥಾನದಲ್ಲಿ ಅಗ್ನಿರಾಶಿಯಿದ್ದರೆ ಅವರಿಗೆ ಮಂದಬುದ್ಧಿಯಿರುವದು,

ಮಂಗಳನು ಪಂಚಮಸ್ಥಾನದಲ್ಲಿದ್ದರೆ ಕ್ರೀಡಾಪಟುಗಳಾಗಿರುತ್ತಾರೆ. (ಪಿಂಗಪಾಂಗ, ಬ್ಯಾಡಮಿಂಟನ್. ಟೇಬಲ್‌ಟೆನಿಸ್, ಟೇನಿಸ್ ಮುಂತಾದ ಆಟಗಳಲ್ಲಿ) ಚಂದ್ರನು ಪಂಚಮಸ್ಥಾನದಲ್ಲಿದ್ದರೆ ಗೃಹಕೃತ್ಯದಲ್ಲಿ ಪ್ರಾವೀಣ್ಯರಿರುತ್ತಾರೆ. ಗುರುವು ಪಂಚಮಸ್ಥಾನದಲ್ಲಿದ್ದರೆ ತೀಕ್ಷ್ಣ ಬುದ್ಧಿಯುಳ್ಳವರಿರುತ್ತಾರೆ. ಬುಧನು ಪಂಚಮ ಸ್ಥಾನದಲ್ಲಿದ್ದರೆ ವ್ಯಾಪಾರ-ವ್ಯವಹಾರಗಳಲ್ಲಿ ಮತ್ತು ಹೊಲಿಗೆ ಹೆಣಿಕೆ ಮೊದಲಾದ ಕಸೂತಿ ಕೆಲಸಗಳಲ್ಲಿಯೂ ಪ್ರಾವೀಣ್ಯತೆಯನ್ನು ಪಡೆಯುತ್ತಾರೆ. ಶುಕ್ರನು ಪಂಚಮದಲ್ಲಿದ್ದರೆ ನೃತ್ಯ ಗಾಯನ ಮೊದಲಾದ ವಿದ್ಯೆಗಳಲ್ಲಿ ತಜ್ಞರಿರುತ್ತಾರೆ. ಶನಿಯು ಪಂಚಮ ಸ್ಥಾನದಲ್ಲಿದ್ದರೆ ಶಿಕ್ಷಣವು ಪೂರ್ತಿಯಾಗುವದಿಲ್ಲ. ಆದರೆ ಆ ಸ್ತ್ರೀಯರು ಗೃಹಕೃತ್ಯಗಳಲ್ಲಿ ಪ್ರವೀಣರಿರುತ್ತಾರೆ ರವಿಯು ಪಂಚಮದಲ್ಲಿದ್ದರೆ ಚುನಾವಣೆ ಮುಂತಾದ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಪ್ರಖ್ಯಾತಿಯನ್ನು ಗಳಿಸುವರು

## ಪರೀಕ್ಷೆಯ ಸಮಯದಲ್ಲಿ ಗ್ರಹಗಳು ಹೇಗಿರಬೇಕು ?

(೧) ಪಂಚಮೇಶನು ( ಗೋಚರಿಯಿಂದ ) ಶನಿ, ಮಂಗಳ, ರಾಹು, ಕೇತು ಇವರಿಂದ ಯುಕ್ತನಿರಕೂಡದು. (೨) ಜನ್ಮಕುಂಡಲಿಯಲ್ಲಿ ಪಂಚಮೇಶನು ಬಲಾಢ್ಯನಾಗಿ ೧, ೨, ೩, ೫, ೯, ೧೧ ಈ ಸ್ಥಾನದಲ್ಲಿರಬೇಕು. (೩) ಗುರುವು ಗೋಚರಿಯಿಂದ, (ಜನ್ಮಸ್ಥ-ಚಂದ್ರನಿಂದ,) ೬, ೮, ೧೨ನೇ ಯವನು ಆಗಿರಕೂಡದು. (೪) ಪಂಚಮೇಶ ಹಾಗೂ ಗೋಚರಿಯ ಗುರು ಇವರು ಅನುಕೂಲರಾಗಿರಬೇಕು. (೫) ಗೋಚರೀ ಗುರುವಿನ ಪರಿಭ್ರಮಣ ಲಗ್ನ, ಪಂಚಮ, ನವಮ, ಏಕಾದಶ ಈ ಸ್ಥಾನಗಳ ಮೇಲಿಂದ ಇರಬೇಕು (೬) ಪರೀಕ್ಷೆಯ ಸಮಯದಲ್ಲಿ ಸಾಡೇಸಾತಿ ಇಲ್ಲವೆ ಪಂಚಮ ಶನಿ ಇರಕೂಡದು. (೭) ಜನ್ಮಕುಂಡಲಿಯ ಪಂಚಮ ಸ್ಥಾನದಲ್ಲಿ ಇಲ್ಲವೆ ಏಕಾದಶ ಸ್ಥಾನದಲ್ಲಿ ರವಿ, ಚಂದ್ರ, ಮಂಗಳರಿದ್ದು, ಗೋಚರೀ ಶನಿಯ ಪರಿಭ್ರಮಣ ಅವರ ಮೇಲಿಂದ ಹೋಗುತ್ತಿದ್ದರೆ, ಶಿಕ್ಷಣಕ್ಕೆ ವಿಘ್ನಗಳು ಬರುತ್ತವೆ. (೮) ಪರೀಕ್ಷೆಯ ಕಾಲಕ್ಕೆ ಗೋಚರಿಯ ಚಂದ್ರನು ೪ನೇ ೬ನೇ ೮ನೇ, ೧೨ನೇಯವನಿರಕೂಡದು. ಅಥವಾ ಗೋಚರಿಯ ಚಂದ್ರನ ಪರಿಭ್ರಮಣ ಷಷ್ಠ, ಅಷ್ಟಮ, ದ್ವಾದಶ ಸ್ಥಾನಗಳಲ್ಲಿ ಇರಕೂಡದು. (೯) ಪರೀಕ್ಷೆಯ ಕಾಲಕ್ಕೆ ಜನ್ಮಕುಂಡಲಿಯ ಪಂಚಮೇಶನು ಹಾಗೂ ಗುರು ಶುಭವಿರಬೇಕು.

ಮೇಲೆ ಕಂಡ ಯೋಗಗಳು ಪರೀಕ್ಷೆಯ ಸಮಯದಲ್ಲಿ ಇದ್ದರೆ ವಿದ್ಯಾರ್ಥಿನಿಯರು ಪರೀಕ್ಷೆಯಲ್ಲಿ ಯಶಸ್ಸನ್ನು ಸಂಪಾದಿಸುತ್ತಾರೆ.

## ಶಿಕ್ಷಣಕ್ಕೆ ವಿಘ್ನವನ್ನು ತರುವ ಯೋಗಗಳು

(೧) ಪಂಚಮ ಸ್ಥಾನದಲ್ಲಿ ಯಾವದೇ ರಾಶಿಯ ರಾಹು ಅಥವಾ ಕೇತು ಇದ್ದರೆ ( ಮಿಥುನ, ಕನ್ಯಾ, ರಾಶಿಯ ರಾಹು, ಧನು-ಮೀನಗಳ ಕೇತು ಇವು ಅಪವಾದಗಳು) (೨) ತುಲಾ, ಕುಂಭ, ಮಕರ ಈ ರಾಶಿಗಳ ಹೊರತಾಗಿ ಯಾವದೇ ರಾಶಿಯ ಶನಿಯು ಪಂಚಮದಲ್ಲಿದ್ದರೆ. (೩) ಪಂಚಮ ಸ್ಥಾನದಲ್ಲಿ ಯಾವದೇ ರಾಶಿಯ ಶುಕ್ರನಿದ್ದರೆ ಇಂಥ ಸ್ತ್ರೀಯರು ಕೇವಲ ವೈಯಾರದಲ್ಲಿಯೂ, ದಿನಕ್ಕೊಂದು ಹೊಸ ಉಡಿಗೆಯನ್ನು ತೊಡುವದರಲ್ಲಿಯೂ, ಅಂಗಾಂಗಗಳನ್ನು ಶೃಂಗರಿಸುವುದರಲ್ಲಿಯೂ, ವಸ್ತ್ರ-ಒಡವೆಗಳ

ಶೃಂಗಾರದಲ್ಲಿಯೂ ಕಾಲಹರಣ ಮಾಡುತ್ತಾರೆ. ಮತ್ತು ಸಂಗೀತ, ನೃತ್ಯ, ಮುಂತಾದ ಕಲೆಗಳಲ್ಲಿ ಪ್ರವೀಣರಿರುತ್ತಾರೆ. ಆದರೆ ಹೈಸ್ಕೂಲು, ಕಾಲೇಜ, ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗುತ್ತಾರೆ. ( ವೃಷಭ, ತುಲಾ, ಮಿಥುನ, ಕುಂಭ, ಮೀನ ಈ ರಾಶಿಗಳ ಶುಕ್ರನು ಪಂಚಮದಲ್ಲಿದ್ದರೆ ಈ ವಿಷಯಗಳಲ್ಲಿ ಅವರ ಆಸಕ್ತಿಯು ಬಹಳ ಇರುತ್ತದೆ). (೪) ಜನ್ಮಕುಂಡಲಿಯಲ್ಲಿ ಮಂಗಳನು ಪಂಚಮದಲ್ಲಿದ್ದರೆ ಆ ವಿದ್ಯಾರ್ಥಿನಿಯರು ಕೇವಲ ಆಟಪಾಟಗಳಲ್ಲಿಯೇ ವಿಶೇಷ ಆಸಕ್ತಿಯುಳ್ಳವರು ಇರುತ್ತಾರೆ. (೫) ನೀಚರಾಶಿಯ ( ನಿರ್ಬಲರಾದ ) ಶನಿ ಇಲ್ಲವೆ ರಾಹು ಪಂಚಮ ಸ್ಥಾನದಲ್ಲಿದ್ದರೆ ಆರ್ಥಿಕ ಅನಾನುಕೂಲತೆಯಿಂದ ಶಿಕ್ಷಣಕ್ಕೆ ವಿಘ್ನಗಳು ಬರುತ್ತವೆ. (೬) ಶುಕ್ರ-ಮಂಗಳರ ಯುತಿಯು ಪಂಚಮದಲ್ಲಿದ್ದರೆ ಅಂಥ ವಿದ್ಯಾರ್ಥಿನಿಯರು ಪ್ರೇಮ-ಪ್ರಣಯಗಳಲ್ಲಿಯೇ ಆಸಕ್ತರಾಗಿ ಪರೀಕ್ಷೆಯಲ್ಲಿ ಅಯಶಸ್ವಿಗಳಾಗುತ್ತಾರೆ. (೭) ಶುಕ್ರ-ಚಂದ್ರರ ಯುತಿಯು ಪಂಚಮದಲ್ಲಿದ್ದರೆ ಶೃಂಗಾರ ವಿಲಾಸಗಳಲ್ಲಿಯೇ ಮಗ್ನರಾಗಿ ಶಿಕ್ಷಣದಲ್ಲಿ ಅಯಶಸ್ವಿಗಳಾಗುತ್ತಾರೆ (೮) ಶನಿ-ಮಂಗಳ, ಶನಿ-ರವಿ, ಚಂದ್ರ-ಶನಿ, ಚಂದ್ರ-ರಾಹು, ಮಂಗಳ-ರಾಹು, ಶನಿ-ರಾಹು, ಕೇತು-ಮಂಗಳ, ರವಿ-ಕೇತು, ಶನಿ-ಕೇತು, ಶುಕ್ರ-ರಾಹು, ಶುಕ್ರ-ಮಂಗಳ ಈ ಯುತಿಗಳು ಪಂಚಮದಲ್ಲಿದ್ದರೆ ಅನೇಕ ತರದ ವಿಘ್ನಗಳಿಂದ ಶಿಕ್ಷಣಕ್ಕೆ ಅಡ್ಡಿಯುಂಟಾಗುತ್ತದೆ (೯) ಪಂಚಮ ಸ್ಥಾನದಲ್ಲಿ ರವಿ, ಚಂದ್ರ, ಮಂಗಳರಿದ್ದು, ಗೋಚರಿಯ ಶನಿಯು ಪರಿಭ್ರಮಣ ಪಂಚಮದ ಮೇಲಿಂದ ಆಗುತ್ತಿದ್ದರೆ ಶಿಕ್ಷಣಕ್ಕೆ ವಿಘ್ನಗಳು ಬರುತ್ತವೆ (೧೦) ವಿದ್ಯಾರ್ಥಿನಿ ದಶೆಯಲ್ಲಿ ಸಾಡೇಸಾತಿ ಬಂದರೆ ಮೇಲೆ ಹೇಳಿದ ಅಶುಭಯೋಗಗಳಿದ್ದರೆ ಶಿಕ್ಷಣಕ್ಕೆ ವಿಘ್ನಗಳು ಒದಗಿ ಶಿಕ್ಷಣವು ಪೂರ್ತಿಯಾಗುವದಿಲ್ಲ.

## ಪಂಚಮ ಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ:— ಮೇಷ, ಸಿಂಹ, ವೃಶ್ಚಿಕ, ಧನು, ಈ ರಾಶಿಗಳ ರವಿಯು ಪಂಚಮದಲ್ಲಿ ಇದ್ದರೆ ರಾಜಕೀಯ, ಸಾಮಾಜಿಕ, ವಿದ್ಯೆಗಳಲ್ಲಿ ಪ್ರಖ್ಯಾತರಾಗುತ್ತಾರೆ. ಇಂಥ ಸ್ತ್ರೀಯರು ವಕೀಲ, ಡಾಕ್ಟರ, ನರ್ಸ, ರಾಜಕಾರಣಿ

ಸಾಮಾಜಿಕ ಧುರೀಣರೂ ಇರುತ್ತಾರೆ. ಅಗ್ನಿರಾಶಿಯ ರವಿಯು ಪಂಚಮದಲ್ಲಿರುವದು ಲಾಭದಾಯಕವು. ಆದರೆ ಸಂತತಿಗೆ ಮಾರಕವು. ಇತರ ಯಾವದೇ ರಾಶಿಯ ರವಿಯು ಪಂಚಮದಲ್ಲಿದ್ದರೆ ಶಿಕ್ಷಣಕ್ಕೆ ಪ್ರತಿಕೂಲನು. ರವಿಯು ಪಂಚಮದಲ್ಲಿದ್ದರೆ ವಿದ್ಯೆ ಸಾಧಾರಣ. ವಾಯು ರಾಶಿಗಳ ಹಾಗೂ ಮಕರ ರಾಶಿಯ ರವಿಯು ಪಂಚಮದಲ್ಲಿದ್ದರೆ ಶಿಕ್ಷಣಕ್ಕೆ ವಿಘ್ನವನ್ನು ತರುತ್ತಾನೆ.

ಚಂದ್ರ :— ಚಂದ್ರನು ಪಂಚಮದಲ್ಲಿದ್ದರೆ ಸ್ತ್ರೀಯರು ಗೃಹಕೃತ್ಯಗಳಲ್ಲಿ ಪ್ರವೀಣರಾಗಿರುತ್ತಾರೆ. ಚರರಾಶಿಯ ಚಂದ್ರನು ಪಂಚಮದಲ್ಲಿದ್ದರೆ ಪರಪ್ರಾಂತಗಳಲ್ಲಿ ವಿದ್ಯಾರ್ಜನೆಯನ್ನು ಮಾಡುವರು. ವೃಷಭ, ಕರ್ಕ, ತುಲಾ, ಧನು, ಮೀನ, ಮಿಥುನ ಈ ರಾಶಿಗಳ ಚಂದ್ರನು ಪಂಚಮದಲ್ಲಿದ್ದರೆ ವಿದ್ಯೆ ಪೂರ್ಣವಾಗುತ್ತದೆ. ಅಗ್ನಿರಾಶಿಯ ಚಂದ್ರನು ಪಂಚಮದಲ್ಲಿದ್ದರೆ ಆ ಸ್ತ್ರೀಯರು ತೀವ್ರಗತಿಯಿಂದ ಹಾಗೂ ಸುಂದರವಾಗಿ ಬರೆಯಬಲ್ಲರು. ಜಲರಾಶಿಯ ಚಂದ್ರನು ಪಂಚಮದಲ್ಲಿದ್ದರೆ ವಿವಾಹವು ಬೇಗ ಆಗುವದು ಮತ್ತು ಸಂತತಿ-ಸೌಖ್ಯ ಬಹಳ. ವಾಯುರಾಶಿಯ ಮತ್ತು ವೃಶ್ಚಿರಾಶಿಯ ಚಂದ್ರನು ಪಂಚಮದಲ್ಲಿದ್ದರೆ ಸಾಹಿತ್ಯ, ಸಂಗೀತ ನೃತ್ಯ, ನಾಟಕ ಮುಂತಾದ ವಿದ್ಯೆಗಳಲ್ಲಿ ಪಾರಂಗತರಿರುವರು. ಬಲಾಢ್ಯ ಚಂದ್ರನು ಪಂಚಮದಲ್ಲಿದ್ದರೆ ಶಿಕ್ಷಕೀ ಕೆಲಸಗಳಲ್ಲಿ ಉತ್ತಮರು ಮಿಥುನ, ತುಲಾ, ಕುಂಭ, ವೃಷಭ ಈ ರಾಶಿಗಳ ಶುಕ್ರ-ಚಂದ್ರರ ಯುತಿ ಪಂಚಮದಲ್ಲಿದ್ದರೆ ಸಂಗೀತ ಕಾವ್ಯಗಳಲ್ಲಿ ಪ್ರವೀಣರಿದ್ದು, ಉತ್ತಮ ಕವಿಗಳಾಗಿರುತ್ತಾರೆ. ಯಾವದೇ ರಾಶಿಯ ಚಂದ್ರನು ಪಂಚಮದಲ್ಲಿದ್ದರೆ ವಿದ್ಯೆ, ಪ್ರವಾಸ (ಪರದೇಶ ಪ್ರಯಾಣ) ಹಾಗೂ ಸಂತತಿಗಳಿಗೆ ಅನುಕೂಲನು.

ಮಂಗಳ:— ಯಾವದೇ ರಾಶಿಯ ಮಂಗಳನು ಪಂಚಮದಲ್ಲಿದ್ದರೆ ಸ್ತ್ರೀಯರು ಉತ್ತಮ ಕ್ರೀಡಾಪಟುಗಳಾಗಿರುತ್ತಾರೆ. ಹಾಗೂ ಇಂಥ ಸ್ತ್ರೀಯರು ಸಾಹಸಿಗಳೂ, ಪ್ರಯತ್ನವಾದಿಗಳೂ, ಧಿಟ್ಟರೂ ಇರುತ್ತಾರೆ. ಮೇಷ, ಮಕರ, ವೃಶ್ಚಿಕ, ಸಿಂಹ, ಧನು ಈ ರಾಶಿಗಳ ಮಂಗಳನು ಪಂಚಮದಲ್ಲಿದ್ದರೆ ಇಂಜಿನಿಯರ, ಡಾಕ್ಟರ ನರ್ಸ, ವಕೀಲ ಮುಂತಾದ ಕೆಲಸಗಳಲ್ಲಿ

ಪ್ರವೀಣರಿದ್ದು, ಸಮಾಜದ ಧುರೀಣರೂ. ರಾಜಕೀಯ ಪಟುಗಳೂ ಆಗುತ್ತಾರೆ. ಶುಕ್ರ-ಮಂಗಳರ ಯುತಿಯು ಪಂಚಮದಲ್ಲಿದ್ದರೆ ಶಿಕ್ಷಣಕ್ಕೆ ವಿಘ್ನಗಳುಂಟಾಗುತ್ತವೆ.

ಬುಧ:— ಬುಧನು ಪಂಚಮದಲ್ಲಿದ್ದರೆ ಬುದ್ಧಿಯ ಬಲವನ್ನು ತೋರಿಸುತ್ತದೆ ಇಂಥ ಸ್ತ್ರೀಯರು ಉತ್ತಮ ಲೇಖಕರೂ ಸುರತ ಬರಹಗಾರರೂ ಇದ್ದು, ನಾಟಕ, ಕಾದಂಬರಿಗಳ ಲೇಖಕರು ಇರುತ್ತಾರೆ. ಮಿಥುನ, ಕನ್ಯಾ, ವೃಷಭ, ತುಲಾ ಈ ರಾಶಿಗಳ ಬುಧನು ಪಂಚಮದಲ್ಲಿದ್ದರೆ ಆ ಸ್ತ್ರೀಯರು ಶಿಕ್ಷಣವು ಪೂರ್ತಿಯಾಗುವದಲ್ಲದೆ ಸ್ವಾವಲಂಬನದಿಂದ ಧನವನ್ನು ಗಳಿಸುವರು. ಬಲಾಢ್ಯ ಬುಧನು ಪಂಚಮದಲ್ಲಿದ್ದ ಪತ್ರಿಕಾ ಕರ್ತರೂ, ಸಂಪಾದಕರೂ, ಕಾದಂಬರಿಕಾರರೂ ಮತ್ತು ನಾಟಕಕಾರರೂ ಆಗುತ್ತಾರೆ. ಪೃಥ್ವಿ ಹಾಗೂ ವಾಯು ರಾಶಿಗಳ ಬುಧನು ಪಂಚಮದಲ್ಲಿ ಇದ್ದರೆ ಶಿಕ್ಷಣಕ್ಕೆ ಅನುಕೂಲನು. ಅಗ್ನಿ ಹಾಗೂ ಜಲರಾಶಿಯ ಬುಧನು ಪಂಚಮದಲ್ಲಿದ್ದರೆ ಶಿಕ್ಷಣಕ್ಕೆ ಪ್ರತಿಕೂಲನು. ವಾಯು ಹಾಗೂ ಪೃಥ್ವಿ ರಾಶಿಗಳ ಬುಧ-ಶುಕ್ರರ ಯುತಿಯ ಪಂಚಮದಲ್ಲಿದ್ದ ಸ್ತ್ರೀಯರು ಸಾಹಿತ್ಯ, ಸಂಗೀತ. ನೃತ್ಯಕಲಾ ಹಾಗೂ ಲೇಖನೀಯ ವ್ಯವಸಾಯಗಳಲ್ಲಿ ಪಾರಂಗತರಿರುವರು.

ಗುರು:— ಯಾವದೇ ರಾಶಿಯ ಗುರು ಪಂಚಮದಲ್ಲಿದ್ದರೆ ವಿದ್ಯೆ ಹಾಗೂ ಸಂತತಿಗೆ ಪೋಷಕನು (ಗುರು ಪಂಚಮಸ್ಥಾನದ ಕಾರಕನು). ಕರ್ಕ ಧನು, ಮೀನ ಈ ರಾಶಿಗಳ ಗುರು ಪಂಚಮದಲ್ಲಿದ್ದರೆ ಆ ಸ್ತ್ರೀಯರು ಸ್ಕಾಲರರಿದ್ದು. ಪ್ರಥಮ ದರ್ಜೆಯಲ್ಲಿ ತೇರ್ಗಡೆಯನ್ನು ಹೊಂದುತ್ತಾರೆ. ಜಲರಾಶಿ ಹಾಗೂ ವಾಯು ರಾಶಿಗಳ ಗುರು ಪಂಚಮದಲ್ಲಿದ್ದರೆ ಇವರ ಶಿಕ್ಷಣ ಪೂರ್ತಿಯಾಗುವದಲ್ಲದೆ ಶಿಷ್ಯವೃತ್ತಿಯನ್ನೂ ಪಡೆಯುತ್ತಾರೆ, ಪೃಥ್ವಿ ರಾಶಿಯ ಹಾಗೂ ಅಗ್ನಿರಾಶಿಯ ಗುರು (ಧನು ರಾಶಿಯ ಅಪವಾದವು) ಪಂಚಮದಲ್ಲಿದ್ದರೆ ವಿದ್ಯೆಯಲ್ಲಿ ಮಂದಗತಿಯವರಿರುತ್ತಾರೆ. ಯಾವದೇ ರಾಶಿಯ ಗುರು ಪಂಚಮದಲ್ಲಿದ್ದರೆ ಸಂತತಿ ಸೌಖ್ಯ ಬಹಳ. ಕರ್ಕ, ಮೀನ ರಾಶಿಗಳ ಗುರು-ಚಂದ್ರರ ಯುತಿಯು ಪಂಚಮದಲ್ಲಿದ್ದರೆ ವಿದ್ಯೆಗೋಸ್ಕರ ಪರದೇಶ ಪ್ರಯಾಣವನ್ನು ಕೈಕೊಳ್ಳುವರು. ಕರ್ಕ, ಧನು ಮೀನ,

ಮಿಥುನ, ತುಲಾ, ಕುಂಭ, ಈ ರಾಶಿಗಳ ಗುರು ಚಂದ್ರರ ಯುತಿಯು ಪಂಚಮದಲ್ಲಿದ್ದ ಸ್ತ್ರೀಯರು (ಮೊದಲನೆ ದರ್ಜೆಯ) ಅಧಿಕಾರಿಗಳೂ ರಾಜ್ಯಭಾರಿಗಳೂ ಗವರ್ನರರೂ, ಮಂತ್ರಿಗಳೂ ಆಗಿದ್ದು, ಉತ್ತಮಲೇಖಕರು ಆಗಿರುತ್ತಾರೆ. ಬಲಾಢ್ಯ ಗುರು ಪಂಚಮದಲ್ಲಿದ್ದರೆ ಲೇಖನದ ವ್ಯವಸಾಯಕ್ಕೆ ಉತ್ತಮವು.

ಶುಕ್ರ:— ಶುಕ್ರನು ಪಂಚಮದಲ್ಲಿದ್ದ ಸ್ತ್ರೀಯರು ಕಲಾಕೌಶಲ್ಯದಲ್ಲಿ ಪ್ರವೀಣತೆಯನ್ನು ಪಡೆದಿರುತ್ತಾರೆ. ಇಂಥ ಸ್ತ್ರೀಯರು ನಾಟಕ ಸಿನೇಮಾ ಮುಂತಾದ ಮನೋರಂಜಕ ಹಾಗೂ ವಿಲಾಸಮಯ ಜೀವನದಲ್ಲಿಯೇ ಮುಳುಗಿ ಕಾಲಹರಣ ಮಾಡುತ್ತಾರೆ. ತುಲಾ, ಮೀನ, ವೃಷಭ ಮಿಥುನ, ಕುಂಭ ಈ ರಾಶಿಗಳ ಶುಕ್ರನು ಪಂಚಮದಲ್ಲಿದ್ದರೆ ಸಾಹಿತ್ಯ, ಸಂಗೀತ, ಮತ್ತು ಲಲಿತ ಕಲೆಗಳಲ್ಲಿ ಪ್ರವೀಣರಿದ್ದು ಉತ್ತಮ ಲೇಖಕೀಯರೂ ಮತ್ತು ಕವಿಗಳೂ ಆಗಿರುತ್ತಾರೆ, ಶುಕ್ರನು ಪಂಚಮದಲ್ಲಿರುವದು ಸಂತತಿಗೆ ಪೋಷಕವು. ಶುಕ್ರ-ಚಂದ್ರರ ಯುತಿಯು ವೃಷಭ, ತುಲಾ, ಮೀನ ಈ ರಾಶಿಗಳ ಪಂಚಮದಲ್ಲಿದ್ದರೆ ಆ ಸ್ತ್ರೀಯರು ಸಂಪತ್ತಿಗೆ ಸ್ಥಿತಿಯು ಉತ್ತಮವಿರುವದಲ್ಲದೆ ಶೃಂಗಾರಮಯ ಜೀವನದಲ್ಲಿ ಮಗ್ನರಾಗಿರುತ್ತಾರೆ. ಇತರ ರಾಶಿಯ ಶುಕ್ರ—ಮಂಗಳರ ಯುತಿಯು ಪಂಚಮದಲ್ಲಿದ್ದರೆ ಪ್ರೇಮ, ಪ್ರಣಯಗಳ ಮೂಲಕ ಅವರ ಶಿಕ್ಷಣಕ್ಕೆ ವಿಘ್ನಗಳು ಒದಗುತ್ತವೆ.

ಶನಿ:— ಮಿಥುನ, ತುಲಾ, ಕುಂಭ, ಮಕರ ರಾಶಿಯ ಶನಿಯು ಪಂಚಮದಲ್ಲಿದ್ದರೆ ಕುಶಾಗ್ರಬುದ್ಧಿಯೂ, ನ್ಯಾಯ, ವ್ಯಾಕರಣ, ತತ್ವಜ್ಞಾನ, ಧಾರ್ಮಿಕ ಮುಂತಾದ ವಿದ್ಯೆಗಳಲ್ಲಿ ಪ್ರವೀಣತೆಯನ್ನು ಹೊಂದಿರುವರು. ಇತರ ಯಾವದೇ ರಾಶಿಯ ಶನಿಯು ಪಂಚಮದಲ್ಲಿದ್ದರೆ ವಿದ್ಯೆ ಹಾಗೂ ಸಂತತಿಗಳಿಗೆ ಮಾರಕನು (ಪ್ರತಿಕೂಲನು). ಅಗ್ನಿರಾಶಿಯ ಹಾಗೂ ನಿರ್ಬಲ ಶನಿಯು ಪಂಚಮದಲ್ಲಿದ್ದರೆ ಶಿಕ್ಷಣ ಪೂರ್ತಿಯಾಗುವದಿಲ್ಲ. ಮತ್ತು ಸಂತತಿಗೆ ಅಪಾಯಕಾರಕನು.

ರಾಹು:— ಮಿಥುನ ಕನ್ಯಾ ರಾಶಿಯ ರಾಹು ಬುಧನೊಂದಿಗೆ ಪಂಚಮದಲ್ಲಿದ್ದರೆ ಅಥವಾ ವೃಷಭ, ತುಲಾ, ಕುಂಭ ರಾಶಿಯ ಶುಕ್ರನೊಂದಿಗೆ ಪಂಚಮದಲ್ಲಿದ್ದರೆ ಆ ಸ್ತ್ರೀಯರು ಚಿತ್ರದ ಕೆಲಸ(Painting)

ಚಿತ್ರಕಲೆ (Drawing) ಛಾಯಾಚಿತ್ರಗ್ರಹಣ (Photography), ಟ್ಯಾಪಿಂಗ (Typing) ಮುಂತಾದ ವಿದ್ಯೆಗಳಲ್ಲಿ ಪ್ರವೀಣರಿರುತ್ತಾರೆ. ಉಳಿದ ಯಾವದೇ ರಾಶಿಯ ರಾಹು ಪಂಚಮದಲ್ಲಿದ್ದರೆ ಶಿಕ್ಷಣ ಹಾಗೂ ಸಂತತಿಗೆ ಹಾನಿದಾಯಕನು. ನೀಚರಾಶಿಯ ರಾಹು ಪಂಚಮದಲ್ಲಿದ್ದರೆ ಗರ್ಭಪತನಭಯವಿರುತ್ತದೆ.

ಕೇತು :— ಧನು-ಮೀನಗಳ ಕೇತು ಗುರುವಿನೊಂದಿಗೆ ಪಂಚಮದಲ್ಲಿಯೂ, ಅಥವಾ ತುಲಾ ಕುಂಭಗಳ ಕೇತು ಶನಿಯೊಂದಿಗೆ ಪಂಚಮದಲ್ಲಿಯೂ ಇದ್ದರೆ ಆ ಸ್ತ್ರೀಯರು ಆಧ್ಯಾತ್ಮಪ್ರವೃತ್ತಿಯವರೂ ನ್ಯಾಯ, ಧರ್ಮ ಮತ್ತು ವ್ಯಾಕರಣ ಶಾಸ್ತ್ರಗಳನ್ನು ಬಲ್ಲವರೂ ಇದ್ದು, ಆಜನ್ಮ ಕುಮಾರಿಯರಾಗಿ ಉಳಿಯುವ ಸಂಭವವಿರುತ್ತದೆ, ಉಳಿದ ಯಾವದೇ ರಾಶಿಯ ಕೇತು ಪಂಚಮದಲ್ಲಿದ್ದರೆ ಶಿಕ್ಷಣ ಹಾಗೂ ಸಂತತಿಗೆ ಹಾನಿದಾಯಕನಿರುತ್ತಾನೆ.

### ಪಂಚಮಸ್ಥಾನದಲ್ಲಿರುವ ಗ್ರಹಗಳ ಯುತಿ

(೧) ಬಲಾಢ್ಯ ರಾಶಿಯ ರವಿ-ಮಂಗಳರ ಯುತಿ ಪಂಚಮಸ್ಥಾನದಲ್ಲಿದ್ದರೆ ಆ ಸ್ತ್ರೀಯರು ವಕೀಲರೂ, ರಾಜಕಾರಣಿಗಳೂ, ಇಂಜನಿಯರರೂ ಡಾಕ್ಟರರೂ, ನರ್ಸರೂ, ಇದ್ದು, ಸಮಾಜ ಧುರೀಣರೂ ರಾಜಕಾರಣಿಗಳೂ ಇರುತ್ತಾರೆ. (೨) ಬಲಿಷ್ಠರಾದ ಬುಧ-ಶುಕ್ರರ ಯುತಿಯು ಪಂಚಮದಲ್ಲಿದ್ದರೆ ಸಾಹಿತ್ಯ, ಸಂಗೀತ ನೃತ್ಯ ಕಲೆ ಮುಂತಾದ ಕಲಾಕೌಶಲ್ಯಗಳಲ್ಲಿ ಪ್ರವೀಣರಿದ್ದು ಗ್ರಂಥಕರ್ತರೂ ಪ್ರಕಾಶಕರೂ, ಲೇಖಕರೂ, ನಟಿಯರೂ, ಕವಿಗಳೂ, ಆಗಿರುತ್ತಾರೆ. (೩) ಬಲಿಷ್ಠ ಗುರು-ಚಂದ್ರರ ಯುತಿಯು ಪಂಚಮದಲ್ಲಿದ್ದರೆ ವಿಶ್ವವಿದ್ಯಾಲಯದ ಪರೀಕ್ಷೆಯಲ್ಲಿ ಉಚ್ಚ ದರ್ಜೆಯಲ್ಲಿ ತೇರ್ಗಡೆ ಹೊಂದುವರಲ್ಲದೆ ಉಚ್ಚ ಶಿಕ್ಷಣಕ್ಕಾಗಿ ಪರದೇಶ ಪ್ರಯಾಣವನ್ನು ಕೈಕೊಳ್ಳುವರು. ಮತ್ತು ಇಂಥ ಸ್ತ್ರೀಯರು ಉತ್ತಮ ಲೇಖಕರಿರುತ್ತಾರೆ. (೪) ಬಲಾಢ್ಯ ಬುಧ-ಚಂದ್ರರ ಯುತಿಯು ಪಂಚಮದಲ್ಲಿದ್ದರೆ ಗೃಹ ಕೃತ್ಯಗಳಲ್ಲಿ ಪಾರಂಗತರಿದ್ದು, ವ್ಯವಹಾರ ಕುಶಲರಿರುತ್ತಾರೆ. (೫) ಬಲಾಢ್ಯ ರವಿ-ಗುರುಗಳ ಯುತಿಯು ಪಂಚಮದಲ್ಲಿದ್ದರೆ ದೊಡ್ಡ ಅಧಿಕಾರಿಗಳೂ, ಮಂತ್ರಿಗಳೂ ಆಗುತ್ತಾರೆ. (೬) ನೀಚ ಶುಕ್ರ-ಮಂಗಳ ಯುತಿ

ಪಂಚಮದಲ್ಲಿದ್ದರೆ ಪ್ರೇಮ ಪ್ರಣಯದ ಮೂಲಕ ವಿದ್ಯಾಭ್ಯಾಸಕ್ಕೆ ತೊಂದರೆಯುಂಟಾಗುವದು. (೭) ಶನಿ-ಮಂಗಳ, ಶನಿ-ರವಿ, ರಾಹು-ಶನಿ, ರವಿ-ಕೇತು, ರಾಹು-ಮಂಗಳ, ಈ ಯುತಿಗಳು ಪಂಚಮದಲ್ಲಿದ್ದರೆ ವಿದ್ಯಾಭ್ಯಾಸಕ್ಕೆ ತೊಂದರೆಯುಂಟಾಗುವದು.

**ಸಂತತಿ**

ವಿವಾಹದ ನಂತರ ಸ್ತ್ರೀಯರಿಗೆ ಸಂತತಿ ಸೌಖ್ಯವು ಮಹತ್ವದ್ದಿರುತ್ತದೆ. ಸಂತತಿ ಯೋಗವೆಂದು? ಸಂತತಿಯು ಗಂಡುಗಳೆಷ್ಟು? ಮತ್ತು ಹೆಣ್ಣುಗಳೆಷ್ಟು? ಮಕ್ಕಳು ಗುಣವಂತರೂ, ರೂಪವಂತರೂ, ಭಾಗ್ಯವಂತರೂ, ಆಜ್ಞಾಧಾರಕರೂ ನಿರೋಗಿಗಳು ಇರುವರೋ ಎಂಬುದನ್ನು ತಿಳಿಯಲು ಪ್ರತಿಯೊಬ್ಬ ವಿವಾಹಿತ ಸ್ತ್ರೀಗೆ ಜಿಜ್ಞಾಸೆ ಇರುತ್ತದೆ. ಈ ಎಲ್ಲ ವಿಷಯಗಳನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ. (ಸಂತಾನಯೋಗ ಹಾಗೂ ಸಂತತಿ-ಸೌಖ್ಯ ಈ ಎಲ್ಲ ವಿಷಯಗಳನ್ನು ವಿವರಣೆಯು ನಮ್ಮ "ವಧೂವರರ ಜ್ಯೋತಿಷ" ಎಂಬ ಪುಸ್ತಕದಲ್ಲಿ ೭ನೆಯ ಪ್ರಕರಣದ ೭ನೆಯ ಪುಟದ ವಿವರಿಸಲಾಗಿದೆ.

ಸಂತತಿ-ಸೌಖ್ಯದ ಬಗ್ಗೆ ಹೇಳಬೇಕಾದರೆ ಪಂಚಮ ಸ್ಥಾನವನ್ನು ನೋಡಬೇಕಾಗುತ್ತದೆ ಈ ಸ್ಥಾನದಿಂದ ಗಂಡು-ಹೆಣ್ಣುಗಳೆಷ್ಟು ಮೊದಲನೆಯ ಸಂತತಿಯು ಯಾವದು ಎಂಬ ವಿಷಯಗಳನ್ನು ತಿಳಿಯಲು ಬರುತ್ತದೆ

ಸಂತತಿಯ ಬಗ್ಗೆ ವಿಚಾರ ಮಾಡುವಾಗ ಪತಿ-ಪತ್ನಿಯರಿಬ್ಬರ ಕುಂಡಲಿಗಳನ್ನು ಪರಿಶೀಲಿಸಬೇಕು. ಎಷ್ಟೋ ಗ್ರಂಥಕಾರರು (ಜ್ಯೋತಿಷಿಗಳು) ಪುರುಷರ ಕುಂಡಲಿಗಳ ಮೇಲಿಂದಲೇ ನಿರ್ಧರಿಸಬೇಕೆನ್ನುತ್ತಾರೆ. ಮುದ್ರಾಸ ಕಡೆಯ ಭಾಗದ ಜ್ಯೋತಿರ್ವಿದರು ಹಾಗೂ ನಾಡಿ ಗ್ರಂಥಗಳ ಮೇಲಿಂದ ಭವಿಷ್ಯವನ್ನು ಹೇಳುವ ಜೋತಿಷಿಗಳು ಪುರುಷರ ಕುಂಡಲಿಯ ಮೇಲೆಯೇ ಭವಿಷ್ಯವನ್ನು ನಿರ್ಧರಿಸುತ್ತಾರೆ.

ಪಾಶ್ಚಿಮಾತ್ಯ ಜೋತಿರ್ವಿದರು ಸ್ತ್ರೀಯರ ಕುಂಡಲಿಗಳಿಗೆ ಮಹತ್ವ ಕೊಡುತ್ತಾರೆ. ಹಾಗೂ ಅವರ ಕುಂಡಲಿಗಳ ಮೇಲಿಂದ ಸಂತತಿಯ ಬಗ್ಗೆ ನಿರ್ಣಯಿಸುತ್ತಾರೆ.

ನಮ್ಮ ಅನುಭವದ ಪ್ರಕಾರ ಸಂತತಿಗೋಸ್ಕರ ಸ್ತ್ರೀಯರ ಕುಂಡಲಿಗಳನ್ನೇ ಪರಿಶೀಲಿಸಬೇಕು ಏಕೆಂದರೆ ಗರ್ಭಸಂಭವ ಆಗುವದು. ಹಾಗೂ ೯ ತಿಂಗಳ ಗರ್ಭವು ಉದರದಲ್ಲಿರುವದು ಮತ್ತು ಅದರ ಸಂಗೋಪನವು ತಾಯಿಯ ಶರೀರದ ಮೇಲೆಯೇ ಸಂಪೂರ್ಣ ಇರುವದರಿಂದ ಸ್ತ್ರೀಯರ ಕುಂಡಲಿಗಳಿಗೆ ಹೆಚ್ಚು ಪ್ರಾಧಾನ್ಯತೆ ಕೊಡಬೇಕು.

ಪುರುಷರ ಕುಂಡಲಿಗಳಿಂದ ಎರಡು ಮೂರು ವಿಷಯಗಳನ್ನು ಮಾತ್ರ ನೋಡಬೇಕಾಗುವದು. ಏಕೆಂದರೆ ಸಂತತಿ ಅಭಾವವಿರುವದೋ ಅಥವಾ ವೀರ್ಯದೋಷವಿರುವದೋ ಹಾಗೂ ಶುಕ್ರ, ಮಂಗಳ, ಶನಿ, ರಾಹು ಈ ಗ್ರಹಗಳ ಅನಾನುಕೂಲತೆ ಹೇಗಿರುವದು ಎಂಬುದನ್ನು ಪತಿಯ ಕುಂಡಲಿಯ ಮೇಲಿಂದ ನಿರ್ಧರಿಸಬೇಕಾಗುವದು. ನಂತರ ಪತ್ನಿಯ ಕುಂಡಲಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಸಂತತಿಯ ಬಗ್ಗೆ ಸಂಪೂರ್ಣ ಭವಿತವ್ಯವನ್ನು ನಿರ್ಧರಿಸಬೇಕಾಗುವದು.

ಸಂತತಿಗೋಸ್ಕರ ಕೆಳಗಿನ ಸಂಗತಿಗಳನ್ನು ಮುಖ್ಯವಾಗಿ ನೋಡಬೇಕು.

(೧) ಸಂತತಿಸ್ಥಾನದಲ್ಲಿರುವ ರಾಶಿ (೨) ಪಂಚಮೇಶ (೩) ಸಂತತಿಕಾರಕನ ಸ್ಥಿತಿ (೪) ಶುಭಾಶುಭ ಯೋಗಗಳು ಈ ಎಲ್ಲ ಸಂಗತಿಗಳ ಸಹಾಯದಿಂದ ಸಂತತಿಗಳು ಎಷ್ಟೆಂಬುದನ್ನು ಹೇಳಬಹುದು. ಹಾಗೂ ಸಂತತಿಗಳ ನಡುವಿನ ಅಂತರವೆಷ್ಟು ? ಗಂಡು ಎಷ್ಟು ? ಹೆಣ್ಣು ಎಷ್ಟು ? ಎಂಬ ಸಂಗತಿಗಳನ್ನು ತಿಳಿದುಕೊಳ್ಳಲು ಬರುವದು.

ಸಂತತಿಗಳ ಸಂಖ್ಯೆಯನ್ನು ನಿರ್ದಿಷ್ಟವಾಗಿ ಹೇಳಲು ಬಾರದು. ಆದರೆ ಸಂತತಿ ವಿಪುಲ, ಮಧ್ಯಮ ಅಲ್ಪ, ಅಥವಾ ಸಂತತಿಯ ಪೂರ್ಣ ಅಭಾವ, ವಂಧ್ಯಾ ಇವುಗಳನ್ನು ಕುರಿತು ಮಾತ್ರ ಹೇಳಬಹುದು.

ವಿಪುಲ ಸಂತತಿಯೆಂದರೆ ೯ ರಿಂದ ೧೨, ಮಧ್ಯಮ ಎಂದರೆ ೫ರಿಂದ ೮, ಅಲ್ಪವೆಂದರೆ ೨ ರಿಂದ ೪, ಅಭಾವವೆಂದರೆ ೧ ಇಲ್ಲವೆ ೨, ವಂಧ್ಯಾ (ಬಂಜೆ) ಎಂದರೆ ಸಂತತಿಯು ಏನೂ ಇರದಿರುವದು.

ಕರ್ಕ, ವೃಶ್ಚಿಕ, ಮೀನ, ಮಕರ ಇವು ಬಹು ಪ್ರಸವರಾಶಿಗಳು ವೃಷಭ, ತುಲಾ, ಕುಂಭ ಸಾಮಾನ್ಯ ಪ್ರಸವರಾಶಿಗಳು. ಮಿಥುನ

ಕನ್ಯಾ ಇವು ಅತ್ಯಲ್ಪಪ್ರಸವ ರಾಶಿಗಳು. ಮೇಷ, ಸಿಂಹ, ಧನು ಇವು ವಂಧ್ಯಾ ರಾಶಿಗಳು.

ಪುರುಷ ರಾಶಿಗಳು ಪುತ್ರ ಸಂತತಿಯ ಹಾಗೂ ಸ್ತ್ರೀರಾಶಿಗಳು ಕನ್ಯಾ ಸಂತತಿಯ ಪೋಷಕಗಳು ಇರುತ್ತವೆ. ಪುರುಷ ಗ್ರಹಗಳಾದ ರವಿ, ಮಂಗಳ, ಗುರು ಇವರು ಪುತ್ರ ಸಂತತಿಯನ್ನೂ, ಸ್ತ್ರೀ ಗ್ರಹಗಳಾದ ಶುಕ್ರ, ಚಂದ್ರರು ಕನ್ಯಾ ಸಂತತಿಯನ್ನೂ ಕೊಡುತ್ತಾರೆ. ಬುಧನು ಪುರುಷ ಗ್ರಹಗಳೊಂದಿಗೆ ಇದ್ದರೆ ಪುತ್ರ ಸಂತತಿಯನ್ನೂ ಮತ್ತು ಸ್ತ್ರೀ ಗ್ರಹಗಳೊಂದಿಗೆ ಇದ್ದರೆ ಸ್ತ್ರೀ ಸಂತತಿಯನ್ನು ಕೊಡುತ್ತಾನೆ. ಶನಿ, ರಾಹು, ಕೇತು ಈ ಗ್ರಹಗಳು ಸಂತತಿಗೆ ಮಾರಕ ಗ್ರಹಗಳು. ಆದರೆ ಈ ಗ್ರಹಗಳು ಬಲಿಷ್ಟರಾಗಿ ಪಂಚಮ ದಲ್ಲಿದ್ದರೆ ತಡವಾಗಿ ಒಂದೆರಡು ಸಂತತಿಗಳನ್ನು ಕೊಡುತ್ತವೆ ಗುರು, ಶುಕ್ರರು ಸಂತತಿಪೋಷಕ ಗ್ರಹಗಳು.

ಜಲರಾಶಿಗಳು ಬಹುಪ್ರಸವವನ್ನು ವಾಯು ಹಾಗೂ ಪೃಥ್ವಿರಾಶಿಗಳು ಮಧ್ಯಮ ಸಂತತಿಯನ್ನು, ಅಗ್ನಿರಾಶಿಗಳು ವಂಧ್ಯತ್ವವನ್ನೂ ಕೊಡುತ್ತವೆ:

ಪಂಚಮ ಸ್ಥಾನದಲ್ಲಿರುವ ರಾಶಿ, ಪಂಚಮ ಸ್ಥಾನದಲ್ಲಿರುವ ಗ್ರಹ, ಪಂಚಮೇಶನ ಬಲಾಬಲ ಹಾಗೂ ಪಂಚಮ ಸ್ಥಾನದಲ್ಲಿರುವ ಇತರ ಗ್ರಹಗಳ ದೃಷ್ಟಿ ಇವುಗಳನ್ನು ಪರಿಶೀಲಿಸಿ ಸಂತತಿಯ ಬಗ್ಗೆ ನಿರ್ಧರಿಸಬೇಕು.

ಎಷ್ಟೋ ಗ್ರಂಥಕರ್ತರು ಏಕಾದಶ ಸ್ಥಾನವನ್ನು ಪರಿಶೀಲಿಸುತ್ತಾರೆ. ಏಕೆಂದರೆ ಇದು ಪಂಚಮಸ್ಥಾನಕ್ಕೆ ಸಪ್ತಮಸ್ಥಾನವಾಗುತ್ತದೆ. ಪಂಚಮ ಸ್ಥಾನವೇ ಸಂತತಿಯ ಸ್ಥಾನವೆಂದು ನಮ್ಮ ಅನುಭವವಿದೆ. ತದನಂತರ ತೃತೀಯ, ಸಪ್ತಮ, ನವಮ, ಏಕಾದಶ ಈ ಸ್ಥಾನಗಳ ಬಲಾಬಲವನ್ನು ನೋಡಬೇಕು.

ಪಂಚಮ ಸ್ಥಾನದಲ್ಲಿ ಪುರುಷರಾಶಿಯ ಗುರು ಇದ್ದರೆ ಮೊದಲು ಗಂಡು ಸಂತತಿಯಾಗುವದು. ಹಾಗೂ ಆ ಪುತ್ರನು ರೂಪವಂತನೂ, ಗುಣವಂತನೂ ಹಾಗೂ ಭಾಗ್ಯಶಾಲಿಯಾಗುವನು, ಮಂಗಳನಿದ್ದರೆ ಸ್ಥೂಲ ದೇಹದವನೂ, ರೂಪವಂತನೂ ಇರುವನು. ಆದರೆ ತಂದೆ-ತಾಯಿಗಳ ಆಜ್ಞಾಧಾರಕನಾಗಲಾರನು. ಶನಿ ಇದ್ದರೆ ತಂದೆಯ ಸಂಗದ ಸಹಕಾರದಿಂದ ಇರಲಾರನು. ಪಂಚಮ ಸ್ಥಾನದಲ್ಲಿ ಶುಕ್ರ, ಚಂದ್ರರು ಇದ್ದರೆ ಮೊದಲು

ಕನ್ಯಾಸಂತತಿಯಾಗುವದು. ಸಿಂಹರಾಶಿಯ ಹೊರತಾಗಿ ನಿಕ್ಕ ರಾಶಿಯ ರವಿಯು ಪಂಚಮದಲ್ಲಿದ್ದರೆ ಪುತ್ರಸಂತತಿಯನ್ನು ಅಧಿಕವಾಗಿ ಕೊಡುವನು. ಮೇಷ ರಾಶಿಯ ರವಿಯು ಪಂಚಮದಲ್ಲಿದ್ದರೆ ಅತ್ಯಧಿಕ ಪುತ್ರಸಂತತಿಯನ್ನು ಕೊಡುತ್ತಾನೆ. ಮೇಷ, ಸಿಂಹ, ಧನು, ಕುಂಭ ಈ ರಾಶಿಗಳು ಪಂಚಮ ಸ್ಥಾನವಲ್ಲಿದ್ದು, ಶನಿ-ರವಿ. ರಾಹು-ಶನಿ, ರಾಹು-ರವಿ. ಶನಿ-ಮಂಗಳ, ಬುಧ-ಶನಿ ಹೀಗೆ ಯುತಿಯು ಪಂಚಮದಲ್ಲಿದ್ದ ಸ್ತ್ರೀಯರಿಗೆ ಸಂತತಿಯ ಅಭಾವವಿರುತ್ತದೆ. ಪಂಚಮಸ್ಥಾನದಲ್ಲಿ ರಾಹು ಇದ್ದರೆ ಆ ಸ್ತ್ರೀಯರ ಭಾಗ್ಯಸ್ಥಾನವನ್ನು ನೋಡಬೇಕು. ಏಕೆಂದರೆ ರಾಹು ಈ ಗ್ರಹವು ಗರ್ಭ ಪಾತವನ್ನು ಕೊಡುತ್ತಾನೆ. ಪಂಚಮಸ್ಥಾನದಲ್ಲಿ ಶನಿ ಇದ್ದರೂ ಸಹ ಭಾಗ್ಯಸ್ಥಾನವನ್ನು ನೋಡಬೇಕು. ಏಕೆಂದರೆ ಐದು ತಿಂಗಳುಗಳ ವರೆಗೆ ಗರ್ಭಕ್ರಿಯೆಗೆ ಅಪಾಯಕಾರಕನು. ಪಂಚಮಸ್ಥಾನದಲ್ಲಿ ಸ್ತ್ರೀರಾಶಿಗಳ ಶುಕ್ರ, ಚಂದ್ರರು ಇದ್ದರೆ ಕನ್ಯಾಧಿಕ್ಯವನ್ನು ಕೊಡುತ್ತಾರೆ. ಯಾವದೇ ರಾಶಿಯ ಗುರು ಪಂಚಮದಲ್ಲಿದ್ದರೆ ಸಂತತಿಸೌಖ್ಯವನ್ನು ಕೊಡುತ್ತಾನೆ. ಪಂಚಮಸ್ಥಾನದಲ್ಲಿ ವಂಧ್ಯಾ ರಾಶಿಯಿದ್ದು ಶನಿ, ರಾಹುಗಳಿದ್ದರೆ, ಅಥವಾ ಅನೇಕ ಪಾಪಗ್ರಹಗಳು ಪಂಚಮದಲ್ಲಿದ್ದರೆ ಸಂತತಿಸೌಖ್ಯ ಸಿಗಲಾರದು. ಕೇತು ಒಬ್ಬನೇ ಪಂಚಮದಲ್ಲಿದ್ದರೆ ಗರ್ಭನಾಶಕನಾಗಲಾರನು. ಆದರೆ ಕೋಪಿಷ್ಠ, ಬಡಕ, ರೋಗಿಷ್ಟ ಸಂತತಿಯನ್ನು ಕೊಡುತ್ತಾನೆ. ಸ್ತ್ರೀ ರಾಶಿಯ ರಾಹು ಪಂಚಮದಲ್ಲಿದ್ದರೆ ಮೂರು ನಾಲ್ಕು ತಿಂಗಳ ಗರ್ಭವನ್ನು ಹಲವು ಸಾರೆ ಕೆಡವಿ ಕೊನೆಗೊಮ್ಮೆ ಸಂತಾನವನ್ನು ಕೊಡುತ್ತಾನೆ. ಆದರೆ ಅದೇ ರಾಹು ಪುರುಷರಾಶಿಯ ಪಂಚಮದಲ್ಲಿ ಪಾಪಗ್ರಹದಿಂದ ಯುಕ್ತನಾಗಿದ್ದರೆ ಮಾತ್ರ ಸಂತಾನ ಹಾಗೂ ಗರ್ಭಕ್ಕೆ ಅಪಾಯಕಾರಕನು

ಮಿಥುನ, ತುಲಾ ಕುಂಭ ಈ ರಾಶಿಗಳ ಶನಿಯು ಪಂಚಮದಲ್ಲಿದ್ದರೆ ಮೂರು ನಾಲ್ಕು ತಿಂಗಳ ಗರ್ಭವನ್ನು ಕೆಡವಿ ಕೊನೆಗೆ ಕನ್ಯಾ ಸಂತತಿಯನ್ನು ಕೊಡುತ್ತಾನೆ. ಆದರೆ ಮೇಷ, ಸಿಂಹ, ಈ ರಾಶಿಗಳ ಶನಿಯು ಪಂಚಮದಲ್ಲಿದ್ದರೆ (ಗುರು ದೃಷ್ಟಿ ರಹಿತ), ಅಥವಾ ಈ ರಾಶಿಗಳಲ್ಲಿ ರಾಹು ಶನಿಯರ ಯುತಿ ಇದ್ದರೆ ಸಂತತಿಗೆ ಹಾಗೂ ಗರ್ಭಕ್ಕೆ ಅಪಾಯ-ಕಾರಕನು

ಬುದ-ಶನಿಯರ ಯುತಿಯ ಸಂತತಿಗೆ ಅಶುಭದಾಯವು. ಆದರೆ ವಾಯು ರಾಶಿಗಳಲ್ಲಿ ಅವರ ಯುತಿಯು ಇದ್ದರೆ ಬಹು ದಿನಗಳ ನಂತರ ಸಂತಾನ ಪ್ರಾಪ್ತಿಯಾಗುತ್ತದೆ.

ಗುರು, ಚಂದ್ರ, ಶುಕ್ರ ಈ ಈ ಗ್ರಗಳು ಯಾವದೇ ರಾಶಿಯ ಪಂಚಮ-ದಲ್ಲಿದ್ದರೂ ಸಂತಾನ-ಸೌಖ್ಯವನ್ನು ಕೊಡುತ್ತಾರೆ.

ಮಿಥುನ, ಇಲ್ಲವೆ ಮೀನ ರಾಶಿಯು ಪಂಚಮಸ್ಥಾನದಲ್ಲಿದ್ದು ಗುರು-ಚಂದ್ರ, ಗುರು-ಶುಕ್ರ, ಶುಕ್ರ-ಚಂದ್ರ, ಇವರ ಯುತಿಯು ಪಂಚಮದಲ್ಲಿ ಇದ್ದರೆ ಅವಳಿ-ಜವಳಿ ಸಂತಾನದ ಪ್ರಾಪ್ತಿಯಾಗುವದು.

### ಅವಳಿ-ಜವಳಿ ಸಂತತಿಯ ಯೋಗ

(೧) ಅವಳಿ-ಜವಳಿ ಸಂತಾನವನ್ನು ಕೊಡತಕ್ಕಂಥ ರಾಶಿಗಳೆಂದರೆ ಮಿಥುನ, ಕರ್ಕ, ಕನ್ಯಾ, ಮಕರ ಮತ್ತು ಮೀನ. (೨) ಅವಳಿ-ಜವಳಿ ಸಂತಾನವನ್ನು ಕೊಡತಕ್ಕ ಗ್ರಹಗಳೆಂದರೆ ಗುರು, ಚಂದ್ರ, ಮತ್ತು ಶುಕ್ರ. (೩) ಅವಳಿ ಜವಳಿ ಸಂತಾನವನ್ನು ಕೊಡತಕ್ಕಂಥ ನಕ್ಷತ್ರಗಳೆಂದರೆ ರೋಹಿಣಿ, ಮೃಗಶಿರಾ, ಹಸ್ತಾ, ಅನುರಾದಾ ಶ್ರವಣಾ, ಉತ್ತರಾ-ಭಾದ್ರಪದಾ, ರೇವತಿ, ಪುನರ್ವಸು, ಮತ್ತು ಪುಷ್ಯ. (೪) ಅವಳಿ-ಜವಳಿ ಸಂತಾನವನ್ನು ಕೊಡತಕ್ಕ ಯೋಗಗಳೆಂದರೆ (ಅ) ಜಲರಾಶಿಯು ಗುರು ಪಂಚಮದಲ್ಲಿದ್ದರೆ (ಬ) ಜಲರಾಶಿಯು ಪಂಚಮದಲ್ಲಿದ್ದು ಗುರು-ಚಂದ್ರ, ಗುರು-ಶುಕ್ರ, ಶುಕ್ರ ಚಂದ್ರರ ಯುತಿಯು ಇದ್ದರೆ (ಕ) ಮಿಥುನ, ಕನ್ಯಾ, ಧನು, ಮೀನ ಈ ರಾಶಿಗಳು ಪಂಚಮ, ನವಮ, ಮತ್ತು ಏಕಾದಶ ಸ್ಥಾನಗಳಲ್ಲಿದ್ದು ಗುರು-ಚಂದ್ರರ ಯುತಿಯು ಅಲ್ಲಿಯೇ ಇದ್ದರೆ (ಡ) ಮೀನ ರಾಶಿಯ ಗುರು-ಶುಕ್ರರ ಯುತಿಯು ಪಂಚಮ, ನವಮ, ಲಾಭ, ಸಪ್ತಮ ಈ ಯಾವದೇ ಸ್ಥಾನದಲ್ಲಿದ್ದರೂ ಅವಳಿ-ಜವಳಿ ಸಂತಾನದ ಯೋಗವಿರು-ತ್ತದೆ. (೫) ಪಂಚಮೇಶನು ಬಹುಪ್ರಸವ ರಾಶಿಗಳಲ್ಲಿ ಗುರುವಿನೊಂದಿಗೆ ಇದ್ದರೆ.

ಮೇಲೆ ತೋರಿಸಿದ ಯೋಗಗಳು ಇದ್ದರೆ ಅವಳಿ-ಜವಳಿ ಸಂತಾನವು ಪ್ರಾಪ್ತಿಯಾಗುತ್ತದೆ.

## ತಾಯಿ ಮಕ್ಕಳಲ್ಲಿ ಸಹಕಾರ

(೧) ಪಂಚಮೇಶ ಚತುರ್ಥೇಶ (೨) ಲಗ್ನೇಶ ಹಾಗೂ ಪಂಚಮೇಶ (೩) ಲಾಭೇಶ ಹಾಗೂ ಪಂಚಮೇಶ (೪) ಲಾಭೇಶ ಹಾಗೂ ಚತುರ್ಥೇಶ (೫) ಲಗ್ನೇಶ ಮತ್ತು ಚತುರ್ಥೇಶ (೬) ಭಾಗ್ಯೇಶ ಹಾಗೂ ಪಂಚಮೇಶ (೭) ಲಗ್ನೇಶ ಹಾಗೂ ಭಾಗ್ಯೇಶ (೮) ಚತುರ್ಥೇಶ ಹಾಗೂ ಭಾಗ್ಯೇಶ ಇವರ ನೈಸರ್ಗಿಕ ಮಿತ್ರತ್ವ ಸಮತ್ವ, ಶತೃತ್ವ ಇವುಗಳನ್ನರಿತುಕೊಂಡು, ಅವರ ಬಲಾಬಲ ಹಾಗೂ ದೃಷ್ಟಿ ಮತ್ತು ಶುಭಯೋಗಗಳನ್ನು ಪರಿಶೀಲಿಸಿ, ತಾಯಿ-ಮಕ್ಕಳಲ್ಲಿಯ ಸಹಕಾರದ ಬಗ್ಗೆ ಹೇಳಬೇಕಾಗುತ್ತದೆ.

ಪಂಚಮೇಶ — ಭಾಗ್ಯೇಶ, ಅಥವಾ ಚತುರ್ಥೇಶ ಪಂಚಮೇಶ, ಅಥವಾ ಚತುರ್ಥೇಶ ಭಾಗ್ಯೇಶ ಇವರು ನೈಸರ್ಗಿಕವಾಗಿ ಮಿತ್ರರಾಗಿದ್ದರೆ ತಾಯಿ-ಮಕ್ಕಳಲ್ಲಿ ಪ್ರೇಮವಿರುತ್ತದೆ

ಲಗ್ನೇಶ ಹಾಗೂ ಪಂಚಮೇಶರು ಮಿತ್ರರಿದ್ದು, ಅನ್ಯೋನ್ಯ ರಾಶಿಯಲ್ಲಿದ್ದರೆ. ಅಥವಾ ನವ-ಪಂಚಮ ಯೋಗವಿದ್ದರೆ ತಾಯಿ-ಮಕ್ಕಳಲ್ಲಿ ಅಚಲವಾದ ಪ್ರೇಮವಿರುತ್ತದೆ. ಇಂತಹ ಪುತ್ರರು ತಾಯಿಗೆ ನಿಷ್ಠಾವಂತರಾಗಿರುತ್ತಾರೆ.

ಲಗ್ನೇಶ— ಪಂಚಮೇಶ ಅಥವಾ ಚತುರ್ಥೇಶ— ಪಂಚಮೇಶ ಅಥವಾ ಚತುರ್ಥೇಶ — ಭಾಗ್ಯೇಶ ಅಥವಾ ಪಂಚಮೇಶ — ಭಾಗ್ಯೇಶ, ಅಥವಾ ಲಗ್ನೇಶ—ಭಾಗ್ಯೇಶರು ಪಾಪಗ್ರಹಗಳಿದ್ದು ಒಬ್ಬರಿಗೊಬ್ಬರು ಶತ್ರುವಿದ್ದರೆ ತಾಯಿ ಮಕ್ಕಳಲ್ಲಿ ಸಹಕಾರವಿರುವದಿಲ್ಲ.

ಮೀನ ಲಗ್ನದಲ್ಲಿ ಮಂಗಳನು ಚತುರ್ಥದಲ್ಲಿದ್ದರೆ ತಾಯಿ–ಮಕ್ಕಳಲ್ಲಿ ಸಹಕಾರವಿರಲಾರದು. ಅಥವಾ ಮೇಷ ಸಿಂಹ. ಧನು, ವೃಶ್ಚಿಕ, ಮಕರ ಈ ರಾಶಿಗಳ ಮಂಗಳನು ಚತುರ್ಥ, ಪಂಚಮ. ಭಾಗ್ಯ ಇಲ್ಲವೆ ಲಗ್ನ ಸ್ಥಾನದಲ್ಲಿದ್ದರೆ ತಾಯಿ ಮಕ್ಕಳಲ್ಲಿ ಅಷ್ಟೊಂದು ಸಹಕಾರವಿರಲಾರದು.

ಯಾವುದೇ ರಾಶಿಯ ಮಂಗಳನು ಚತುರ್ಥದಲ್ಲಿದ್ದರೆ ತಾಯಿ ಮಕ್ಕಳಲ್ಲಿ ಭಿನ್ನಾಭಿಪ್ರಾಯವಿರುತ್ತದೆ. ಅಥವಾ ಪಂಚಮೇಶನು ಇಲ್ಲವೆ

ಚತುರ್ಥೇಶನು ಮಂಗಳನಿದ್ದು ೪, ೫, ೬, ೮, ೧೨, ೧, ಈ ಯಾವದೇ ಒಂದು ಸ್ಥಾನದಲ್ಲಿದ್ದರೂ ತಾಯಿ-ಮಕ್ಕಳಲ್ಲಿ ಭಿನ್ನಾಭಿಪ್ರಾಯವಿರುತ್ತದೆ.

ಲಗ್ನ ಚತುರ್ಥ, ಪಂಚಮ, ಭಾಗ್ಯ ಈ ಯಾವದೇ ಸ್ಥಾನದಲ್ಲಿ ಗುರು-ಚಂದ್ರ, ಗುರು-ಶುಕ್ರ, ಶುಕ್ರ-ಚಂದ್ರ, ರವಿ-ಗುರು ಇವರ ಯುತಿ ಇದ್ದರೆ ತಾಯಿ-ಮಕ್ಕಳು ಅನ್ಯೋನ್ಯ ಸಹಕಾರದಿಂದಿರುವರು.

ಪಂಚಮೇಶನು ರವಿ, ಚಂದ್ರ, ಬುಧ, ಗುರು, ಶುಕ್ರ ಯಾರೊಬ್ಬರದು ೧, ೪, ೫, ೯, ೧೧ ಈ ಯಾವದೇ ಸ್ಥಾನದಲ್ಲಿದ್ದರೂ ತಾಯಿ-ಮಕ್ಕಳಲ್ಲಿ ಸಹಕಾರವಿರುತ್ತದೆ.

೧, ೪, ೫, ೯, ೧೧ ಈ ಯಾವದೇ ಸ್ಥಾನದಲ್ಲಿ ಶನಿ, ರಾಹು ಮಂಗಳ ಕೇತು ಈ ಗ್ರಹಗಳಿದ್ದರೆ ಅಥವಾ ಈ ಯಾವದೇ ಎರಡು ಗ್ರಹಗಳಿದ್ದರೆ ತಾಯಿಮಕ್ಕಳಲ್ಲಿ ಸಹಕಾರವಿರುವದಿಲ್ಲ.

ಚತುರ್ಥ, ಪಂಚಮ, ನವಮ ಈ ಯಾವದೇ ಸ್ಥಾನದಲ್ಲಿ ಶನಿ-ಮಂಗಳ ರವಿ-ಶನಿ, ರವಿ-ಕೇತು, ರಾಹು-ರವಿ, ರಾಹು-ಮಂಗಳ ಇವರ ಯುತಿಯು ಇದ್ದರೆ ತಾಯಿಮಕ್ಕಳಲ್ಲಿ ಸಹಕಾರವಿರಲಾರದು.

## ಗರ್ಭ ಪ್ರತಿಬಂಧವನ್ನು ಯಾರು ಮಾಡಿಕೊಳ್ಳಬೇಕು ?

ನಮ್ಮ ಪೂರ್ವಜರು ಸಂತತಿಯಿದ್ದಷ್ಟು ಸಂಪತ್ತೆಂದು ತಿಳಿಯುತ್ತಿದ್ದರು. ಇದರೆ ಇತ್ತೀಚಿನ ಸುಶಿಕ್ಷಿತ ಹಾಗೂ ಫ್ಯಾಶನೇಬಲ್ ಸ್ತ್ರೀಯರಿಗೆ ಗರ್ಭಧಾರದಿಂದ ಅಥವಾ ಸಂತತಿಗಳಿಂದ ಸೌಂದರ್ಯ ಕೆಡುತ್ತದೆ. ವಿಲಾಸ, ಚೈನಿ, ರತಿ-ಸುಖಮುಂತಾದವುಗಳಿಗೆ ವಿಘ್ನಗಳು ಬರುವದರಿಂದ ಪ್ರತಿಬಂಧವನ್ನು ಮಾಡಿಕೊಳ್ಳುತ್ತಾರೆ ಆದರೆ ಸಾಂಪತ್ತಿಕ ಸ್ಥಿತಿ ಉತ್ತಮವಿದ್ದಾಗ್ಯೂ ಹೀಗೆ ಪ್ರತಿಬಂಧ ಮಾಡಿಕೊಳ್ಳುವದು ಕೇವಲ ಸ್ವಾರ್ಥಮಯವಾಗಿರುತ್ತದೆ.

ಮಧ್ಯಮ ವರ್ಗದವರಿಗೆ ವಿಶೇಷವಾಗಿ ನೌಕರವರ್ಗದವರಿಗೆ ಎರಡು ಮೂರು ಸಂತತಿಗಳಿಗಿಂತ ಹೆಚ್ಚು ಸಂತತಿಯಾದರೆ ದಾರಿದ್ರ್ಯ ಯೋಗವೆಂದೂ ಅನ್ನಬಹುದಾದ ಪರಿಸ್ಥಿತಿ ಇದೆ. ಏಕೆಂದರೆ ಸಂತತಿಯ-ಸಂಗೋಪನ,

ಶಿಕ್ಷಣ, ಹಾಗೂ ಅವರ ಹೊಟ್ಟೆಬಟ್ಟೆಗಳನ್ನು ನೋಡಿ ಸಲುಹಲು ಅಶಕ್ತರಿರುತ್ತಾರೆ. ಪ್ರತಿಬಂಧವನ್ನು ಮಾಡಿಕೊಳ್ಳುವ ಇದೊಂದು ವರ್ಗ.

ಆದ್ದರಿಂದ ಸಂತತಿಯ ನಿಯಂತ್ರಣ ಬೇಕೊ ? ಬೇಡವೊ ? ಆರ್ಥಿಕ ದೃಷ್ಟಿಯಿಂದ ಇದರ ಪರಿಣಾಮ ದೇಶಕ್ಕೆ ಏನಾಗುತ್ತದೆ ? ಪ್ರತಿಬಂಧಕವು ಪೋಷಕವೋ ? ಘಾತುಕವೋ ? ಈ ಎಲ್ಲ ಪ್ರಶ್ನೆಗಳನ್ನು ಆರ್ಥಿಕ ತಜ್ಞರು ಬಿಡಿಸಬಹುದು. ಇದು ನಮ್ಮ ಕರ್ತವ್ಯವಲ್ಲ. ಆದರೆ ಜನ್ಮ-ಕುಂಡಲಿಗಳ ಸಹಾಯದಿಂದ ಯಾವ ಸ್ತ್ರೀಯು ಗರ್ಭ ಪ್ರತಿಬಂಧವನ್ನು ಮಾಡಿಕೊಳ್ಳ-ಬೇಕು, ಮತ್ತು ಯಾವ ಸ್ತ್ರೀಯು ಮಾಡಿಕೊಳ್ಳಬಾರದು. ಮತ್ತು ಪ್ರತಿ-ಬಂಧಕವು ಯಾರ ಆರೋಗ್ಯಕ್ಕೆ ಯೋಗ್ಯವು. ಮತ್ತು ಯಾರ ಆರೋಗ್ಯಕ್ಕೆ ಅಯೋಗ್ಯವು ಎಂಬುದನ್ನು ಮಾತ್ರ ಕೆಲವೊಂದು ಜೋತಿಷ್ಯ ಕಾರಣಗಳ ಮೂಲಕ ಹೇಳಬಯಸುತ್ತೇವೆ. ಜನ್ಮಕುಂಡಲಿಯು ಸರಿಯಾಗಿದ್ದರೆ ನಮ್ಮ ಸಲಹೆಯು ಡಾಕ್ಟರರ ಸಲಹೆಗಿಂತ ಹೆಚ್ಚು ಹಿತಕರವಾದೀತೆಂದು ಅಭಿಮಾನ ಪೂರ್ವಕ ಹೇಳಬಯಸುತ್ತೇವೆ.

ಈ ಕೆಳಗೆ ಕಾಣಿಸಿದ ಯೋಗಗಳಿದ್ದ ಸ್ತ್ರೀಯರು ಇಚ್ಛಿತ ಸಂತತಿ ಪ್ರಾಪ್ತವಾದ ಬಳಿಕ ಗರ್ಭಪ್ರತಿಬಂಧಕೋಪಾಯವನ್ನು ಅವಶ್ಯವಾಗಿ ಮಾಡಿಕೊಳ್ಳಬಹುದು. (ಆರೋಗ್ಯ ದೃಷ್ಟಿಯಿಂದ).

(೧) ಕರ್ಕ, ವೃಶ್ಚಿಕ, ಮೀನ ಈ ಯಾವುದೇ ಒಂದು ರಾಶಿಯಲ್ಲಿ ಪಂಚಮೇಶನಿದ್ದು, ಮೇಷ, ಸಿಂಹ, ಈ ರಾಶಿಗಳಲ್ಲಿ ಗುರು ಇರದೇ ಇದ್ದರೆ (೨) ಕರ್ಕ, ತುಲಾ. ವೃಶ್ಚಿಕ, ಮಕರ ಕುಂಭ, ಮೀನ ಈ ಯಾವದೇ ಒಂದು ರಾಶಿಯು ಪಂಚಮಸ್ಥಾನದಲ್ಲಿದ್ದು, ಜಲರಾಶಿಯಲ್ಲಿ ಗುರು ಇದ್ದರೆ (೩) ಕರ್ಕ, ವೃಶ್ಚಿಕ, ಮಕರ, ಮೀನ ಈ ಯಾವದೇ ಒಂದು ರಾಶಿಯು ಪಂಚಮದಲ್ಲಿದ್ದು ಗುರು. ಚಂದ್ರ, ಶುಕ್ರ ಯಾರೊಬ್ಬರು ಅಥವಾ ಯಾರಿಬ್ಬರು ಪಂಚಮದಲ್ಲಿದ್ದರೆ. (೪) ಜಲರಾಶಿಯು ಅಥವಾ ಪೃಥ್ವಿರಾಶಿಯು ಅಥವಾ ವಾಯು ರಾಶಿಯು ಗುರು ಪಂಚಮದಲ್ಲಿದ್ದರೆ (೫) ಪಂಚಮೇಶ ಹಾಗೂ ಗುರು ಇವರ ಯುತಿಯು ಜಲರಾಶಿಯಲ್ಲಿದ್ದು ಪಂಚಮ, ಭಾಗ್ಯ, ಲಾಭ ಈ ಯಾವದೊಂದು ಸ್ಥಾನದಲ್ಲಿದ್ದರೆ. (೬) ಕರ್ಕ, ವೃಶ್ಚಿಕ, ಮಕರ,

ಮೀನ ಈ ರಾಶಿಗಳು, ಲಗ್ನ, ಪಂಚಮ, ಭಾಗ್ಯ ಈ ಯಾವದೊಂದು ಸ್ಥಾನದಲ್ಲಿದ್ದು ಪಂಚಮೇಶ ಹಾಗೂ ಗುರುವಿನ ಯುತಿ ಅಲ್ಲಿಯೇ ಇದ್ದರೆ (೭) ಅಗ್ನಿರಾಶಿಯ ಗುರು ೬, ೮, ೧೨ನೇ ಸ್ಥಾನಗಳಲ್ಲಿ ಇರದೇ ಇದ್ದರೆ.

ಮೇಲೆ ಕಂಡ ಯೋಗಗಳಿದ್ದ ಸ್ತ್ರೀಯರು ಸಂತತಿಪ್ರತಿಬಂಧಕವನ್ನು ಮಾಡಿಕೊಳ್ಳಲು ಅಡ್ಡಿಯಿಲ್ಲ.

ಕೆಳಗೆ ಕಾಣಿಸಿದ ಯೋಗಗಳಿದ್ದ ಸ್ತ್ರೀಯರು ಸಂತತಿಪ್ರತಿಬಂಧಕವನ್ನು ಮಾಡಿಕೊಳ್ಳಬಾರದು.

(೧) ಅಗ್ನಿರಾಶಿ ಅಥವಾ ವಂಧ್ಯಾರಾಶಿಯು ಪಂಚಮಸ್ಥಾನದಲ್ಲಿದ್ದು, ರವಿ-ಶನಿ, ಶನಿ-ರಾಹು, ಶನಿ-ಮಂಗಳ, ಶನಿ-ಬುಧ, ರಾಹು-ಬುಧ, ಶನಿ-ಕೇತು ಇವರ ಯುತಿಯು ಅಲ್ಲಿಯೇ ಇದ್ದರೆ (೨) ಮೇಷ, ಸಿಂಹ ರಾಶಿಗಳ ಗುರು ಶನಿಯೊಂದಿಗೆ ೬, ೮, ೧೨ ಸ್ಥಾನಗಳಿದ್ದರೆ (೩) ನೀಚ ರಾಶಿಯ ರಾಹು ಅಥವಾ ಶನಿ ಪಂಚಮದಲ್ಲಿದ್ದರೆ (೪) ಪಂಚಮೇಶನು ಅಸ್ತ, ವಕ್ರ, ಶತ್ರುಕ್ಷೇತ್ರೀ, ನೀಚನಾಗಿದ್ದು, ೬, ೮, ೧೨ ಈ ಸ್ಥಾನಗಳಲ್ಲಿ ಇದ್ದು, ಗುರು ದೃಷ್ಟಿರಹಿತ ಪಂಚಮಸ್ಥಾನದಲ್ಲಿದ್ದರೆ (೫) ಮೇಷ ಸಿಂಹ, ಧನು, ಕನ್ಯಾ, ಮಿಥುನ ಈ ರಾಶಿಗಳಲ್ಲಿ ಗುರು, ಶನಿಯ ಸಮಸಪ್ತಕ ಇದ್ದರೆ ಅಥವಾ ಗುರು-ಶನಿಯರ ಯುತಿ ಇದ್ದರೆ (೬) ಅಗ್ನಿರಾಶಿಯಲ್ಲಿ ಗುರು-ಶನಿಯರ ಯುತಿ ಇದ್ದು ಪಂಚಮದಲ್ಲಿ ರಾಹು ಇದ್ದರೆ (೭) ನಿರ್ಬಲನಾದ ಪಂಚಮನು ಶನಿ, ರಾಹುಗಳೊಂದಿಗೆ ಇದ್ದರೆ (೮) ಶನಿ-ಮಂಗಳ, ಶನಿ-ರಾಹು, ಇವರ ಸಮಸಪ್ತಕವು ಪಂಚಮ, ಏಕಾದಶದಲ್ಲಿದ್ದರೆ (೯) ಭಾಗ್ಯದಲ್ಲಿ ರಾಹು, ಪಂಚಮದಲ್ಲಿ ಶನಿ ಇದ್ದರೆ ಅಥವಾ ಭಾಗ್ಯದಲ್ಲಿ ಶನಿ ಪಂಚಮದಲ್ಲಿ ರಾಹು ಇದ್ದರೆ (೧೦) ಶನಿಯಿಂದ ನೋಡಲ್ಪಟ್ಟ ರಾಹು ಪಂಚಮದಲ್ಲಿದ್ದರೆ (ಗುರು ದೃಷ್ಟಿರಹಿತ ಪಂಚಮಸ್ಥಾನ) (೧೧) ಅನೇಕ ಪಾಪ-ಗ್ರಹಗಳು ಪಂಚಮ, ಭಾಗ್ಯ, ಲಾಭದಲ್ಲಿದ್ದರೆ.

ಮೇಲೆ ಕಾಣಿಸಿದ ಯೋಗಗಳಿದ್ದ ಸ್ತ್ರೀಯರು ಸಂತತಿಪ್ರತಿಬಂಧಕವನ್ನು ಮಾಡಿಕೊಳ್ಳಬಾರದು.

## ಗರ್ಭಾಶಯದ-ದೋಷಗಳು

(೧) ಪಂಚಮಸ್ಥಾನದಲ್ಲಿ ಮಿಥುನ, ಕನ್ಯಾ, ಇಲ್ಲವೆ ಧನು ರಾಶಿಯು ಇದ್ದು, ಗುರು ಪಂಚಮೇಶನಿಂದ ಯುಕ್ತನಾಗಿ ಪಂಚಮಸ್ಥಾನದಲ್ಲಿ ಇದ್ದರೆ ತಡವಾಗಿ ಸಂತಾನ ಪ್ರಾಪ್ತಿಯಾಗುತ್ತದೆ. (೨) ಕರ್ಕ, ವೃಶ್ಚಿಕ ಮತ್ತು ಮೀನ ಈ ರಾಶಿಗಳ ಗುರು ಶನಿಯಿಂದ ಯುಕ್ತನಾಗಿ ಲಗ್ನ, ಪಂಚಮ, ಸಪ್ತಮ, ನವಮ, ಇಲ್ಲವೆ ಭಾಗ್ಯ ಸ್ಥಾನದಲ್ಲಿದ್ದರೆ ತಡವಾಗಿ ಸಂತಾನ-ಪ್ರಾಪ್ತಿಯಾಗುತ್ತದೆ. (೩) ಲಗ್ನದಲ್ಲಿ ಇಲ್ಲವೆ ಪಂಚಮಸ್ಥಾನದಲ್ಲಿ ಮೇಷ, ಸಿಂಹ, ಧನು, ಕುಂಭ, ತುಲಾ ಈ ರಾಶಿಗಳಿದ್ದು, ಹಾಗೂ ಪಂಚಮೇಶನು ೬-೮-೧೨ ಗುರು ಸ್ಥಾನಗಳಲ್ಲಿದ್ದರೆ ಸಂತತಿಯ ಅಭಾವವಿರುತ್ತದೆ (೪) ಕರ್ಕ, ವೃಶ್ಚಿಕ, ಮಕರ, ಮೀನ ಈ ರಾಶಿಗಳು ಲಗ್ನ ಇಲ್ಲವೆ ಪಂಚಮದಲ್ಲಿದ್ದು, ಶನಿ, ರಾಹು, ಮಂಗಳ, ಬುಧ ಈ ಯಾವುದಾದರೂ ಎರಡು ಗ್ರಹಗಳ ಯುತಿ ಇಲ್ಲವೆ ಲಗ್ನ ಷಷ್ಠಮಸ್ಥಾನದಲ್ಲಿದ್ದರೆ ಗರ್ಭಾಶಯದಲ್ಲಿ ದೋಷ-ಉತ್ಪನ್ನವಾಗುತ್ತದೆ. ಅಥವಾ ಮೇಲಿಂದಮೇಲೆ ಮೂರು ನಾಲ್ಕು ತಿಂಗಳ ಗರ್ಭಪತನವಾಗುತ್ತದೆ. (Abortion) (೫) ಜಲರಾಶಿಗಳು ಪಂಚಮ-ದಲ್ಲಿದ್ದು, ಶುಕ್ರ-ಮಂಗಳರ ಯುತಿ ಅಲ್ಲಿಯೇ ಇದ್ದರೆ ಗರ್ಭಾಶಯದಲ್ಲಿ ದೋಷವಿರುತ್ತದೆ. (೬) ಯಾವದೇ ಲಗ್ನದ ವೃಶ್ಚಿಕ ರಾಶಿಯಲ್ಲಿ ಅನೇಕ ಪಾಪಗ್ರಹಗಳು ಇದ್ದರೆ ಗರ್ಭಾಶಯದಲ್ಲಿ ದೋಷವಿರುತ್ತದೆ (೭) ಲಗ್ನ ಇಲ್ಲವೆ ಅಷ್ಟಮಸ್ಥಾನದಲ್ಲಿ ವೃಶ್ಚಿಕ ರಾಶಿಯಿದ್ದು, ಶುಕ್ರ-ಮಂಗಳರ ಯುತಿಯು ಅಲ್ಲಿಯೇ ಇದ್ದರೆ ಗರ್ಭಾಶಯದಲ್ಲಿ ದೋಷವಿರುತ್ತದೆ. (ಗರ್ಭವು ನಿಲ್ಲುವುದಿಲ್ಲ) (೮) ಮೇಷ, ಸಿಂಹ, ತುಲಾ, ವೃಶ್ಚಿಕ ಮತ್ತು ಕುಂಭ ಈ ಯಾವದೇ ರಾಶಿಯಲ್ಲಿ ಶುಕ್ರನಿದ್ದು, ಶನಿಯಿಂದ ಈಕ್ಷಿಸಲಟ್ಟರೆ ಗರ್ಭಾಶಯ-ದೋಷವಿರುತ್ತದೆ. (೯) ವೃಶ್ಚಿಕ ರಾಶಿಯು ಪಂಚಮ-ಸ್ಥಾನದಲ್ಲಿದ್ದು ಶನಿ-ಮಂಗಳ, ಶುಕ್ರ-ಮಂಗಳ, ಬುಧ-ಶನಿ, ಬುಧ-ರಾಹು, ರಾಹು-ಶನಿ ಈ ಯಾವದೊಂದು ಗ್ರಹಗಳ ಯುತಿಯು ಇದ್ದರೆ ಗರ್ಭಾಶಯದ ದೋಷವಿರುತ್ತದೆ.

## ವಂಧ್ಯಾ-ಯೋಗ ಅಥವಾ ಅನಪತ್ಯ-ದೋಷ

ಪ್ರಾಚೀನ ಜ್ಯೋತಿರ್ವಿದರಾದ 'ವರಾಹಮಿಹಿರ'ರ ನಾದಾಂಕಿತ ಗ್ರಂಥವಾದ 'ಬೃಹಜ್ಜಾತಕ'ದ ಮೇಲೆ "ಭಟೋತ್ಪಾಲ" ಎಂಬವರು ಟೀಕೆ ಬರೆಯುತ್ತಾ "ಸ್ತ್ರೀ-ಪುರುಷರ ಕುಂಡಲಿಯಲ್ಲಿ, ಅಶುಭಯೋಗಗಳಿಂದ ಸ್ತ್ರೀಯರಿಗೆ ವಂಧ್ಯಾತ್ವವೂ, ಪುರುಷರಿಗೆ ಅನಪತ್ಯ ದೋಷವೂ ಬರುತ್ತದೆ" ಎಂದು ಹೇಳಿದ್ದಾರೆ, ನಾವು ಅನೇಕ ಕುಂಡಲಿಗಳನ್ನು ನಿರೀಕ್ಷಿಸಲಾಗಿ ಈ ಮಾತಿನ ಸತ್ಯಾಂಶವು ತಿಳಿದುಬಂದಿದೆ.

(೧) ಯಾವದೇ ಸ್ತ್ರೀಯು ಜನ್ಮ ಹುಣ್ಣಿಮೆಯ ದಿನ ಆದರೆ ಆ ಸ್ತ್ರೀಯರಿಗೆ ವಂಧ್ಯಾತ್ವವು (ಬಂಜೆತನವು) ಬರುತ್ತದೆ. ಹೇಗೆಂದರೆ ಹುಣ್ಣಿಮೆಯ ದಿನ ಜನ್ಮಿಸಿದ ಸ್ತ್ರೀಯರು ರೂಪವಂತರೂ ಮತ್ತು ಸ್ಥೂಲ ದೇಹದವರೂ ಇರುತ್ತಾರೆ. ಆದರೆ ಸ್ಥೂಲದೇಹದಿಂದ ಅವರಿಗೆ ವಂಧ್ಯಾತ್ವವು ಬರುತ್ತದೆ. ಉದಾಹರಣೆ:— ಪೂರ್ಣಚಂದ್ರನು ಉದಿತವಾದಾಗ್ಯೆ ಯಾವದಾದರೊಂದು ಬಳ್ಳಿ ಅಥವಾ ಗಿಡವನ್ನು ಹಚ್ಚಿದರೆ ಅದು ಕೊಬ್ಬಾಗಿಯೂ, ವಿಸ್ತಾರವಾಗಿ ಶಾಖೋಪಶಾಖೆಗಳಿಂದ ಹಬ್ಬುವದು. ಆದರೆ ಅದು ಫಲವನ್ನು ಮಾತ್ರ ಕೊಡುವದಿಲ್ಲ. ಆದರೆ ಅದೇ ಗಿಡ ಇಲ್ಲವೆ ಬಳ್ಳಿಯನ್ನು ಅಮವಾಸ್ಯೆಯ ದಿನ ಹಚ್ಚಿದರೆ ನೀಳವಾಗಿ ವಿಕಮುಖವಾಗಿ ಬೆಳೆದರೂ ಅದು ಫಲಗಳಿಂದ ತುಂಬಿರುತ್ತದೆ. ಇದರಂತೆಯೇ ಅಮವಾಸ್ಯೆಯ ದಿನ ಜನ್ಮಿಸಿದ ಸ್ತ್ರೀಯರು ಬಡಕಲು, ಅಶಕ್ತರು, ದುರ್ಬಲರು ಇದ್ದಾಗ್ಯೂ ಸಂತಾನದಿಂದ ಕೂಡಿದವರಾಗಿರುತ್ತಾರೆ. (೨) ಶನಿ-ಬುಧರ ಇಲ್ಲವೆ ಶನಿ-ರಾಹುವಿನ ಸಮಸಪ್ತಕವು ಲಾಭ, ಪಂಚಮದಲ್ಲಿದ್ದರೆ ಆ ಸ್ತ್ರೀಯರಿಗೆ ವಂಧ್ಯಾತ್ವವು ಪ್ರಾಪ್ತಿಯಾಗುತ್ತದೆ. (೩) ಲಗ್ನ ಹಾಗೂ ಚಂದ್ರನು ಪುರುಷರಾಶಿಯಲ್ಲಿದ್ದು ಪಂಚಮದಲ್ಲಿ ಶನಿ-ರಾಹುವಿನ ಯುತಿ ಇದ್ದರೆ (೪) ಲಗ್ನ ಶುಕ್ರ, ಚಂದ್ರ, ಗುರು ಈ ನಾಲ್ಕರಲ್ಲಿ ಎರಡು ಗ್ರಹಗಳು ವಂಧ್ಯಾರಾಶಿಯಲ್ಲಿದ್ದರೆ

ಮೇಲಿನ ಈ ಎಲ್ಲ ಯೋಗಗಳು ಇದ್ದರೆ ಆ ಸ್ತ್ರೀಯರಿಗೆ ವಂಧ್ಯಾತ್ವವು ಬರುತ್ತದೆ.

## ವಂಧ್ಯಾಯೋಗ

' ವಂಧ್ಯಾಯೋಗ ' ಅಂದರೆ ' ಬಂಜೆತನ. ' ಒಂದೂ ಸಂತತಿ ಆಗದೇ ಇರುವದಕ್ಕೆ ನಿಜವಾದ ವಂಧ್ಯಾಯೋಗವೆಂದು ಹೇಳುವರು. ಆದರೆ ಕೆಲವು ಸ್ತ್ರೀಯರಿಗೆ ಗರ್ಭಾಶಯದ ವಿಕೃತಿಯ ಮೂಲಕ, ಅಥವಾ ಶಾರೀರಿಕ ದೋಷದ ಮೂಲಕ ಇಲ್ಲವೆ ತಾತ್ಕಾಲಿಕ ಬೇನೆಯ ಕಾರಣ ವಂಧ್ಯಾಯೋಗವು ಪ್ರಾಪ್ತಿಯಾಗುತ್ತದೆ. ಇದರ ಬಗ್ಗೆ ಕೆಲವು ಕಾರಣಗಳನ್ನು ಕೆಳಗೆ ಕೊಡಲಾಗಿದೆ.

(೧) ವಾತ, ಪಿತ್ತ, ಕಫ ಮುಂತಾದ ದೋಷಗಳಿಂದ (೨) ರಕ್ತ ನ್ಯೂನತೆಯ ಕಾರಣ (೩) ಆರ್ತವ ದೋಷ ಅಗ್ರಹ ದೋಷ (೪) ಪೂರ್ವಜರ ಶಾಪ (೫) ಮಾಟ ಮೊದಲಾದ ದುಷ್ಕೃತ್ಯಗಳಿಂದ (೬) ಪಿಶಾಚಿ ಬಾಧೆ (೭) ಪತಿಯ ವೀರ್ಯದೋಷ. ಹೀಗೆ ಏಳು ದೋಷಗಳ ಮೂಲಕ ಸ್ತ್ರೀಯರಿಗೆ ವಂಧ್ಯಾಯೋಗವು ಪ್ರಾಪ್ತಿಯಾಗುತ್ತದೆ. ಆದರೆ ಇವುಗಳಲ್ಲಿಯ ಎಷ್ಟೋ ವಿಕಾರಗಳನ್ನು ದೈವಿಕ ಹಾಗೂ ವೈದ್ಯಕ ಉಪಾಯಗಳಿಂದ ಕಡಿಮೆ ಮಾಡಲು ಬರುತ್ತದೆ

ಪ್ರಾಚೀನ ಆಯುರ್ವೇದಿಕ ಗ್ರಂಥಗಳನ್ನು ಪರಿಶೀಲಿಸಿದರೆ ವಂಧ್ಯಾತ್ವದಲ್ಲಿ ' ಎಂಟು ' ಪ್ರಕಾರಗ-ಳಿರುವುದು ಕಂಡುಬರುತ್ತದೆ. ಯಾವವೆಂದರೆ

(೧) ತ್ರಿಪಕ್ಷ; (೨) ಕಾಫ್ರತಿ (೩) ಸಜ್ಞಾ. (೪) ತ್ರಿಮುಖಿ. (೫) ವ್ಯಾಘ್ರಿಣೀ; (೬) ಬಕೀ; (೭) ಕಮಲಿನಿ; (೮) ವ್ಯಕ್ತಿನಿ।

(೧) ತ್ರಿಪಕ್ಷ :— ಇಂಥ ಸ್ತ್ರೀಯರು ಒಂದೂವರಿ ತಿಂಗಳ ನಂತರ ಮುಟ್ಟಾಗುತ್ತಾರೆ. ಇಲ್ಲವೆ ಇವರ ಮುಟ್ಟು ಅನಿಯಮಿತವಿರುತ್ತದೆ. ಇಂಥ ಸ್ತ್ರೀಯರ ಕುಂಡಲಿಯಲ್ಲಿ ಪಂಚಮಸ್ಥಾನದಲ್ಲಿ ಮೇಷ, ಮಿಥುನ, ಕನ್ಯಾ, ಧನು ಮತ್ತು ಕುಂಭ ಈ ರಾಶಿಗಳಲ್ಲೊಂದಿದ್ದು. ಪುರ್ಸು ವಾಯು ಇಲ್ಲವೆ ಅಗ್ನಿರಾಶಿಯಲ್ಲಿದ್ದು ಶನಿಯೊಂದಿಗೆ ಕೇಂದ್ರಯೋಗ, ಸಮಸಪ್ತಕ ಅಥವಾ ಯುತಿಯಲ್ಲಿ ಇರುತ್ತಾನೆ, ಇಂಥ ಸ್ತ್ರೀಯರ ಮುಟ್ಟಾಗುವಿಕೆಯು ಅನಿಯಮಿತವಿರುವ ಕಾರಣ ಸಂತತಿಯಾಗುವದಿಲ್ಲ, ಆದರೆ ಯೋಗ್ಯ ಉಪಾಯಗಳಿಂದ ಸಂತತಿಯಾಗುವ ಸಂಭವವಿರುತ್ತದೆ.

(೨) ಶುಭ್ರತಿ :— ಈ ಸ್ತ್ರೀಯರು ಕುಳ್ಳರೂ ಮತ್ತು ಸ್ಥೂಲಕಾಯದವರೂ ( ವಾತಮಯವುಳ್ಳವರೂ ) ಇರುತ್ತಾರೆ. ಇವರ ಗರ್ಭಾಶಯದ ಮುಖ ಬಹಳೇ ಆಕುಂಚಿತವಿರುತ್ತದೆ. ಇವರು ನಿಜವಾಗಿಯೂ ವಂಧ್ಯಾ ಇರುತ್ತಾರೆ. ಇಂಥ ಸ್ತ್ರೀಯರ ಪಂಚಮಸ್ಥಾನದಲ್ಲಿ ವೃಷಭ ಇಲ್ಲವೆ ವೃಶ್ಚಿಕ ರಾಶಿಯು ಇದ್ದು ; ಶನಿ, ಮಂಗಳ, ರಾಹು ಬುಧ ಇವುಗಳಲ್ಲಿ ಯಾವದೇ ಎರಡು ಗ್ರಹಗಳು ಪಂಚಮದಲ್ಲಿ ಇರುತ್ತಾರೆ. ಅಥವಾ ಗರ್ಭಾಶಯದ ದೋಷವನ್ನು ಕೊಡುವಂಥ ವೃಶ್ಚಿಕ ರಾಶಿಯ ಶನಿಯು ವಕ್ರಗತನಾಗಿ ಪಂಚಮದಲ್ಲಿ ಇರುತ್ತಾನೆ. ಅಥವಾ ಬಲಹೀನ ಗುರುವು ವಕ್ರಗತನಾಗಿ ಅಷ್ಟಮದಲ್ಲಿ ಇರುತ್ತಾನೆ. ( ಮೇಲಾಗಿ ಹುಣ್ಣಿಮೆಯ ದಿನ ಜನ್ಮಿಸಿದ ಸ್ತ್ರೀಯರು ವಾತಮ್ಯಯುಳ್ಳವರು ಇರುತ್ತಾರೆ ).

(೩) ಸಜ್ಜಾ :— ಇಂಥ ಸ್ತ್ರೀಯರು ಒಮ್ಮೊಮ್ಮೆ ನಿಯಮಿತವಾಗಿಯೂ ಒಮ್ಮೊಮ್ಮೆ ಅನಿಯಮಿತವಾಗಿಯೂ ಮುಟ್ಟಾಗುತ್ತಾರೆ. ಇಂಥ ಸ್ತ್ರೀಯರ ಜನ್ಮಕುಂಡಲಿಯ ಪಂಚಮಸ್ಥಾನದಲ್ಲಿ ಅಗ್ನಿ ಇಲ್ಲವೆ ವಾಯು ರಾಶಿಗಳಿದ್ದು, ಬಲಹೀನ ಪಂಚಮೇಶನು ಅಶುಭಗ್ರಹಗಳ ದೃಷ್ಟಿಯಿಂದಿದ್ದು, ಶುಕ್ರನೂ ಸಹ ಅಗ್ನಿರಾಶಿಯಲ್ಲಿದ್ದು ಅಶುಭಗ್ರಹಗಳ ದೃಷ್ಟಿಯಲ್ಲಿರುತ್ತಾನೆ. ಔಷಧೋಪಚಾರಗಳಿಂದ ಇವರ ದೋಷವು ದೂರವಾಗುತ್ತದೆ.

(೪) ತ್ರಿಮುಖಿ :— ಕೋಪಿಷ್ಠರೂ, ವಿಷಯಲಂಪಟರೂ, ದುರ್ವ್ಯಸನಿಗಳೂ ಆದ ಇಂಥ ಸ್ತ್ರೀಯರು ನಿಜವಾಗಿಯೂ ವಂಧ್ಯರಿರುತ್ತಾರೆ. ಇಂಥ ಸ್ತ್ರೀಯರ ಕುಂಡಲಿಯ ಪಂಚಮ ಇಲ್ಲವೆ ಸಪ್ತಮಸ್ಥಾನದಲ್ಲಿ ಕರ್ಕ, ವೃಶ್ಚಿಕ, ಮೀನ ರಾಶಿಗಳಿದ್ದು ಶುಕ್ರ-ಮಂಗಳ, ಚಂದ್ರ-ಮಂಗಳ, ಶುಕ್ರ-ರಾಹು, ಚಂದ್ರ-ರಾಹು ಈ ಯುತಿಗಳಿದ್ದು, ನಿರ್ಬಲನಾದ ಗುರುವು ೬,೮,೧೨ ಸ್ಥಾನಗಳಲ್ಲಿ ಇರುತ್ತಾನೆ.

(೫) ವ್ಯಾಳ್ರಣಿ :— ಇಂಥ ಸ್ತ್ರೀಯರಿಗೆ, ಒಬ್ಬನೇ ಪುತ್ರ ಇಲ್ಲವೆ ಒಬ್ಬಳೇ ಪುತ್ರಿಯನ್ನು ಪಡೆದ ಮೇಲೆ, ಎಂಟು-ಹತ್ತು ವರ್ಷಗಳ ನಂತರ, ಇಲ್ಲವೆ ಇಳಿವಯಸ್ಸಿನಲ್ಲಿ ಪುನಃ ಸಂತಾನ-ಪ್ರಾಪ್ತಿಯಾಗುತ್ತದೆ. ಇಂಥ ಸ್ತ್ರೀಗೆ ವಂಧ್ಯಾ ಎನ್ನಲು ಬರುವದಿಲ್ಲ. ಇವರಿಗೆ ಅತ್ಯಲ್ಪ ಸಂತತಿ ಇರುತ್ತದೆ. ( 'ಅತ್ಯಲ್ಪ ಸಂತತಿ'ಯ ಯೋಗಗಳ ಬಗ್ಗೆ ಹಿಂದೆ ವಿವರಿಸಲಾಗಿದೆ ).

(೬) ಚಕಿ :— ಇಂಥ ಸ್ತ್ರೀಯರ ರಜಸ್ರವವು ಧೂಪದಂತೆ ಬಿಳಿದು ಇರುತ್ತದೆ, ಹಾಗೂ ರಜೋದರ್ಶನವಾದ ನಂತರ ಎಂಟು-ಹತ್ತು ದಿವಗಳ ವರೆಗೂ ಸ್ರಾವ ಇರುತ್ತದೆ. ಇಂಥ ಸ್ತ್ರೀಯರ ಜನ್ಮಕುಂಡಲಿಯಲ್ಲಿ ಶುಕ್ರ-ಮಂಗಳರ ಯುತಿಯು ಕರ್ಕ, ವೃಶ್ಚಿಕ, ಮಕರ ಇಲ್ಲವೆ ಮೀನ ರಾಶಿಯಲ್ಲಿದ್ದು, ಶನಿಯು ಅಶುಭ ದೃಷ್ಟಿಯಿಂದ ಕೂಡಿದ್ದು ಇರುತ್ತದೆ ಮತ್ತು ಗುರು ಹಾಗೂ ಪಂಚಮೇಶನು ಅಗ್ನಿರಾಶಿಯಲ್ಲಿರುತ್ತಾರೆ. (ಧನು ಇದು ಅಪವಾದವು) ಈ ಸ್ತ್ರೀಯರು ನಿಜವಾಗಿಯೂ ವಂಧ್ಯರು ಇರುತ್ತಾರೆ.

(೭) ಕಮಲಿನಿ :— ಇಂಥ ಸ್ತ್ರೀಯರು ಬೇಗಬೇಗ ಮುಟ್ಟಾಗು-ತ್ತಾರೆ. ಹಾಗೂ ಯಾವಾಗಲೂ ಸ್ರವ ಇದ್ದೇ ಇರುತ್ತದೆ. ಇಂಥ ಸ್ತ್ರೀಯರ ಸಪ್ತಮ ಸ್ಥಾನದಲ್ಲಿ ಕರ್ಕ. ವೃಶ್ಚಿಕ ಇಲ್ಲವೆ ಮೀನ ರಾಶಿಗಳಿದ್ದು, ಅಲ್ಲಿಯೇ ಚಂದ್ರ ಅಥವಾ ಶುಕ್ರರಲ್ಲೊಬ್ಬರಿದ್ದು ಇನ್ನೊಬ್ಬರು ಶನಿ ಬುಧರೊಂದಿಗೆ ಯುಕ್ತರಿರುತ್ತಾರೆ. ಯೋಗ್ಯ ಉಪಾಯಗಳಿಂದ ಈ ದೋಷವನ್ನು ನಿವಾರಿಸಲು ಬರುತ್ತದೆ

(೮) ವ್ಯಕ್ತಿನಿ :— ಪತಿಯ ವೀರ್ಯ ದೋಷದಿಂದ ಈ ಸ್ತ್ರೀಯರಿಗೆ ವಂಧ್ಯತ್ವವು ಬರುತ್ತದೆ. ಇಂಥ ಸ್ತ್ರೀಯರ ಜನ್ಮ ಕುಂಡಲಿಯಲ್ಲಿ ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ರಾಶಿಗಳಲ್ಲಿ ಶುಕ್ರ-ಮಂಗಳರ ಯುತಿ ಇದ್ದು ಶನಿ ಅಥವಾ ರಾಹುಗಳ ದೃಷ್ಟಿಯಿಂದ ಕೂಡಿದವರು ಇರುತ್ತಾರೆ. ಯೋಗ್ಯ ಉಪಾಯಗಳಿಂದ ಈ ದೋಷವನ್ನು ಇಲ್ಲದಂತೆ ಮಾಡಲು ಬರುತ್ತದೆ.

## ಗರ್ಭಧಾರಣ ಯೋಗ

ವಿವಾಹಿತ ನಿರೋಗೀ (ವಂಧ್ಯಾಯೋಗ ಇಲ್ಲವೆ ಗರ್ಭಾಶಯದ ದೋಷ ಇಲ್ಲದೇ ಇರುವ) ಸ್ತ್ರೀಯರಿಗೆ ೧೬ ರಿಂದ ೪೬ನೇ ವಯಸ್ಸಿನ ವರೆಗೆ ಸಂತಾನ ಪ್ರಾಪ್ತಿಯ ಯೋಗವಿರುತ್ತದೆ.

ಕುಂಡಲಿಯಲ್ಲಿ ಗರ್ಭೋತ್ಪಾದಕ ಸ್ಥಾನಗಳೆಂದರೆ ೧, ೩, ೫, ೭, ೯ ಮತ್ತು ೧೧. (ವಿಷಮಸ್ಥಾನಗಳು, ಮತ್ತು ಗೋಚರೀಯ ಗುರು ಈ ವಿಷಮ ಸ್ಥಾನಗಳಲ್ಲಿ ಬಂದಾಗ್ಯ ಗರ್ಭಧಾರಣವಾಗುತ್ತದೆ. ಯಾವ

ಸ್ತ್ರೀಯರಿಗೆ ಒಂದೂವರೀ ವರ್ಷದಿಂದ ಎರಡು ವರ್ಷಗಳವರೆಗೆ ಗರ್ಭಧಾರಣ ವಾಗುವದೋ ಅಂಥ ಸ್ತ್ರೀಯರಿಗೆ ಗುರು ಗರ್ಭೋತ್ಪಾದಕ ಗ್ರಹವೆಂದು ತಿಳಿಯಬೇಕು. ಎರಡು ವರ್ಷಗಳಿಂದ ಮೂರೂವರೀ ವರ್ಷಗಳ ಅಂತರದ ವರೆಗೆ ಗರ್ಭಧಾರಣವಾಗುತ್ತಿರುವಂತಹ ಸ್ತ್ರೀಯರಿಗೆ ಶುಕ್ರ ಮತ್ತು ಚಂದ್ರರು ಗರ್ಭೋತ್ಪಾದಕ ಗ್ರಹಗಳೆಂದು ತಿಳಿಯಬೇಕು. ಯಾವ ಸ್ತ್ರೀಯರಿಗೆ ಆರು ವರ್ಷಗಳಿಂದ ಎಂಟು ವರ್ಷಗಳ ಅಂತರದ ವರೆಗೆ ಸಂತತಿಯಾಗುವ-ದಿಲ್ಲವೊ ಅಂಥ ಸ್ತ್ರೀಗೆ ಅತ್ಯಲ್ಪ ಸಂತತಿ ದೋಷವಿರುತ್ತದೆಂದು ತಿಳಿಯುವೇಕು. ಇಂಥ ಸ್ತ್ರೀಯರ ಕುಂಡಲಿಯಲ್ಲಿ ಲಗ್ನ ಇಲ್ಲವೆ ಪಂಚಮಸ್ಥಾನದಲ್ಲಿ ಅಗ್ನಿ ಇಲ್ಲವೆ ವಾಯು ರಾಶಿಗಳ ಪಂಚಮೇಶ ಹಾಗೂ ಗುರು ಇವರು ೬, ೮, ಮತ್ತು ೧೨ ಈ ಸ್ಥಾನಗಳಲ್ಲಿ ಅಥವಾ ಗುರು, ಮೇಷ, ಸಿಂಹ, ಮತ್ತು ಮಿಥುನ ಈ ರಾಶಿಗಳಲ್ಲಿರುತ್ತಾರೆ.

ಸ್ತ್ರೀಯರ ಆರ್ತವ ಧರ್ಮವು ಚಂದ್ರ ಹಾಗೂ ಮಂಗಳ ಇವರ ಗುಣಗಳನ್ನು ಅವಲಂಬಿಸಿರುತ್ತದೆ. ಚಂದ್ರ ಗ್ರಹವು ಕಫಕಾರಕವಿದ್ದು ಮಂಗಳ ಗ್ರಹವು ರಕ್ತದಲ್ಲಿ ಪ್ರಭುತ್ವವನ್ನು ಪಡೆದಿರುತ್ತದೆ. ಚಂದ್ರನು ೧, ೨, ೪, ೫, ೭, ೮, ೯, ೧೨ ಈ ಯಾವದೇ ಸ್ಥಾನದ ಮೇಲಿಂದ ಮಂಗಳ-ನೊಡನೆ ಯುತಿ ಮಾಡುತ್ತಿದ್ದಾಗ್ಯೆ ಸದೃಢ ಹಾಗೂ ನಿರೋಗೀ ಸ್ತ್ರೀಯರ ಮಾಸಿಕ ರಜೋದರ್ಶನವು ನಿಯಮವಾಗಿ ಆಗುತ್ತದೆ.

ಯಾವ ಸ್ತ್ರೀಯರ ಕುಂಡಲಿಯಲ್ಲಿ ಮಂಗಳನು ಮೂಲಚಕ್ರ (ಜನ್ಮ-ಕುಂಡಲಿಯಲ್ಲಿ) ೩, ೬, ೧೦, ೧೧ ಈ ಸ್ಥಾನಗಳಲ್ಲಿದ್ದರೆ ಆ ಸ್ತ್ರೀಯರ ಮಾಸಿಕವು ನಿಯಮಿತವಾಗಿರುತ್ತದೆ.

ಕರ್ಕ, ವೃಶ್ಚಿಕ, ಮೀನ ಈ ಯಾವದೆ ರಾಶಿಯ ಮಂಗಳನು ಶುಕ್ರ-ನೊಂದಿಗೆ ಯುತಿ ಇಲ್ಲವೆ ಶುಕ್ರನೊಂದಿಗೆ ಸಮಸಪ್ತಕದಲ್ಲಿದ್ದರೆ ( ಮೂಲ ಕುಂಡಲಿಯಲ್ಲಿ) ಅಂಥ ಸ್ತ್ರೀಯರ ಮಾಸಿಕ ಬಹಳ ಬೇಗ ಇರುತ್ತದೆ. ಹಾಗೂ ಅಂಥ ಸ್ತ್ರೀಯರ ಸ್ರಾವವು ಬಹು ಪ್ರಮಾಣದಲ್ಲಿರುತ್ತದೆ.

ಯಾವ ಸ್ತ್ರೀಯರ ಕುಂಡಲಿಯಲ್ಲಿ ಶುಕ್ರನು ಪೃಥ್ವಿ ಇಲ್ಲವೆ ವಾಯು ರಾಶಿಯವನಾಗಿದ್ದು, ೨, ೩, ೬, ೭, ೧೦, ೧೧ ಈ ಯಾವದೇ ಸ್ಥಾನದಲ್ಲಿ

ಶನಿಯೊಂದಿಗೆ ಯುತಿ ಅಥವಾ ಶನಿಯ ಸಂಗಡ ಸಮಸಪ್ತಕ ಇಲ್ಲವೆ ಕೇಂದ್ರ ಯೋಗ ಮಾಡುತ್ತಿದ್ದರೆ ಆ ಸ್ತ್ರೀಯರ ಸ್ರಾವ ನಿಯಮಿತವಿರುವದಿಲ್ಲ, ಹಾಗೂ ಸ್ರಾವದ ಪ್ರಮಾಣವು ಕಡಿಮೆ ಇರುತ್ತದೆ. ಮತ್ತು ಶುಕ್ರ, ಶನಿಯರ ಅಶುಭ ಯೋಗವು ಯಾವದೇ ಸ್ಥಾನದ ಯಾವದೇ ರಾಶಿಯಲ್ಲಿದ್ದರೂ ಮಾಸಿಕವು ದೋಷಯುಕ್ತವಿರುತ್ತದೆ.

ರಜೋದರ್ಶನವಾದ ಐದನೆಯ ದಿವಸದಲ್ಲಿ ಚಂದ್ರನು ಉಪಚಯ ಸ್ಥಾನದಲ್ಲಿದ್ದು, ಜನ್ಮಸ್ಥ ಗುರುವಿನೊಂದಿಗೆ ದ್ವಿ-ದ್ವಾದಶಕ, ನವ-ಪಂಚಮ, ಸಮಸಪ್ತಕ, ಅಥವಾ ಯುತಿ, ಮಾಡುತ್ತಿದ್ದರೆ ಗರ್ಭಧಾರಣವಾಗುವದು. ಆದರೆ ನಪುಂಸಕ ಗ್ರಹಗಳಾದ ಶನಿ, ಬುಧರು ಗೋಚರೀಯ ಚಂದ್ರನೊಂದಿಗೆ ಯುತಿ, ಸಮಸಪ್ತಕ, ಇಲ್ಲವೆ ಕೇಂದ್ರಯೋಗವನ್ನು ಮಾಡುತ್ತಿದ್ದರೆ ಗರ್ಭಧಾರಣವಾಗುವದಿಲ್ಲ. (ಗೋಚರೀಯ ಚಂದ್ರನ ಉಪಚಯ ಸ್ಥಾನವನ್ನು ಲಗ್ನದಿಂದ ನೋಡಬೇಕೇ ವಿನಃ ರಾಶಿಯಿಂದ ನೋಡಬಾರದು.)

ವಿವಾಹಿತ ಸ್ತ್ರೀಯರ ಕುಂಡಲಿಯಲ್ಲಿ ಗೋಚರಿಯ ಗುರುವಿನ ಪರಿಭ್ರಮಣವು ಲಗ್ನ ತೃತೀಯ, ಪಂಚಮ, ಸಪ್ತಮ, ನವಮ, ಮತ್ತು ಏಕಾದಶ ಈ ಸ್ಥಾನಗಳ ಮೇಲಿಂದ ಆಗುತ್ತಿದ್ದಾಗ್ಯೆ ಗರ್ಭಧಾರಣವಾಗುವದು. (ವಂಧ್ಯಾ ಯೋಗವಿಂದೇ ಇದ್ದ ಕುಂಡಲಿಗಳಲ್ಲಿ)

ಗೋಚರೀಯ ಗುರುವಿನ ಪರಿಭ್ರಮಣವು ಪಂಚಮೇಶ, ಶುಕ್ರ ಮತ್ತು ಚಂದ್ರ ಇವರೊಂದಿಗೆ ಯೋಗವಲ್ಲಿದ್ದರೆ ಗರ್ಭಧಾರಣವಾಗುವದು.

### ಗರ್ಭಪತನ ಯೋಗ

ಗರ್ಭಧಾರಣವಾದ ಒಂದು ತಿಂಗಳ ನಂತರ, ಗೋಚರೀಯ ಶನಿ-ಮಂಗಳ. ಶನಿ-ರವಿ, ಬುಧ-ಶನಿ, ರಾಹು-ಶನಿ, ರಾಹು-ಮಂಗಳ ಈ ಯುತಿಗಳು ಪಂಚಮ ಇಲ್ಲವೆ ಸಪ್ತಮ ಸ್ಥಾನದಲ್ಲಿ ಆದರೆ ಗರ್ಭಕ್ಕೆ ಗಂಡಾಂತರ ಪೀರುತ್ತದೆ.

ಸ್ತ್ರೀಯರ ಜನ್ಮ-ಕುಂಡಲಿಯಲ್ಲಿ ರವಿ. ಮಂಗಳ, ಚಂದ್ರ ಇವರಲ್ಲಿ ಯಾವಾದರೊಬ್ಬರು ಪಂಚಮ ಇಲ್ಲವೆ ಸಪ್ತಮ ಸ್ಥಾನದಲ್ಲಿದ್ದು ಗೋಚರೀಯ

ಶನಿ ಇಲ್ಲವೆ ರಾಹುವಿನ ಪರಿಭ್ರಮಣವು ಇವರ ಮೇಲಿಂದ ಆಗುತ್ತಿದ್ದರೆ ಗರ್ಭಪತನದ ಭೀತಿಯು ಇರುತ್ತದೆ.

ಕರ್ಕ, ವೃಶ್ಚಿಕ, ಮಕರ ಮತ್ತು ಮೀನ ಈ ಯಾವದೇ ರಾಶಿಯು ಶುಕ್ರ-ಮಂಗಳರ ಯುತಿಯು ಪಂಚಮ, ಸಪ್ತಮ, ಅಷ್ಟಮ ಮತ್ತು ಏಕಾದಶ ಈ ಯಾವದೇ ಸ್ಥಾನದಲ್ಲಿದ್ದು ; ಗೋಚರೀಯ ಶನಿ ಇಲ್ಲವೆ ರಾಹುವಿನ ಪರಿಭ್ರಮಣವು ಅವರ ಮೇಲಿಂದ ಆಗುತ್ತಿದ್ದರೆ ಗರ್ಭಪತನದ ಭೀತಿಯಿರುತ್ತದೆ.

ಪಂಚಮ, ಸಪ್ತಮ, ಏಕಾದಶ ಈ ಯಾವದೇ ಸ್ಥಾನದಲ್ಲಿ ಶನಿ ಇಲ್ಲವೆ ರಾಹು ಇದ್ದು, ಗೋಚರೀಯ ರವಿಯ ಪರಿಭ್ರಮಣವು ಅವರ ಮೇಲಿಂದ ಆಗುತ್ತಿದ್ದರೆ ಗರ್ಭಪತನದ ಭೀತಿ ಇರುತ್ತದೆ

ಗೋಚರಿಯಿಂದ ಪಂಚಮೇಶನ ಪರಿಭ್ರಮಣವು ರಾಹು ಇಲ್ಲವೆ ಶನಿಯೊಂದಿಗೆ ೬, ೮, ೧೨ ಈ ಸ್ಥಾನಗಳಲ್ಲಿ ಆಗುತ್ತಿದ್ದರೆ ಅಥವಾ ಪಂಚಮೇಶನು ಗೋಚರಿಯಿಂದ ಅಸ್ತಂಗತ, ಪಾಪಗ್ರಹಯುಕ್ತ ಮತ್ತು ಪಾಪಗ್ರಹಗಳ ಮಧ್ಯದಲ್ಲಿ ಇದ್ದರೆ ಗರ್ಭಪತನದ ಭೀತಿಯು ಇರುತ್ತದೆ.

ಗರ್ಭಧಾರಣವಾದ ೩ನೆಯ ತಿಂಗಳಲ್ಲಿ ಗೋಚರೀಯ ಶನಿ-ಮಂಗಳರ ಇಲ್ಲವೆ ರಾಹು-ಶನಿಯರ ಸಮಸಪ್ತಕವು ಪಂಚಮ ಇಲ್ಲವೆ ಏಕಾದಶ ಸ್ಥಾನದಲ್ಲಿ ಆಗುತ್ತಿದ್ದರೆ ಗರ್ಭಪತನದ ಭೀತಿ ಇರುತ್ತದೆ

ಗೋಚರೀಯ ರಾಹುವಿನ ಪರಿಭ್ರಮಣವು ಪಂಚಮ ಇಲ್ಲವೆ ಏಕಾದಶ ಸ್ಥಾನಗಳಲ್ಲಿ ಆಗುತ್ತಿದ್ದರೆ ಗರ್ಭಪತನದ ಭೀತಿಯು ಇರುತ್ತದೆ. ಮತ್ತು ಗೋಚರೀಯ ಶನಿಯ ಪರಿಭ್ರಮಣವು ತೃತೀಯ, ಪಂಚಮ, ಸಪ್ತಮ, ಅಷ್ಟಮ ಮತ್ತು ಲಾಭ ಈ ಸ್ಥಾನಗಳಲ್ಲಿ ಆಗುತ್ತಿದ್ದರೆ ಗರ್ಭಪತನದ ಭೀತಿ ಇರುತ್ತದೆ.

### ಪ್ರೇಮ ಹಾಗೂ ಪ್ರಣಯ

ಐಹಿಕ ಸುಖವನ್ನಾಗಲೀ ಅಥವಾ ಇಂದ್ರಿಯಜನ್ಯ ಸೌಖ್ಯವನ್ನು ನೋಡಬೇಕಾದಲ್ಲಿ ನಾವು ಜಾತಕದ ಪಂಚಮಸ್ಥಾನವನ್ನು ನೋಡಬೇಕು

ರಾಶಿ-ಚಕ್ರದಲ್ಲಿ ಕರ್ಕ, ವೃಶ್ಚಿಕ, ಮೀನ ಈ ರಾಶಿಗಳು ವಿಷಯಸುಖದೆಡೆ ಇರುವ ಒಲವನ್ನು ತೋರಿಸುತ್ತವೆ.

ವಿಷಯ ವಾಸನೆಯ ಬಗ್ಗೆ ವಿಚಾರಿಸುವಾಗ ನಾವು ಐದು ಭೇದ-ಗಳನ್ನು ಕಾಣುತ್ತೇವೆ (೧) ವಿಷಯ ವಾಸನೆಯ ಅತಿರೇಕ. (೨) ಅನೈ-ಸರ್ಗಿಕ ವಿಷಯವಾಸನೆ (೩) ಅಮರ್ಯಾದಿತ ವಾಸನಾ ಲೋಲುಪತೆ (೪) ಲೈಂಗಿಕ ಅನಾಚಾರ ಹಾಗೂ ಅತ್ಯಾಚಾರ (೫) ವ್ಯಭಿಚಾರ. ಕರ್ಕ, ವೃಶ್ಚಿಕ, ಮೀನ ಈ ರಾಶಿಗಳಲ್ಲಿ ಮೇಲಿನ ಭೇದ ಕಂಡುಬರುತ್ತವೆ

ಮೀನ ರಾಶಿಯಲ್ಲಿ ಮಾನಸಿಕ ದೌರ್ಬಲ್ಯವು ಕಂಡುಬರುತ್ತದೆ. ಈ ರಾಶಿಯ ಜನರು ವ್ಯಸನಿಗಳ ಸಹಾಯದಿಂದ ಭ್ರಷ್ಟರಾಗುವರು. ಮೇಷ, ವೃಷಭ, ಸಿಂಹ ಇವು ಮರ್ಯಾದಿತ ವಿಷಯವಾಸನೆಯನ್ನು ಸೂಚಿಸುತ್ತವೆ. ವಿಷಯವಾಸನಾಕಾರಕ ಶುಕ್ರನಿದ್ದು ಅವನು ಮಂಗಳ ಶನಿ ಚಂದ್ರ ಕೂಡ ಅಶುಭ ಯೋಗವನ್ನು ಮಾಡುತ್ತಿದ್ದರೆ ಅಥವಾ ಕರ್ಕ, ವೃಶ್ಚಿಕ, ಮೀನ ಪಂಚಮದಲ್ಲಿದ್ದು ಅಲ್ಲಿಯೇ ಶುಕ್ರ-ಮಂಗಳ ಶುಕ್ರ-ಶನಿ ಶುಕ್ರ-ರಾಹು, ಶುಕ್ರ-ಚಂದ್ರರಿದ್ದರೆ ಇಂಥ ಸ್ತ್ರೀಯರು ಪ್ರೇಮವಿವಾಹಕ್ಕೊಳ-ಗಾಗುವ ಸಂಭವವಿದೆ

ಕರ್ಕ, ವೃಶ್ಚಿಕ, ಮಕರ ತುಲಾ ಈ ಯಾವದೇ ರಾಶಿಯ ಶುಕ್ರ-ಮಂಗಳರ ಯುತಿಯು ಪಂಚಮ, ಸಪ್ತಮ, ದ್ವಾದಶ ಈ ಯಾವದೇ ಸ್ಥಾನ ದಲ್ಲಿದ್ದ ಆ ಸ್ತ್ರೀಯರ ನೈತಿಕ ಸ್ಥಿತಿ ಅಧೋಗತಿಗೆ ಇಳಿಯುತ್ತದೆ.

ಕರ್ಕ, ವೃಶ್ಚಿಕ, ಮೀನ, ತುಲಾ ಈ ಯಾವದೇ ರಾಶಿಯ ಶುಕ್ರನು ವ್ಯಯ ಸ್ಥಾನದಲ್ಲಿದ್ದು ಮಂಗಳ, ಶನಿ, ಮತ್ತು ರಾಹು ಇವರಲ್ಲಿ ಯಾರೊಬ್ಬ-ರೊಡನೆ ಯೋಗದಲ್ಲಿದ್ದರೆ ಆ ಸ್ತ್ರೀಯರು ೧೫ನೇ ಇಲ್ಲವೆ ೧೬ನೇ ವಯಸ್ಸಿ-ನಿಂದಲೇ ವಿಷಯವಾಸನಾಸಕ್ತರಾಗುತ್ತಾರೆ.

ಯಾವದೇ ರಾಶಿಯ ಶುಕ್ರ-ಮಂಗಳರ ಯೋಗವು ೬, ೮, ೧೨ ಈ ಸ್ಥಾನಗಳಲ್ಲಿ ಆಗುತ್ತಿದ್ದರೆ ಇಂಥ ಸ್ತ್ರೀಯರು ವಿಷಯ ವಾಸನೆಯಲ್ಲಿ ಲೋಲುಪರಾಗಿರುತ್ತಾರೆ.

ಮಿಥುನ, ಕನ್ಯಾ, ವೃಷಭ, ತುಲಾ, ಕುಂಭ ಈ ರಾಶಿಗಳ ಶುಕ್ರನು ಪಂಚಮಸ್ಥಾನದಲ್ಲಿದ್ದರೆ ಆ ಸ್ತ್ರೀಯರು ವಿಷಯ ವಾಸನೆಯಲ್ಲಿ ಅಷ್ಟೊಂದು

ಆಸಕ್ತರಾಗಿರುವದಿಲ್ಲ. ಆದರೆ ಇವರು ವೈಭವ, ವಿಲಾಸಮಯ ಜೀವನದಲ್ಲಿ ಕಾಲವನ್ನು ದೂಡುತ್ತಾರೆ.

ಅಗ್ನಿರಾಶಿಯ ಯಾವದೇ ಸ್ಥಾನದಲ್ಲಿದ್ದ ಶುಕ್ರನು ವಿಷಯವಾಸನೆಯಲ್ಲಿ ಕಡಿಮೆ ಪ್ರಮಾಣವನ್ನು ತೋರಿಸುತ್ತಾನೆ.

ಪಂಚಮಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ :— ರವಿಯು ಪಂಚಮಸ್ಥಾನದಲ್ಲಿರುವ ಸ್ತ್ರೀಯರು ಸನಾತನ ಹಾಗೂ ಸಾಂಸ್ಕೃತಿಕ ಜೀವನದಿಂದ ಕೂಡಿದವರಾಗಿರುತ್ತಾರೆ. ಇಂಥ ಕುಮಾರಿಯರು ಪ್ರೇಮ ಹಾಗೂ ಪ್ರಣಯಗಳ ಕಡೆಗೆ ಲಕ್ಷ್ಯವನ್ನು ಕೊಡುವದಿಲ್ಲ. ಹಾಗೂ ಹಿರಿಯರು ಕೊಟ್ಟಂತಹ ಮನೆಯಲ್ಲಿಯೇ ಆನಂದದಿಂದ ಕಾಲವನ್ನು ಕಳೆಯುತ್ತಾರೆ. ಶಾಲೆ ಕಾಲೇಜುಗಳಲ್ಲಿ ಸಹ ತಮ್ಮ ಸೌಂದರ್ಯವನ್ನು ಪ್ರದರ್ಶಿಸದೆ ಹಳೆಯ ಸಂಪ್ರದಾಯದ ಅಭಿಮಾನಿಗಳಾಗಿದ್ದು ಮಿತಭಾಷಿಗಳಾಗಿರುತ್ತಾರೆ. ಆದರೆ ಅದೇ ರವಿಯು ಶುಕ್ರನೊಡನೆ ಇದ್ದರೆ ಅವರ ಜೀವನವು ಕ್ಷಣಿಕ ವಿಲಾಸಮಯದಿಂದ ಕೂಡಿದ್ದು ಆಗಿರುತ್ತದೆ.

ಚಂದ್ರ :— ಚಂದ್ರನು ಪಂಚಮಸ್ಥಾನದಲ್ಲಿದ್ದ ಸ್ತ್ರೀಯರು ವಿಲಾಸಮಯ ಜೀವನದಲ್ಲಿ ಕಾಲವನ್ನು ಕಳೆಯುತ್ತಾರೆ ಆದರೆ ಅದೇ ಚಂದ್ರನು ಶುಕ್ರ ಇಲ್ಲವೆ ಮಂಗಳನೊಂದಿಗೆ ಇದ್ದರೆ ಆ ಸ್ತ್ರೀಯರ ಜೀವನವು ಅನೈತಿಕತೆಯಿಂದ ಕೂಡಿದುದು ಆಗಿರುತ್ತದೆ. ಜಲರಾಶಿಯ ಚಂದ್ರ—ಮಂಗಳ, ಇಲ್ಲವೆ ಚಂದ್ರ-ಶುಕ್ರರ ಯುತಿಯು ಪಂಚಮದಲ್ಲಿದ್ದರೆ ಅವರು ಚಂಚಲ ಮನಸ್ಸಿನವರಿರುತ್ತಾರೆ. ಮಿಥುನ ವೃಶ್ಚಿಕ ಈ ಯಾವದೇ ರಾಶಿಯ ಪಂಚಮಸ್ಥಾನದಲ್ಲಿದ್ದ ಚಂದ್ರನು ಸ್ತ್ರೀಯರ ನೈತಿಕ ಮಟ್ಟಕ್ಕೆ ಕಲಂಕವನ್ನು ತರುತ್ತಾನೆ. ಯಾವದೇ ರಾಶಿಯ ಚಂದ್ರನು ಶನಿ, ಮಂಗಳ, ರಾಹು, ಶುಕ್ರ ಯಾರೊಬ್ಬರೊಂದಿಗೆ ಪಂಚಮದಲ್ಲಿದ್ದರೆ ಆ ಸ್ತ್ರೀಯರು ವಿಷಯಲೋಲುಪರಾಗಿರುತ್ತಾರೆ. (ಮಾನಸಿಕ ದೌರ್ಬಲ್ಯತೆಯಿರುತ್ತದೆ.)

ಮಂಗಳ :— ಮೇಷ, ಸಿಂಹ, ವೃಶ್ಚಿಕ, ಮಕರ ಈ ರಾಶಿಗಳ ಪಂಚಮ ಸ್ಥಾನದಲ್ಲಿದ್ದ ಮಂಗಳನು ಸ್ತ್ರೀಯರ ವಿಷಯ

ವಾಸನೆಯನ್ನು ಹೆಚ್ಚಿಸುತ್ತಾನೆ. ಆದರೆ ದೃಢನಿಶ್ಚಯ, ಸ್ವಾಭಿಮಾನ, ಸಾಹಸ, ಪರಾಕ್ರಮ, ಉಚ್ಚಧ್ಯೇಯ ಮುಂತಾದ ಗುಣಗಳಿರುವದರಿಂದ ಆ ಸ್ತ್ರೀಯರ ನೈತಿಕ ಮಟ್ಟವು ಉಚ್ಚ ತರಗತಿಯದು ಆಗಿರುತ್ತದೆ, ಆದರೆ ಇಂಥ ಸ್ತ್ರೀಯರಿಗೆ ಅವರ ಪಾಲಕರು ತಮಗ ಅನುಗುಣವಾದ ವರನೊಂದಿಗೆ ವಿವಾಹವಾಗ ಬೇಕೆಂದು ಒತ್ತಾಯಪಡಿಸಬಾರದು. ಯಾಕೆಂದರೆ ಅವರು ದೃಢನಿಶ್ಚಯಿಗಳಾ ಗಿದ್ದು ಹಟವಾದಿಗಳಾಗಿರುತ್ತಾರೆ.

ಇತರ ಯಾವದೇ ರಾಶಿಯ ಮಂಗಳನು ಪಂಚಮಸ್ಥಾನದಲ್ಲಿ ಒಬ್ಬನೇ ಇದ್ದರೂ ಸ್ತ್ರೀಯರ ನೈತಿಕ ಮಟ್ಟವು ಉಚ್ಚ ರೀತಿಯಿಂದ ಕೂಡಿರುತ್ತದೆ. ಆದರೆ ಅದೇ ಮಂಗಳನು ಚಂದ್ರ, ಶುಕ್ರರಂತಹ ಗ್ರಹಗಳೊಂದಿಗೆ ಇದ್ದು, ಪಂಚಮ, ಸಪ್ತಮ ದ್ವಾದಶ ಈ ಯಾವದೇ ಸ್ಥಾನದಲ್ಲಿದ್ದರೂ ನೈತಿಕ ಮಟ್ಟವು ಅಧೋಗತಿಗೆ ಇಳಿಯುತ್ತದೆ. ಕರ್ಕ ಇಲ್ಲವೆ ವೃಶ್ಚಿಕ ರಾಶಿಯಲ್ಲಿ ಶುಕ್ರ-ಮಂಗಳ ಚಂದ್ರ-ಮಂಗಳ ಇವರ ಯುತಿಯು ಪಂಚಮ, ಸಪ್ತಮ, ದ್ವಾದಶ ಈ ಯಾವದೇ ಸ್ಥಾನದಲ್ಲಿದ್ದರೂ ವಿಷಯವಾಸನೆಯು ಅತಿರೇಕ-ವಿರುತ್ತದೆ. (ಜಲರಾಶಿಯ ಶುಕ್ರ-ಮಂಗಳರ ಯುತಿಯು ಯಾವದೇ ಸ್ಥಾನ ದಲ್ಲಿದ್ದರೂ ನೈತಿಕ ಮಟ್ಟವು ಅಧೋಗತಿಯ ಕಡೆಗೆ ಸಾಗುತ್ತದೆ).

ಮಂಗಳ-ಶನಿ, ಮಂಗಳ ಗುರು, ಈ ಯುತಿಗಳು ಪ್ರೇಮ ಹಾಗೂ ಪ್ರಣಯಗಳಲ್ಲಿ ಯಾವದೇ ಪರಿಣಾಮವನ್ನುಂಟು ಮಾಡುವದಿಲ್ಲ. ಬುಧ-ಮಂಗಳರ ಯುತಿಯು ಪಂಚಮದಲ್ಲಿದ್ದರೆ ಆಟ ಹಾಗೂ ನೃತ್ಯದಲ್ಲಿ ಪ್ರಾವೀಣ್ಯತೆಯನ್ನು ತೋರಿಸುತ್ತಾರೆ. ಚಂದ್ರ-ಮಂಗಳರ ಯುತಿಯು ಪಂಚಮದಲ್ಲಿರುವ ಸ್ತ್ರೀಯರು ಮುಂದಾಗಾರರೂ, ವಿಲಾಸಿಗಳೂ ಇದ್ದು ಮೇಷಗಾರಿಕೆಯಲ್ಲಿ ಮಗ್ನರಾಗಿರುತ್ತಾರೆ. ಏಕಾಂತ್ಯ ಮಂಗಳನೊಬ್ಬನೇ ಪಂಚಮದಲ್ಲಿದ್ದರೆ ಇಂಥ ಸ್ತ್ರೀಯರು ಕ್ರೀಡಾಪಟುಗಳಾಗಿರುವದಲ್ಲದ (N C C ಇತ್ಯಾದಿ). ಪೋಲೀಸ, ಸೈನಿಕ, ನರ್ಸ, ಡಾಕ್ಟರ, ವಕೀಲ ಮುಂತಾದ ಹುದ್ದೆಗಳನ್ನು ಪಡೆಯುವದಲ್ಲದೆ, ಸ್ಕೂಟರ, ಮೋಟರ್ ಸ್ಕೂಟರ, ಮುಂತಾದ ಯಾಂತ್ರಿಕ ವಾಹನಗಳನ್ನು ನಡೆಸುವದರಲ್ಲಿ ಕುಶಲ-ರಾಗಿರುತ್ತಾರೆ.

ಬುಧ :— ಪಂಚಮದಲ್ಲಿ ಬುಧನು ರವಿಯೊಂದಿಗೆ ಇದ್ದ ಸ್ತ್ರೀಯರು ಬುದ್ಧಿವಂತರಿರುತ್ತಾರೆ. ಇಂಥ ಸ್ತ್ರೀಯರು ಪ್ರೇಮ-ಪ್ರಣಯಗಳ ಕಡೆಗೆ ಲಕ್ಷಕೊಡುವದಿಲ್ಲ ಮೇಲಾಗಿ ಇವರು ಗೃಹಕೃತ್ಯಗಳಲ್ಲಿ ಪಾರಂಗತರಿರುತ್ತಾರೆ. ಮಿಥುನ, ಕನ್ಯಾ, ಧನು, ಸಿಂಹ ಈ ಯಾವದೇ ರಾಶಿಯ ಬುಧನೊಬ್ಬನೇ ಪಂಚಮದಲ್ಲಿದ್ದ ಸ್ತ್ರೀಯರ ವಿಷಯವಾಸನೆಯು ಕಡಿಮೆ ಪ್ರಮಾಣದಲ್ಲಿರುತ್ತದೆ. ಕರ್ಕ, ವೃಶ್ಚಿಕ ಇಲ್ಲವೆ ಮೀನ ರಾಶಿಯ ಬುಧನು ಕಾಮವಾಸನೆಯನ್ನು ಹೆಚ್ಚಿಸುತ್ತನೆ: ಬುಧನು ಶುಕ್ರ ಇಲ್ಲವೆ ಚಂದ್ರನೊಂದಿಗೆ ಪಂಚಮದಲ್ಲಿದ್ದ ಸ್ತ್ರೀಯರು ಶೃಂಗಾರ, ಮತ್ತು ವಿಲಾಸಮಯ ಜೀವನದಲ್ಲಿ ಕಾಲವನ್ನು ಕಳೆಯುವರಲ್ಲದೆ ವಿಷಯಲಂಪಟರಾಗಿರುತ್ತಾರೆ. ಮೇಷ, ಕರ್ಕ, ವೃಶ್ಚಿಕ, ಮೀನ ಈ ಯಾವದೇ ರಾಶಿಯ ಬುಧ-ಶನಿಯರ ಯುತಿಯು ಪಂಚಮದಲ್ಲಿದ್ದರೆ ಇಂಥ ಸ್ತ್ರೀಯರ ನೈತಿಕ ಜೀವನಕ್ಕೆ ಆಘಾತವನ್ನುಂಟುಮಾಡುತ್ತಾನೆ

ಗುರು :— ಯಾವದೇ ರಾಶಿಯ ಗುರು ಪಂಚಮದಲ್ಲಿದ್ದರೂ ವಿದ್ಯೆ ಹಾಗೂ ಸಂತತಿಗೆ ಅನುಕೂಲನು. ಇಂಥ ಸ್ತ್ರೀಯರು ಗೌರವರ್ಣದವರೂ, ಕೋಮಲ ಹೃದಯದವರೂ, ಮತ್ತು ಶಾಂತ ಸ್ವಭಾವದವರಾಗಿರುತ್ತಾರೆ. ಗುರು-ಶುಕ್ರ, ಗುರು-ಚಂದ್ರ, ಗುರು-ರವಿ, ಗುರು-ಬುಧ, ಈ ಯುತಿಗಳು ಪಂಚಮದಲ್ಲಿರುವದು ಶುಭಕರವು. ಮಿಥುನ, ಸಿಂಹ, ಕನ್ಯಾ, ತುಲಾ, ಧನು, ಕುಂಭ ಈ ರಾಶಿಗಳ ಗುರು ಪಂಚಮದಲ್ಲಿದ್ದ ಸ್ತ್ರೀಯರ ವಿಷಯವಾಸನೆಯು ಬಹಳೇ ಕಡಿಮೆ ಪ್ರಮಾಣದಲ್ಲಿರುತ್ತದೆ. ಇಂಥ ಸ್ತ್ರೀಯರು ಸುಶಿಕ್ಷಿತರಾಗಿದ್ದು ಗೃಹಕೃತ್ಯಗಳಲ್ಲಿ ಪಾರಂಗತರಿರುತ್ತಾರೆ. ಮೇಷ, ಸಿಂಹ, ಧನು, ವೃಷಭ ಈ ಯಾವದೇ ರಾಶಿಯ ಪಂಚಮದಲ್ಲಿದ್ದ ಗುರು ಮಿತಭಾಷಿಗಳನ್ನಾಗಿಯೂ, ಗಂಭೀರವದನರನ್ನಾಗಿಯೂ, ಮಾಡುತ್ತಾನೆ. ವೃಶ್ಚಿಕ, ಮಕರ, ಮೀನ ಈ ಯಾವದೇ ರಾಶಿಯ ಗುರು ಪಂಚಮಸ್ಥಾನದಲ್ಲಿದ್ದರೆ ವಿಷಯಲೋಲುಪರನ್ನಾಗಿ ಮಾಡುತ್ತಾನೆ.

ಶುಕ್ರ :— ಪ್ರೇಮ, ಪ್ರಣಯ, ಇಂದ್ರಿಯ ಜನ್ಯಸುಖ, ಹಾಗೂ ವಿಷಯ ವಾಸನಾ ಇವುಗಳ ಕಾರಕನು ಶುಕ್ರನು. ಆದ್ದರಿಂದ ಶುಕ್ರನ ಬಲಾ-

ಬಲರ ಮೇಲಿಂದ ಸ್ತ್ರೀಯರ ರೀತಿ ನಡೆ-ನುಡಿಗಳನ್ನು ಕಂಡುಕೊಳ್ಳಬಹುದು. ಕರ್ಕ, ವೃಶ್ಚಿಕ ಮಕರ, ಮೀನ ಈ ರಾಶಿಗಳ ಶುಕ್ರನು ಭೋಗ-ವಿಲಾಸಗಳ ಸುಖವನ್ನು ಅತ್ಯಧಿಕವಾಗಿ ಕೊಡುತ್ತಾನೆ. ವೃಷಭ, ತುಲಾ, ಕುಂಭ ಈ ಯಾವದೇ ರಾಶಿಯ ಶುಕ್ರನು ಮರ್ಯಾದಿತ ಕಾಮವಾಸನೆಯನ್ನೇ ತೋರಿಸುತ್ತಾನೆ. ಆದರೆ ಕಲಾನೈಪುಣ್ಯತೆಯನ್ನು ಅಧಿಕವಾಗಿ ತೋರಿಸುತ್ತಾನೆ. ಮಿಥುನ, ಸಿಂಹ, ಕನ್ಯಾ, ಧನು ಈ ಯಾವದೇ ರಾಶಿಯ ಪಂಚಮ ಸ್ಥಾನದಲ್ಲಿದ್ದ ಶುಕ್ರನು ಅತ್ಯಲ್ಪ ಪ್ರಮಾಣದಲ್ಲಿ ಕಾಮವಾಸನೆಯನ್ನು ತೋರಿಸುತ್ತಾನೆ, ಆದರೆ ಮಿಥುನ ರಾಶಿಯ ಶುಕ್ರನಿದ್ದರೆ ಆ ಸ್ತ್ರೀಯರು ಬಹು ಪ್ರಮಾಣದಲ್ಲಿದ್ದರೂ, ನಿಯಮಿತವಾದ ಪ್ರೇಮ-ಪ್ರಣಯಗಳಲ್ಲಿ ತೊಡಗಿರುತ್ತಾರೆ. ಕರ್ಕ, ಹಾಗೂ ವೃಶ್ಚಿಕ ರಾಶಿಗಳ ಶುಕ್ರನು ಕಾಮವಾಸನೆಯ ಅತಿರೇಕ ತೋರಿಸುತ್ತಾನೆ. ಕುಂಭ ರಾಶಿಯ ಶುಕ್ರನು ವಾಸನಾರಹಿತ ಪ್ರೇಮದಿಂದಿರುವದನ್ನು ತೋರಿಸುತ್ತಾನೆ.

ಯಾವದೇ ರಾಶಿಯ ಶುಕ್ರನು ಪಂಚಮದಲ್ಲಿ ಶನಿ, ರಾಹು, ಮಂಗಳ, ಚಂದ್ರ ಈ ಯಾರೊಬ್ಬರೊಂದಿಗೆ ಇದ್ದರೆ ವಿಷಯವಾಸನೆಯ ಪ್ರಮಾಣವು ಬಹಳವಿರುತ್ತದೆ.

ಶನಿ :— ಯಾವದೇ ರಾಶಿಯ ಶನಿಯು ಪಂಚಮದಲ್ಲಿದ್ದರೂ ಪ್ರೇಮ ಪ್ರಣಯ ಗಳ ಅಭಾವವಿರುವದನ್ನು ತೋರಿಸುತ್ತಾನೆ. ಸರ್ವಸಾಧಾರಣವಾಗಿ ಇಂಥ ಸ್ತ್ರೀಯರು ಸನಾತನೀಯರು ಇರುತ್ತಾರೆ ( Religious and orthodox ) ಮಿಥುನ, ತುಲಾ ಕುಂಭ ಈ ಯಾವದೇ ರಾಶಿಯ ಶನಿಯು ಪಂಚಮದಲ್ಲಿದ್ದರೆ ಸ್ತ್ರೀಯರು ಸಂಸಾರದಕ್ಷರೂ, ಕುಶಾಗ್ರಬುದ್ಧಿಯವರೂ ಇದ್ದು, ಹಳೆಯ ಸಂಪ್ರದಾಯಕ್ಕೆ ಅಂಟಿಕೊಂಡಿರುತ್ತಾರೆ. ಜಲರಾಶಿಯ ಶನಿಯು ಪಂಚಮದಲ್ಲಿದ್ದರೆ ಕಾಮವಾಸನೆಯ ಪ್ರಮಾಣವು ತುಸು ಅಧಿಕವಾಗಿರುತ್ತದೆ. ಯಾವದೇ ರಾಶಿಯ ಶನಿಯು ಚಂದ್ರ, ಮಂಗಳ, ಶುಕ್ರ ಇಲ್ಲವೆ ರಾಹು ಇವರೊಂದಿಗೆ ಪಂಚಮದಲ್ಲಿದ್ದರೆ ನೈತಿಕ ಸ್ಥಿತಿಗೆ ಆಘಾತವುಂಟಾಗುತ್ತದೆ.

ರಾಹು :— ಸ್ತ್ರೀಯರ ಜನ್ಮ ಕುಂಡಲಿಯ ಪಂಚಮ ಸ್ಥಾನದಲ್ಲಿ ರಾಹು ಇರುವದು ಸಂತತಿ ಹಾಗು ಗರ್ಭಧಾರಣಕ್ಕೆ ಅಪಾಯಕಾರಕನು.

ಆದರೆ ಪ್ರೇಮ-ಪ್ರಣಯಗಳ ವಿಷಯದಲ್ಲಿ ರಾಹು ಅಪಾಯಕಾರಕನಾಗ-ಲಾರನು. ಪಂಚಮ ಸ್ಥಾನದಲ್ಲಿ ರಾಹು ಇದ್ದರೆ ಸ್ವಚ್ಛತೆ, ಅಚ್ಚುಕಟ್ಟುತನ, ಶೃಂಗಾರ ಮುಂತಾದ ಐಷಾರಾಮದ ಜೀವನದಲ್ಲಿ ಕಾಲವನ್ನು ಕಳೆಯುತ್ತಾರೆ. ವೃಷಭ, ಮಿಥುನ, ಕನ್ಯಾ, ತುಲಾ, ಮೀನ ಈ ಯಾವದೇ ರಾಶಿಯ ರಾಹು ಪಂಚಮದಲ್ಲಿದ್ದ ಸ್ತ್ರೀಯರು ಮೈ-ಕೈಗಳನ್ನು ಸ್ವಚ್ಛವಾಗಿರಿಸುವದರಲ್ಲಿಯೂ ಬಗೆಬಗೆಯ ಬಟ್ಟೆಗಳನ್ನು ಧರಿಸುವದರಲ್ಲಿಯೂ, ವಸ್ತ್ರ ಒಡವೆ ಮುಂತಾದ ಅಲಂಕಾರಗಳನ್ನು ತೊಡುವದರಲ್ಲಿಯೂ ಕಾಲಹರಣ ಮಾಡುತ್ತಾರೆ. ಮೇಷ ಸಿಂಹ, ವೃಶ್ಚಿಕ, ಧನು, ಮಕರ ಈ ಯಾವದೇ ರಾಶಿಯ ರಾಹು-ಮಂಗಳರ ಯುತಿಯು ಪಂಚಮದಲ್ಲಿದ್ದ ಸ್ತ್ರೀಯರು ಕ್ರೀಡಾಪಟುಗಳಲ್ಲದೆ, ವಾಕ್ಪಟುಗಳು, ಉತ್ಕೃಷ್ಟ ಅಭಿನಯಕಾರರೂ ಮತ್ತು ಸಮಾಜ ಧುರೀಣರೂ ಇರುತ್ತಾರೆ ಆದರೆ ಪ್ರೇಮ-ಪ್ರಣಯಗಳಲ್ಲಿ ಆಸಕ್ತರಿರುವದಿಲ್ಲ. ಮಿಥುನ, ಇಲ್ಲವೆ ಕನ್ಯಾ ರಾಶಿಯ ಬುಧ-ರಾಹುವಿನ ಯುತಿಯು ಪಂಚಮದಲ್ಲಿದ್ದ ಸ್ತ್ರೀಯರು ವ್ಯವಹಾರ ಕುಶಲರಾಗಿರುತ್ತಾರೆ. ಶುಕ್ರ, ಚಂದ್ರ, ಶನಿ ಇವರಲ್ಲಿ ಯಾರೊಬ್ಬರೊಂದಿಗೆ, ಪಂಚಮದಲ್ಲಿದ್ದ ರಾಹು ವಿಷಯವಾಸನೆಯ ಅತಿರೇಕ ವನ್ನು ತೋರಿಸುತ್ತಾನೆ.

ಕೇತು :— ಪಂಚಮ ಸ್ಥಾನದಲ್ಲಿ ಕೇತು ಇರುವದು ಮರ್ಯಾದಿತ ವಿಷಯವಾಸನೆಯನ್ನು ತೋರಿಸುತ್ತದೆ ಗುರು, ಇಲ್ಲವೆ ಶನಿಯೊಂದಿಗೆ ಕೇತು ಪಂಚಮದಲ್ಲಿದ್ದರೆ ಅಂಥ ಸ್ತ್ರೀಯರು ವಿಷಯವಾಸನೆಯಲ್ಲಿ ಆಸಕ್ತ ರಾಗಿರದೆ ಅದನ್ನ ಕುಮಾರಿಯರಾಗಿ ಉಳಿಯುವ ಸಂಭವವಿರುತ್ತದೆ. ಯಾವದೇ ರಾಶಿಯ ಕೇತು ಪಂಚಮದಲ್ಲಿರುವದು ಪ್ರೇಮ-ಪ್ರಣಯಗಳಿಗೆ ಪ್ರತಿಕೂಲವು

## ಭಾವೇಶನ ಫಲ

(೧) ಪಂಚಮೇಶನು ಲಗ್ನದಲ್ಲಿದ್ದರೆ, ವಿದ್ಯೆ ಹಾಗೂ ಸಂತಾನಕ್ಕೆ ಅನುಕೂಲವು. (೨) ಪಂಚಮೇಶನು ಧನಸ್ಥಾನದಲ್ಲಿದ್ದರೆ, ಸಾಂಪತ್ತಿಕ ಸ್ಥಿತಿಯು ಉತ್ತಮವಿರುತ್ತದೆ. (೩) ಪಂಚಮೇಶನು ತೃತೀಯದಲ್ಲಿದ್ದರೆ

ಸಂತತಿಗೆ ಅನುಕೂಲವು ಆದರೆ ವಿದ್ಯಾಭ್ಯಾಸಕ್ಕೆ ಪ್ರತಿಕೂಲವು. (೪) ಪಂಚಮೇಶನು ಪಾಪಗ್ರಹವಿದ್ದು ಚತುರ್ಥದಲ್ಲಿದ್ದರೆ, ತಾಯಿ-ಮಕ್ಕಳಲ್ಲಿ ಭಿನ್ನಾಭಿಪ್ರಾಯವಿರುತ್ತದೆ. ಆದರೆ ಪಂಚಮೇಶನು ಶುಭಗ್ರಹವಿದ್ದು ಚತುರ್ಥದಲ್ಲಿದ್ದರೆ ಮಾತೃ-ಸೌಖ್ಯವು ಸಿಗುತ್ತದೆ. (೫) ಪಂಚಮೇಶನು ಪಂಚಮದಲ್ಲಿದ್ದರೆ ವಿದ್ಯೆ ಹಾಗೂ ಸಂತತಿಗೆ ಅನುಕೂಲನು. (೬) ಪಂಚಮೇಶನು ಷಷ್ಠದಲ್ಲಿದ್ದರೆ ಸಂತತಿಗೆ ಅಪಾಯಕಾರಕನು. ಪಂಚಮೇಶನು ಶುಕ್ರ, ಇಲ್ಲವೆ ಚಂದ್ರರಿದ್ದು ಷಷ್ಠದಲ್ಲಿದ್ದರೆ, ಇಂಥ ಸ್ತ್ರೀಯರಿಗೆ ಮಾಸಿಕ ದೋಷವು ಇರುತ್ತದೆ. (೭) ಪಂಚಮೇಶನು ಸಪ್ತಮದಲ್ಲಿದ್ದರೆ ವಿವಾಹವು ಬೇಗ ಆಗುತ್ತದೆ. ಇವರು (ವಿಷಯಾಸಕ್ತರಿರುತ್ತಾರೆ.) ಪಂಚಮೇಶನು ಶುಕ್ರ ಇಲ್ಲವೆ ಚಂದ್ರರಿದ್ದು ಸಪ್ತಮದಲ್ಲಿದ್ದರೆ. ಪ್ರೇಮ-ವಿವಾಹವನ್ನು ಮಾಡಿಕೊಳ್ಳುತ್ತಾರೆ. (೮) ಪಂಚಮೇಶನು ಅಷ್ಟಮದಲ್ಲಿದ್ದರೆ, ವಿದ್ಯೆ ಹಾಗೂ ಸಂತತಿಗೆ ಪ್ರತಿಕೂಲನು. ಪಂಚಮೇಶನು ಗುರು ಇಲ್ಲವೆ ಶುಕ್ರರಿದ್ದು ಅಷ್ಟಮದಲ್ಲಿದ್ದರೆ, ಅನಪತ್ಯದೋಷವನ್ನು ತೋರಿಸುತ್ತಾನೆ. ಪಂಚಮೇಶನು ಶುಭಗ್ರಹವಿದ್ದು ಅಷ್ಟಮದಲ್ಲಿದ್ದರೆ (ನಿರ್ಬಲ) ಹೊಟ್ಟೆನೋವು ಹಾಗೂ ಅಪಚನೆಯ ವ್ಯಾಧಿಗಳನ್ನು ತೋರಿಸುತ್ತಾನೆ. (೯) ಪಂಚಮೇಶನು ಭಾಗ್ಯದಲ್ಲಿರುವದು ವಿದ್ಯೆ ಹಾಗೂ ಸಂತತಿಗೆ ಲಾಭದಾಯಕವು. ಹಾಗೂ ಇಂಥ ಸ್ತ್ರೀಯರ ವಿವಾಹವು ಬಹುಬೇಗ ಆಗುತ್ತದೆ. ಮತ್ತು ವಿದ್ಯೆಗೋಸ್ಕರ ದೂರದ ಪ್ರವಾಸವನ್ನು ತೋರಿಸುತ್ತಾನೆ. ಇಂಥ ಸ್ತ್ರೀಯರಿಗೆ ತೀರ್ಥಯಾತ್ರಾ, ಸಂದರ್ಶನದ ಯೋಗವಿರುತ್ತದೆ (೧೦) ಪಂಚಮೇಶನು ದಶಮದಲ್ಲಿದ್ದರೆ, ಆ ಸ್ತ್ರೀಯು ದೊಡ್ಡ ಅಧಿಕಾರಿಯ ಪತ್ನಿ ಇಲ್ಲವೆ ಮಾತೆಯಿರುತ್ತಾಳೆ ಇಂಥ ಸ್ತ್ರೀಯರ ಸಾಂಪತ್ತಿಕ ಸ್ಥಿತಿಯು ಚನ್ನಾಗಿರುತ್ತದೆ. (೧೧) ಪಂಚಮೇಶನು ಲಾಭದಲ್ಲಿದ್ದರೆ, ವಿದ್ಯೆ ಹಾಗೂ ಸಂತತಿಗೆ ಅನುಕೂಲವು. (೧೨) ಪಂಚಮೇಶನು ವ್ಯಯದಲ್ಲಿದ್ದರೆ ವಿದ್ಯೆ ಹಾಗೂ ಸಂತತಿಗೆ ಮಾರಕನು.



೬

# ಷಷ್ಠಸ್ಥಾನ ಅಥವಾ ರಿಪುಸ್ಥಾನ

ರಿಪುಸ್ಥಾನ ಅಥವಾ ಕುಂಡಲಿಯ ಷಷ್ಠಸ್ಥಾನದಿಂದ ; ಶಾರೀರಿಕ ರೋಗಗಳು, ದೇಹದ-ಆರೋಗ್ಯ, ಮಾತುಲ ಪಕ್ಷದ ಸಹಾಯ, ಅತ್ತೆ ಮಾವಂದಿರ ಸೌಖ್ಯ, ಆಳುಹೋಳುಗಳ ಸೌಖ್ಯ, ಅಗ್ನಿಭಯ, ಚೋರಭಯ, ಶತ್ರುಭಯ, ದುರ್ಮರಣ, ಅನೇಕ ಬಗೆಯ ವಿಪತ್ತು, ತುರಂಗವಾಸ, ಸಾರ್ವಜನಿಕ ಚಟುವಟಿಕೆ ಮುಂತಾದ ಸಂಗತಿಗಳನ್ನು ಹೇಗೆ ಪರಿಶೀಲಿಸಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ

ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ಯಾವದೇ ರಾಶಿಯು ಷಷ್ಠ-ಸ್ಥಾನದಲ್ಲಿದ್ದು ; ರವಿ ಇಲ್ಲವೆ ಮಂಗಳನು ಅಲ್ಲಿ ಇದ್ದರೆ, ಇಂಥ ಸ್ತ್ರೀಯರು ಸಾಹಸಿಗಳೂ, ಧೈರ್ಯಶಾಲಿಗಳೂ, ಅಭಿಮಾನಿಗಳೂ, ಹಟವಾದಿಗಳೂ ಮತ್ತು ಶೀಘ್ರಕೋಪಿಗಳಿದ್ದು ಸ್ವಾವಲಂಬನದಿಂದ ಧನಾರ್ಜನೆಯನ್ನು ಮಾಡುತ್ತಾರೆ. ಹಾಗೂ ಎಂತಹ ಶತ್ರುಗಳನ್ನಾದರೂ ಎದುರಿಸಬಲ್ಲರು.

ಕರ್ಕ, ಕನ್ಯಾ, ಕುಂಭ, ವೃಷಭ, ಮೀನ, ತುಲಾ, ಈ ಯಾವದೇ ರಾಶಿಯ ಮಂಗಳನು ಷಷ್ಠದಲ್ಲಿದ್ದರೆ, ಆ ಸ್ತ್ರೀಯರಿಗೆ ಅಗ್ನಿಭಯವಿರುತ್ತದೆ.

ನೀಚ, ಅಸ್ತಂಗತ, ಶತ್ರುಕ್ಷೇತ್ರೀ, ಇಲ್ಲವೆ ನಿರ್ಬಲನಾದ ಚಂದ್ರನು ಷಷ್ಠದಲ್ಲಿದ್ದರೆ ಇಂಥ ಸ್ತ್ರೀಯರಿಗೆ ಚೋರಭಯ ವಿರುತ್ತದೆ.

ಷಷ್ಠಸ್ಥಾನದಲ್ಲಿ ಜಲರಾಶಿಯಿದ್ದು, ಷಷ್ಠೇಶನು ಸ್ವಗೃಹದಲ್ಲಿದ್ದು, ಶುಭಗ್ರಹಗಳಿಂದ ದೃಷ್ಟಿಸಲ್ಪಟ್ಟ ಷಷ್ಠಸ್ಥಾನವಿದ್ದ ಸ್ತ್ರೀಯರು ಹಾಲು, ಮೊಸರು, ತುಪ್ಪ, ಬೆಣ್ಣೆ, (ಡೇರಿ) ಗಳನ್ನು ಮಾರಿಯಾಗಲೀ ಇಲ್ಲವೆ ಉಪಹಾರಗೃಹ-ಖಾನಾವಳಿಗಳಲ್ಲಿ ದುಡಿದಾಗಲಿ ಉಪಜೀವನ ಸಾಗಿಸುವರು

ಬಲಾಢ್ಯ ರಾಶಿಯ ಶುಕ್ರ ಇಲ್ಲವೆ ಚಂದ್ರನು ಷಷ್ಠಸ್ಥಾನದಲ್ಲಿ ಇದ್ದರೆ ತವರುಮನೆಯ ಸಾಂಪತ್ತಿಕ ಸ್ಥಿತಿಯು ಉತ್ತಮವಿರುವದಲ್ಲದೆ, ಆ ಸ್ತ್ರೀಯರು ತಾಯಿಯ ಬಳಗದವರಿಂದ ಸಹಾಯವನ್ನು ಪಡೆಯುತ್ತಾರೆ.

## ಕೆಲವಿಶಿಷ್ಟ ರೋಗಗಳ ಯೋಗಗಳು

(ಅ) ಕ್ಷಯ :— (೧) ಸಿಂಹ ಅಥವಾ ಮೀನ ರಾಶಿಯು, ಷಷ್ಠ, ಅಷ್ಟಮ ಇಲ್ಲವೆ ದ್ವಾದಶ ಸ್ಥಾನದಲ್ಲಿದ್ದು, ಶನಿ, ರವಿ, ಚಂದ್ರ ಇವರಲ್ಲಿ ಯಾರಾದರೂ ಅಲ್ಲಿದ್ದು, ಶುಕ್ರ, ಮಂಗಳರ ಅಶುಭಯೋಗವಿದ್ದರೆ; ಇಂಥ ಸ್ತ್ರೀಯರು ಕ್ಷಯರೋಗ ಪೀಡಿತರಾಗುತ್ತಾರೆ. (೨) ಶುಕ್ರ ಹಾಗೂ ಲಗ್ನೇಶರು ೬, ೮, ೧೨ ಈ ಯಾವದೇ ಸ್ಥಾನದಲ್ಲಿದ್ದು: ಕರ್ಕ, ಸಿಂಹ, ವೃಶ್ಚಿಕ, ಮೀನ ಈ ಯಾವದೇ ರಾಶಿಯು ಶನಿ ಇಲ್ಲವೆ ಮಂಗಳರ ಅಶುಭ-ದೃಷ್ಟಿಯೋಗವಿದ್ದರೆ, ಆ ಸ್ತ್ರೀಯರು ಕ್ಷಯರೋಗ ಪೀಡಿತರಾಗುತ್ತಾರೆ. (೩) ಷಷ್ಠದಲ್ಲಿ ಬುಧನು ಕುಜನ ಸಂಗಡ ಇದ್ದು, ಶುಕ್ರ ಮತ್ತು ಚಂದ್ರರಿಂದ ದೃಷ್ಟಿಸಲ್ಪಟ್ಟ ಷಷ್ಠಸ್ಥಾನವಿದ್ದರೆ, ಆ ಸ್ತ್ರೀಯರು ಕ್ಷಯರೋಗ ಪೀಡಿತರಾಗುತ್ತಾರೆ

(ಆ) ವಾತವಿಕಾರ :— (೧) ಶನಿಯು ಲಗ್ನೇಶನಿದ್ದು, ಮೀನ ಮೇಷ, ಕನ್ಯಾ ಈ ಯಾವದೊಂದು ರಾಶಿಯಲ್ಲಿದ್ದರೆ (೨) ವಾಯುರಾಶಿಯ ಗುರು ಲಗ್ನದಲ್ಲಿದ್ದರೆ (೩) ಗುರು ಲಗ್ನದಲ್ಲಿ, ಹಾಗೂ ಶನಿಯು ಸಪ್ತಮದಲ್ಲಿದ್ದರೆ (೪) ವಾಯು ರಾಶಿಗಳಲ್ಲಿ ಶನಿ, ಗುರು ಇವರು ಲಗ್ನ ಅಥವಾ ಸಪ್ತಮದಲ್ಲಿದ್ದರೆ (೫) ಲಗ್ನದಲ್ಲಿ ಶನಿ ಇದ್ದು ಪಂಚಮ ಇಲ್ಲವೆ ನವಮದಲ್ಲಿ ಮಂಗಳನಿದ್ದರೆ (೬) ಕರ್ಕ, ವೃಶ್ಚಿಕ, ಮೀನ ಈ ಯಾವದೇ ರಾಶಿಯ ಕ್ಷೀಣ ಚಂದ್ರನು ೧೨ನೆಯ ಸ್ಥಾನದಲ್ಲಿ ಇದ್ದರೆ

ಈ ಎಲ್ಲ ಯೋಗಗಳಲ್ಲಿದ್ದ ಸ್ತ್ರೀಯರು ವಾತವಿಕೃತಿಯಿಂದ ಕೂಡಿದವರು ಇರುತ್ತಾರೆ.

(ಇ) ರಕ್ತನ್ಯೂನತೆ := (೧) ಕ್ಷೀಣಚಂದ್ರನು ಷಷ್ಠ ಇಲ್ಲವೆ ಅಷ್ಟಮದಲ್ಲಿದ್ದು; ಶನಿ, ಮಂಗಳ, ರಾಹು ಈ ಯಾರೊಬ್ಬರಿಂದ ಈಕ್ಷಿಸಲ್ಪಟ್ಟರೆ (೨) ಷಷ್ಠದಲ್ಲಿ ಚಂದ್ರನೂ, ಅಷ್ಟಮದಲ್ಲಿ ರವಿಯು; ಇಲ್ಲವೆ ಷಷ್ಠ-ದಲ್ಲಿ ರವಿಯೂ, ಮತ್ತು ಅಷ್ಟಮದಲ್ಲಿ ಚಂದ್ರನೂ ಇದ್ದರೆ (೩) ಕನ್ಯಾ ಇಲ್ಲವೆ ಮೀನ ರಾಶಿಯ ಶನಿಯು, ಮಂಗಳ ಇಲ್ಲವೆ ರಾಹುವಿನಿಂದ ಯುಕ್ತ-ನಾಗಿ, ಷಷ್ಠ ಇಲ್ಲವೆ ದ್ವಾದಶ ಸ್ಥಾನದಲ್ಲಿದ್ದರೆ (೪) ರಾಹು-ಚಂದ್ರರ

ಯುತಿಯು ಷಷ್ಠ, ಅಷ್ಟಮ, ದ್ವಾದಶ ಈ ಯಾವದೇ ಸ್ಥಾನದಲ್ಲಿದ್ದರೆ (೫) ನಿರ್ಬಲನಾದ ಗುರುವು ಷಷ್ಠದಲ್ಲಿದ್ದು ಶನಿ–ಮಂಗಳರ ಅಶುಭ ಯೋಗ ವಿದ್ದರೆ,

ಮೇಲೆ ತೋರಿಸಿದ ಯೋಗಗಳು ಜನ್ಮ-ಕುಂಡಲಿಯಲ್ಲಿದ್ದರೆ ಆ ಸ್ತ್ರೀಯರು ರಕ್ತನ್ಯೂನತೆಯಿಂದ ಕೂಡಿದವರಿರುತ್ತಾರೆ.

(ಈ) ದಂತರೋಗ :— (೧) ಮೇಷ, ಸಿಂಹ, ವೃಶ್ಚಿಕ, ಮಕರ ಈ ಯಾವದೇ ರಾಶಿಯು ಲಗ್ನದಲ್ಲಿದ್ದು ; ಶನಿ–ಮಂಗಳ, ರವಿ-ಮಂಗಳ, ಶನಿ-ರವಿ, ರಾಹು–ರವಿ, ರಾಹು–ಮಂಗಳ ಈ ಯಾವದೊಂದು ಯುಗ್ಮವು ಇದ್ದರೆ (೨) ೧. ೬. ೮. ೧೨ ಈ ಯಾವದೊಂದು ಸ್ಥಾನದಲ್ಲಿ ಮೇಷ ರಾಶಿಯ ರವಿ. ಮಂಗಳರು ಅಥವಾ ರಾಹು, ಶನಿಯರು ಇದ್ದರೆ (೩) ವೃಷಭ ರಾಶಿಯು ಲಗ್ನದಲ್ಲಿದ್ದು ರವಿ–ರಾಹು, ರವಿ-ಮಂಗಳ, ಶನಿ–ರಾಹು ಈ ಯಾವದೊಂದು ಯುಗ್ಮವು ಅಲ್ಲಿದ್ದರೆ (೪) ವೃಶ್ಚಿಕ ರಾಶಿಯ ರಾಹು ಒಬ್ಬನೇ ಲಗ್ನದಲ್ಲಿದ್ದರೆ (೫) ಮೇಷ ಇಲ್ಲವೆ ವೃಶ್ಚಿಕ ರಾಶಿಯ ಮಂಗಳನು ಲಗ್ನ ಇಲ್ಲವೆ ದ್ವಿತೀಯದಲ್ಲಿದ್ದರೆ, ಆ ಸ್ತ್ರೀಯರ ಹಲ್ಲುಗಳು ಮುಂದೆ ಹಾಯ್ದಿರುತ್ತವೆ. (೬) ಯಾವದೇ ರಾಶಿಯ ಕೇತು ಲಗ್ನದಲ್ಲಿದ್ದರೆ ಅಂಥ ಸ್ತ್ರೀಯರ ಹಲ್ಲುಗಳು ಅಂಕುಡೊಂಕಾಗಿ ಬೆಳೆದಿರುತ್ತವೆ. (೭) ಮೇಷ, ಸಿಂಹ, ವೃಶ್ಚಿಕ, ಧನು ಈ ಯಾವದೇ ರಾಶಿಯು ಲಗ್ನದಲ್ಲಿದ್ದು, ಮಂಗಳ–ಕೇತು ಈ ಯುತಿಯು ಅಲ್ಲಿದ್ದರೆ; ಅಂಥ ಸ್ತ್ರೀಯರ ಹಲ್ಲುಗಳು ಮುಂದೆ ಹಾಯ್ದಿರುತ್ತವೆ.

ಈ ಯೋಗಗಳು ಜನ್ಮಕುಂಡಲಿಯಲ್ಲಿದ್ದ ಸ್ತ್ರೀಯರಿಗೆ ದಂತವ್ಯಾಧಿಯು ಬಾಧೆ ಬರುತ್ತದೆ.

(ಉ) ದೀರ್ಘಾವಧಿಯ ವ್ಯಾಧಿಗಳು :— (೧) ಯಾವದೇ ರಾಶಿಯ ಶನಿ–ಮಂಗಳರ ಯುತಿಯು ಷಷ್ಠ ಇಲ್ಲವೆ ಅಷ್ಟಮ ಸ್ಥಾನದಲ್ಲಿ ಇದ್ದರೆ ಅಥವಾ ಲಗ್ನ ಇಲ್ಲವೆ ಜಲರಾಶಿಯ ಶನಿಯು ಷಷ್ಠದಲ್ಲಿದ್ದರೆ (೨) ರವಿ-ಶನಿಯರ ಯುತಿಯು ಷಷ್ಠ ಇಲ್ಲವೆ ಅಷ್ಟಮದಲ್ಲಿದ್ದರೆ (೩) ಕ್ಷೀಣ ಚಂದ್ರ–ಮಂಗಳರ ಯುತಿಯು ಷಷ್ಠ ಇಲ್ಲವೆ ಅಷ್ಟಮದಲ್ಲಿದ್ದರೆ (೪) ಷಷ್ಠದಲ್ಲಿ ಶನಿಯೂ, ಅಷ್ಟಮದಲ್ಲಿ ಮಂಗಳನೂ ಇದ್ದರೆ

ಈ ಎಲ್ಲ ಯೋಗಗಳಲ್ಲಿ ಸ್ತ್ರೀಯರು ದೀರ್ಘಾವಧಿಯ ರೋಗಗಳಿಂದ ಕೂಡಿದವರಾಗಿರುತ್ತಾರೆ.

(೮೬) ದುರ್ಮರಣ ಯೋಗ :— (೧) ನೀಚ ಚಂದ್ರನು ಶನಿ ಇಲ್ಲವೆ ಮಂಗಳನಿಂದ ಯುಕ್ತನಾಗಿ ; ಷಷ್ಠ, ಅಷ್ಟಮ, ದ್ವಾದಶ ಈ ಯಾವದಾದರೊಂದು ಸ್ಥಾನದಲ್ಲಿ ಇದ್ದರೆ (೨) ಶನಿ–ಮಂಗಳ, ರವಿ-ಶನಿ ರಾಹು-ಚಂದ್ರ ; ಈ ಯುತಿಗಳು ಷಷ್ಠ, ಅಷ್ಟಮ, ದ್ವಾದಶ ಸ್ಥಾನದಲ್ಲಿದ್ದರೆ (೩) ಕ್ಷೀಣ ಚಂದ್ರನು ಷಷ್ಠ ಇಲ್ಲವೆ ಅಷ್ಟಮದಲ್ಲಿದ್ದು. ಅಶುಭ ಮಂಗಳನಿಂದ ಈಕ್ಷಿಸಲ್ಪಟ್ಟರೆ (೪) ಶನಿ-ಮಂಗಳ, ರವಿ-ಶನಿ, ಚಂದ್ರ-ಶನಿ, ಚಂದ್ರ ರಾಹು ಈ ಯಾರಿಬ್ಬರ ಸಮಸಪ್ತಕವು ಷಷ್ಠ, ದ್ವಾದಶದಲ್ಲಿದ್ದರೆ (೫) ಶನಿ-ಮಂಗಳರ ಷಡಾಷ್ಟಕವು ತೃತೀಯ, ಅಷ್ಟಮದಲ್ಲಿದ್ದರೆ, ಅಥವಾ ಷಷ್ಠೇಶ ದ್ವಾದಶದಲ್ಲಿದ್ದರೆ, ಅಥವಾ ಲಗ್ನ, ಅಷ್ಟಮದಲ್ಲಿದ್ದರೆ (೬) ನಿರ್ಬಲನಾದ ಷಷ್ಠೇಶನು ಅಷ್ಟಮದಲ್ಲಿದ್ದರೆ (೭) ಲಗ್ನೇಶ ಹಾಗೂ ಅಷ್ಟಮೇಶರು ನಿರ್ಬಲರಾಗಿ ಷಷ್ಠ ಇಲ್ಲವೆ ದ್ವಾದಶದಲ್ಲಿದ್ದರೆ.

## ಷಷ್ಠೇಶನ ಪರಿಣಾಮ

ಷಷ್ಠಸ್ಥಾನದಲ್ಲಿ ಸಿಂಹರಾಶಿ ಇದ್ದು, ಷಷ್ಠೇಶನು ಬಲವಂತನಾಗಿ ನವಮ ದಶಮ ದ್ವಿತೀಯ ಇವುಗಳಲ್ಲಿ ಯಾವದೇ ಸ್ಥಾನದಲ್ಲಿದ್ದರೂ ಸ್ತ್ರೀಯರು ಆರೋಗ್ಯವಂತರೂ ವಿದ್ಯಾಸಂಪನ್ನರೂ ಉಚ್ಚ ಅಧಿಕಾರಿಗಳೂ ಸಾಮಾಜಿಕ ಧುರೀಣರೂ ರಾಜಕೀಯ ಪಟುಗಳು ಇರುವದಲ್ಲದೇ ಪಿತೃ ಸೌಖ್ಯವನ್ನೂ ಚೆನ್ನಾಗಿ ಪಡೆಯುವರು.

ಚಂದ್ರನು ಷಷ್ಠೇಶನಿದ್ದು ಷಷ್ಠ, ಅಷ್ಟಮ, ದ್ವಾದಶ, ಸ್ಥಾನಗಳಲ್ಲಿದ್ದರೆ ಆ ಸ್ತ್ರೀಯರು ಅಶಕ್ತರೂ ಅಂಜುಬುರುಕರು ಇರುತ್ತಾರೆ. ಇವರಿಗೆ ಶತ್ರುಗಳ ಕಾಟವು ಹೆಚ್ಚಾಗಿ ಇರುತ್ತದೆ. ಅಲ್ಲದೆ ಇವರ ಪಚನಕ್ರಿಯೆಯು ತೀವ್ರ ಇರುವದಿಲ್ಲ. ಷಷ್ಠಸ್ಥಾನದಲ್ಲಿ ಕರ್ಕರಾಶಿ ಇದ್ದು, ಶನಿ-ಚಂದ್ರ, ಚಂದ್ರ-ಮಂಗಳರ ಯುತಿ ಇದ್ದ ಸ್ತ್ರೀಯರು ಕೋಲಟಕ್ಕರಿರುವರು. ಹಾಗೂ ಇಂಥ ಸ್ತ್ರೀಯರಿಗೆ ದೂರದ ಪ್ರವಾಸದಿಂದ ಕೇಡು ಉಂಟಾಗುವದು.

ಷಷ್ಠೇಶನು ಬುಧನಿದ್ದು ನೀಚ, ಅಸ್ತಂಗತ ಶತೃಕ್ಷೇತ್ರ ಪಾಪಗ್ರಹ-ಯುಕ್ತ ಪಾಪಗ್ರಹ ಮಧ್ಯನಿದ್ದ ಸ್ತ್ರೀಯರು ಮಾನಸಿಕ ರೋಗದಿಂದ ಬಳಲುತ್ತಾರೆ. ಷಷ್ಠೇಶನಾದ ಬುಧನು ನಿರ್ಬಲನಾಗಿದ್ದು ಷಷ್ಠದಲ್ಲಿ ನಿರ್ಬಲ ಚಂದ್ರನಿದ್ದ ಸ್ತ್ರೀಯರು ಮೂರ್ಛಾರೋಗ, [ ಮಲರೋಗ ಅಂದರೆ ನಾಲಿಗೆ ಕಡಿದುಕೊಳ್ಳುವದು ] ದಿಂದ ಬಳಲುವರು. ಇಂಥ ಸ್ತ್ರೀಯರ ಮೆದುಳಿನ ಮೇಲೆ ತೀವ್ರ ಪರಿಣಾಮವಾಗಿ ಹುಚ್ಚು ಹಿಡಿಯುವ ಸಂಭವವಿರುವದು. ಅಶುಭ ಶನಿಯ ದೃಷ್ಟಿಯು ಷಷ್ಠದ ಮೇಲೆ ಇದ್ದರೆ ಮೇಲೆ ಕಾಣಿಸಿದ ಸಂಗತಿಗಳು ಹೆಚ್ಚು ಸ್ಪಷ್ಟವಾಗಿ ತೋರುವವು.

ಷಷ್ಠೇಶನು ಮಂಗಳನಿದ್ದು ನಿರ್ಬಲನಾಗಿ ಅಷ್ಟಮ-ದ್ವಾದಶಗಳಲ್ಲಿದ್ದರೆ ಹುರುಕು, ಕಜ್ಜಿ ಮುಂತಾದ ಚರ್ಮ ರೋಗಗಳಿಂದ ಪೀಡಿತರಾಗುತ್ತಾರೆ. ಷಷ್ಠೇಶನಾದ ಮಂಗಳನು ಶುಕ್ರಯುಕ್ತನಾಗಿ ಷಷ್ಠದಲ್ಲಿದ್ದ ಸ್ತ್ರೀಯರಿಗೆ ಆರ್ತವ ದೋಷವಿರುತ್ತದೆ. ಹಾಗೂ ಗರ್ಭಾಶಯ ದೋಷವಿದ್ದು, ಗರ್ಭ ಪತನದ ಭಯವಿರುತ್ತದೆ. ವೃಶ್ಚಿಕ ರಾಶಿಯು ಷಷ್ಠದಲ್ಲಿದ್ದು ಚಂದ್ರ-ಮಂಗಳ, ಶುಕ್ರ-ಮಂಗಳ, ಶನಿ-ಚಂದ್ರ, ರಾಹು-ಶುಕ್ರರ ಯೋಗವಿದ್ದ ಸ್ತ್ರೀಯರ ಆರೋಗ್ಯ ಹಾಗೂ ನೈತಿಕ ಸ್ಥಿತಿಗೆ ಗಂಡಾಂತರವಿರುತ್ತದೆ. ವೃಶ್ಚಿಕ ರಾಶಿಯು ಗುರುವು ಷಷ್ಠದಲ್ಲಿದ್ದ ಸ್ತ್ರೀಯರು ರಕ್ತನ್ಯೂನತೆ ಹಾಗೂ ಕ್ಷಯರೋಗದಿಂದ ಬಳಲುವರು. (ನಿರ್ಬಲ ಮಂಗಳ).

ಷಷ್ಠೇಶನು ಗುರು ಇದ್ದು ಅಸ್ತಂಗತ ಶತೃಕ್ಷೇತ್ರ, ನೀಚ ಪಾಪಗ್ರಹ-ಯುಕ್ತನಿದ್ದ ಸ್ತ್ರೀಯರು ಅಶಕ್ತರಿರುತ್ತಾರೆ. ಅಪಚನ, ಇತ್ಯಾದಿ

ಷಷ್ಠೇಶನು ಶುಕ್ರನಿದ್ದು ಲಗ್ನ ಹಾಗೂ ಷಷ್ಠದಲ್ಲಿದ್ದ ಸ್ತ್ರೀಯರಿಗೆ ತವರುಮನೆಯ ಸೌಖ್ಯ ಚೆನ್ನಾಗಿದ್ದು ಆಪ್ತೇಷ್ಟರಲ್ಲಿಯೇ ವಿವಾಹವಾಗುವದು. ಇಂಥ ಸ್ತ್ರೀಯರ ಸಾಂಪತ್ತಿಕ ಸ್ಥಿತಿಯು ಕೂಡ ಚೆನ್ನಾಗಿರುತ್ತದೆ.

ಷಷ್ಠೇಶನು ಶನಿಯು ಇದ್ದು ಅಷ್ಟಮ ದ್ವಾದಶಗಳಲ್ಲಿದ್ದರೆ ಅಥವಾ ದ್ವಿತೀಯ ತೃತೀಯರಿದ್ದರೆ ಆರೋಗ್ಯಕ್ಕೆ ಅಶುಭದಾಯಕವು. ಇಂಥ ಸ್ತ್ರೀಯರಿಗೆ ಮಲೇರಿಯಾ, ಸಂಧಿವಾತ, ಮೂಲವ್ಯಾಧಿಯ ಭಯವಿರುತ್ತದೆ. ಷಷ್ಠೇಶನಾದ ಶನಿಯು ದ್ವಿತೀಯ, ತೃತೀಯ, ಅಷ್ಟಮ, ದ್ವಾದಶಗಳಲ್ಲಿ ಇದ್ದು

ರವಿ, ಮಂಗಳ, ಗುರು ಇವರೊಂದಿಗೆ ಅಶುಭಯೋಗ ಮಾಡುತ್ತಿದ್ದರೆ ಇಂಥ ಸ್ತ್ರೀಯರು ದಮ್ಮು, ಕೆಮ್ಮು, ಪುಪ್ಪುಸ ರೋಗಗಳಿಂದ ಬಳಲುವರು.

## ಷಷ್ಠ ಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ :— ಬಲಾಢ್ಯ ರವಿಯು ಷಷ್ಠದಲ್ಲಿದ್ದರೆ ಇಂಥ ಸ್ತ್ರೀಯರು ಆರೋಗ್ಯವಂತರಿದ್ದು ಸ್ವಪರಾಕ್ರಮದಿಂದ ಧನಾರ್ಜನೆಯನ್ನು ಮಾಡುತ್ತಾರೆ. ಸೋದರಮಾವನ ಸೌಖ್ಯವುಳ್ಳವರಿರುತ್ತಾರೆ. ನಿರ್ಬಲವಾದ ರವಿಯು ಷಷ್ಠದಲ್ಲಿ ಇದ್ದರೆ ಸ್ತ್ರೀಯು ಮಾತೃಸೌಖ್ಯವಿಹೀನರಿರುತ್ತಾರೆ. ಇಂಥ ಸ್ತ್ರೀಯರಿಗೆ ಅಗ್ನಿಭಯವಿರುತ್ತದೆ.

ಚಂದ್ರ :— ನಿರ್ಬಲನಾದ ಚಂದ್ರನು ಷಷ್ಠದಲ್ಲಿದ್ದ ಸ್ತ್ರೀಯರು ಮಾನಸಿಕ ದೌರ್ಬಲ್ಯದಿಂದ ಬಳಲುವರು ಅಲ್ಲದೆ ಅಂಜುಬುರುಕರಿದ್ದು ಶತ್ರುಪೀಡಿತರಿರುತ್ತಾರೆ. ಬಲವಾನ ಚಂದ್ರನು ಷಷ್ಠದಲ್ಲಿದ್ದ ಸ್ತ್ರೀಯರಿಗೆ ತವರುಮನೆಯ ಸೌಖ್ಯ ಚೆನ್ನಾಗಿ ಸಿಗುತ್ತದೆ.

ಮಂಗಳ :— ಬಲಾಢ್ಯ ಮಂಗಳನು ಷಷ್ಠದಲ್ಲಿದ್ದ ಸ್ತ್ರೀಯರು ಸಾಹಸಿಗಳೂ, ಪ್ರಯತ್ನವಾದಿಗಳೂ ಧೈರ್ಯಶಾಲಿಗಳು ಸ್ವಪ್ರೋಕ್ತಿಗಳೂ ಇದ್ದು ಸ್ವಾವಲಂಬಿಗಳಿರುತ್ತಾರೆ. ಇಂಥ ಸ್ತ್ರೀಯರು ರಾಜಕೀಯ ಪಟುಗಳೂ ಸಮಾಜ ಧುರೀಣರೂ ಇದ್ದು ನರ್ಸ, ಡಾಕ್ಟರ, ವಕೀಲ, ಸೈನ್ಯ, ಪೋಲೀಸ ಮುಂತಾದ ಕೆಲಸಗಳಲ್ಲಿ ಪ್ರವೀಣರಿರುತ್ತಾರೆ. ಹಾಗೂ ಇಂಥ ಸ್ತ್ರೀಯರ ಜಠರಾಗ್ನಿಯು ಪ್ರದೀಪ್ತವಾಗಿರುತ್ತದೆ.

ಬುಧ :— ನಿರ್ಬಲ ಬುಧನು ಷಷ್ಠದಲ್ಲಿದ್ದರೆ ಆರೋಗ್ಯಕ್ಕೆ ತೊಂದರೆ. ಮೇಷ, ವೃಶ್ಚಿಕ, ಮಕರ, ಕುಂಭ ಈ ರಾಶಿಗಳ ಬುಧನು ಷಷ್ಠದಲ್ಲಿದ್ದರೆ ಇಂಥ ಸ್ತ್ರೀಯರು ಕಲಹಪ್ರಿಯ, ಚಾಡಿಖೋರ ಮುಂತಾದ ದುರ್ಬುದ್ಧಿಗಳಿಂದ ಪೀಡಿತರಿರುತ್ತಾರೆ.

ಗುರು :— ನಿರ್ಬಲ ಗುರು ಷಷ್ಠದಲ್ಲಿದ್ದರೆ ಸ್ತ್ರೀಯರು ವಿದ್ಯೆ ಹಾಗೂ ಸಂತತಿಯ ಅಭಾವವಿದ್ದು ವಿಷಯವಾಸನಾ ಹೆಚ್ಚಾಗಿರುತ್ತದೆ.

ಶುಕ್ರ :— ಬಲಾಢ್ಯ ಶುಕ್ರನು ಷಷ್ಠದಲ್ಲಿದ್ದರೆ ತವರುಮನೆಯ ಸೌಖ್ಯವನ್ನು ಹೊಂದುವದು ಹಾಗೂ ಸಂಬಂಧಿಕರಲ್ಲಿಯೇ ಇಂಥ ಸ್ತ್ರೀಯರ ವಿವಾಹವಾಗುತ್ತದೆ.

ಶನಿ :— ಅಗ್ನಿ ಹಾಗೂ ಜಲರಾಶಿಗಳ ಶನಿಯು ಷಷ್ಠದಲ್ಲಿದ್ದರೆ ಆರೋಗ್ಯಕ್ಕೆ ತೊಂದರೆ ( ಮಕರ ರಾಶಿಯನ್ನು ಬಿಟ್ಟು ) ವಾಯು ಹಾಗೂ ಪೃಥ್ವಿರಾಶಿಗಳ ಶನಿಯು ಷಷ್ಠದಲ್ಲಿದ್ದರೆ ಇಂಥ ಸ್ತ್ರೀಯರ ಆರೋಗ್ಯ ಚೆನ್ನಾಗಿದ್ದು ಹೊಲಮನೆ. ತೋಟಪಟ್ಟಿಗಳಲ್ಲಿ ಆಸಕ್ತರಿದ್ದು ದೇವ-ಧರ್ಮ ಕಾರ್ಯಗಳಲ್ಲಿ ನಿಷ್ಠಾವಂತರಿರುತ್ತಾರೆ.

ರಾಹು :— ಸ್ತ್ರೀ ರಾಶಿಯ ರಾಹು ಷಷ್ಠದಲ್ಲಿದ್ದರೆ ದೀರ್ಘಾಯುಷಿಗಳಾಗುತ್ತಾರೆ, ಪುರುಷ ರಾಶಿಯ ರಾಹು ಷಷ್ಠದಲ್ಲಿದ್ದರೆ ಭಾಗ್ಯಹೀನ ಇದ್ದರೂ ಆರೋಗ್ಯವಂತರಿರುತ್ತಾರೆ. ಮಿಥುನ ಕನ್ಯಾ ರಾಶಿಗಳ ರಾಹು ಷಷ್ಠದಲ್ಲಿದ್ದರೆ ಆಕಸ್ಮಿಕ ಧನಲಾಭವಾಗುತ್ತದೆ.

ಕೇತು :— ಧನು ಹಾಗೂ ಮೀನ ರಾಶಿಗಳ ಹೊರತಾಗಿ ಉಳಿದ ಯಾವದೇ ರಾಶಿಗಳ ಕೇತು ಷಷ್ಠದಲ್ಲಿದ್ದರೆ ತವರುಮನೆಯ ಸೌಖ್ಯ ಸಿಗುವದಿಲ್ಲ.

### ಷಷ್ಠಸ್ಥಾನದಲ್ಲಿದ್ದ ಗ್ರಹಗಳ ಯುತಿಗಳ ಪರಿಣಾಮ

ಮೇಷ, ಸಿಂಹ, ಧನು, ವೃಶ್ಚಿಕ, ಮಕರ ಈ ಯಾವದೇ ರಾಶಿ ಷಷ್ಠದಲ್ಲಿದ್ದು ಅಲ್ಲಿ ರವಿ, ಮಂಗಳರ ಯುತಿಯು ಯೋಗವಿದ್ದರೆ (ಅಸ್ತನಿರದ) ಇಂಥ ಸ್ತ್ರೀಯರ ಆರೋಗ್ಯ ಉತ್ತಮವಿದ್ದು ಸ್ವಾವಲಂಬಿಗಳಾಗಿರುತ್ತಾರೆ.

ವೃಷಭ, ತುಲಾ, ಕರ್ಕ, ಮೀನ ಇವುಗಳಲ್ಲಿ ಯಾವದೇ ರಾಶಿಯು ಷಷ್ಠದಲ್ಲಿದ್ದು, ಚಂದ್ರ-ಶುಕ್ರರ ಅಥವಾ ಗುರು-ಚಂದ್ರ ಅಥವಾ ಗುರು-ಶುಕ್ರರ ಯುತಿಯು ಷಷ್ಠದಲ್ಲಿ ಆಗುತ್ತಿದ್ದರೆ ಇಂಥ ಸ್ತ್ರೀಯರ ಸಾಂಪತ್ತಿಕ ಸ್ಥಿತಿಯು ಉತ್ತಮವಿದ್ದು ತವರುಮನೆಯ ಸೌಖ್ಯವನ್ನು ಹೊಂದುತ್ತಾರೆ. (ಮಾತುಲ ಸೌಖ್ಯ)

ಶುಕ್ರ-ಮಂಗಳ, ಶನಿ-ಶುಕ್ರ, ರಾಹು-ಶುಕ್ರ, ಚಂದ್ರ-ರಾಹು, ಚಂದ್ರ-ಮಂಗಳರ ಯುತಿಯು ಷಷ್ಠದಲ್ಲಿದ್ದ ಸ್ತ್ರೀಯರಿಗೆ ಗರ್ಭಾಶಯ ದೋಷವಿದ್ದು ಗರ್ಭಪತನದ ದೋಷವಿರುತ್ತದೆ. ಇಂಥ ಸ್ತ್ರೀಯರ ನೈತಿಕ ಮಟ್ಟವು ಸಹ ಅಧೋಗತಿಗೆ ಇಳಿಯುತ್ತದೆ (ವೃಶ್ಚಿಕ ರಾಶಿಯು ಷಷ್ಠದಲ್ಲಿದ್ದು ಶುಕ್ರ-ಮಂಗಳ, ಚಂದ್ರ-ಮಂಗಳ, ಇವರ ಯೋಗವು ಷಷ್ಠದಲ್ಲಿ ಆಗುತ್ತಿದ್ದರೆ ಮೇಲ್ಕಾಣಿಸಿದ ಪರಿಣಾಮವು ಸ್ಪಷ್ಟವಾಗಿ ತೋರುತ್ತದೆ).

ಶನಿ-ಮಂಗಳ, ರವಿ-ಶನಿ, ರವಿ-ಕೇತು, ರಾಹು-ಚಂದ್ರ, ಚಂದ್ರ-ಶನಿಗಳ ಯುತಿಯು ಷಷ್ಠದಲ್ಲಿದ್ದ ಸ್ತ್ರೀಯರ ಜೀವನವು ವೈರಾಗ್ಯಯುಕ್ತವಾಗಿರುತ್ತದೆ. (ಅಭಾಗಿಗಳಾಗಿರುತ್ತಾರೆ).

## ಭಾವೇಶನ ಫಲ

(೧) ಷಷ್ಠೇಶನು ಲಗ್ನದಲ್ಲಿದ್ದರೆ ನಿರೋಗಿಗಳು. ಹಾಗೂ ಮನೆತನದ ಜವಾಬದಾರಿಯನ್ನು ಹೊರುವವರಾಗಿರುತ್ತಾರೆ. (ಮನೆಯ ಪೂರ್ಣ ಜವಾಬ್ದಾರಿ ಇವರ ಮೇಲೆಯೇ ಇರುತ್ತದೆ). ಷಷ್ಠಸ್ಥಾನಾಧಿಪರು ಚಂದ್ರ, ಶುಕ್ರ, ಬುಧ ಇದ್ದರೆ ಮೇಲೆ ಕಾಣಿಸಿದ ಪರಿಣಾಮವು ಸ್ಪಷ್ಟವಾಗಿ ಹಾಗೂ ಹೆಚ್ಚಾಗಿ ತೋರುತ್ತದೆ.

(೨) ಷಷ್ಠೇಶನು, ಧನಸ್ಥಾನದಲ್ಲಿದ್ದರೆ ಸ್ವಾರ್ಥಿಗಳು, ಕೃಪಣರು ಶ್ರೀಮಂತರು ಇದ್ದು ಅಶಕ್ತರಿರುತ್ತಾರೆ.

(೩) ಷಷ್ಠೇಶನು ತೃತೀಯದಲ್ಲಿದ್ದ ಸ್ತ್ರೀಯರು ಬಂಧು-ಬಳಗ ಸೌಖ್ಯ ವಿಹೀನರಿದ್ದು ಸಾಹಸಿಗಳಿರುತ್ತಾರೆ.

(೪) ಷಷ್ಠೇಶನು ಚತುರ್ಥದಲ್ಲಿದ್ದರೆ ಮಾತೃಸೌಖ್ಯದ ಅಭಾವವು ಇರುತ್ತದೆ.

(೫) ಷಷ್ಠೇಶನು ಪಂಚಮದಲ್ಲಿದ್ದ ಸ್ತ್ರೀಯರಿಗೆ ವಿದ್ಯೆ ಹಾಗೂ ಸಂತತಿಗಳ ಸೌಖ್ಯ ಕಡಿಮೆ.

(೬) ಷಷ್ಠೇಶನು ಷಷ್ಠದಲ್ಲಿದ್ದ ಸ್ತ್ರೀಯರು ಧನವಂತರು ನಿರೋಗಿಗಳೂ ಸಾಹಸಿಗಳೂ ಪರಾಜಿತ ಶತೃಗಳಿದ್ದು ಕೃಪಣರಾಗಿರುತ್ತಾರೆ.

(೭) ಷಷ್ಠೇಶನು ಶುಭಗ್ರಹನಿದ್ದು ಸಪ್ತಮದಲ್ಲಿದ್ದ ಸ್ತ್ರೀಯರ ವಿವಾಹವು ತೀವ್ರ ಹಾಗೂ ಅಪ್ರೇಕ್ಷರಲ್ಲಿಯೇ ಆಗುತ್ತದೆ.

(೮) ಷಷ್ಠೇಶನು ಅಷ್ಟಮದಲ್ಲಿದ್ದರೆ ಅಶಕ್ತರೂ ಅಲ್ಪಾಯುಗಳು ಇರುತ್ತಾರೆ. ಷಷ್ಠೇಶನು ಬಲಾಢ್ಯನಾಗಿ ಅಷ್ಟಮದಲ್ಲಿದ್ದರೆ ರೇಸ, ಸಟ್ಟಾ ಲಾಟರಿ, ಭೂಗತಧನ ಮುಂತಾದ ಆಕಸ್ಮಿಕ ಧನಲಾಭ ಹೊಂದುತ್ತಾರೆ.

(೯) ಷಷ್ಠೇಶನು ಭಾಗ್ಯದಲ್ಲಿದ್ದ ಸ್ತ್ರೀಯರು ಅವಿಚಾರಿಗಳು ಅವಿಧೇಯರು ಹಾಗೂ ಧರ್ಮಬಾಹ್ಯರು ಇರುತ್ತಾರೆ.

(೧೦) ಷಷ್ಠೇಶನು ದಶಮದಲ್ಲಿದ್ದರೆ ನೌಕರಿ ಮುಂತಾದ ಸ್ವಪರಾಕ್ರಮದಿಂದ ಧನಾರ್ಜನೆಯನು ಮಾಡುತ್ತಾರೆ.

(೧೧) ಷಷ್ಠೇಶನು ಲಾಭದಲ್ಲಿದ್ದರೆ ಸಂತತಿಗೆ ಮಾರಕಯೋಗವಾಗುತ್ತದೆ. ಹಾಗೂ ಚೋರಭಯುವಿರುತ್ತದೆ.

(೧೨) ಷಷ್ಠೇಶನು ಪಾಪಗ್ರಹನಿದ್ದು ಬಲಾಢ್ಯನಾಗಿ ವ್ಯಯಸ್ಥಾನದಲ್ಲಿದ್ದರೆ ಶುಭದಾಯಕವು, ಆದರೆ ಕೃಪಣರು.

**ವಿಶೇಷ ಸೂಚನೆ :—** ರೋಗ ಹಾಗೂ ಆರೋಗ್ಯದ ವಿಷಯವಾಗಿ ನಮ್ಮ " ಆರೋಗ್ಯ ಜ್ಯೋತಿಷ್ಯ " ಗ್ರಂಥದಲ್ಲಿ ವಿವರವಾಗಿ ವಿವೇಚಿಸಲಾಗಿದೆ.



# ೭

# ಸಪ್ತಮ ಸ್ಥಾನ

ಸಪ್ತಮಸ್ಥಾನ ಅಥವಾ ಕುಂಡಲಿಯ ಏಳನೆಯ ಸ್ಥಾನದಿಂದ ವಿವಾಹ, ಪತಿಪತ್ನಿಯರ ಸೌಖ್ಯ, ಸ್ವಭಾವ, ವರ್ಣ, ಕೌಟುಂಬಿಕ, ಸಾಂಪತ್ತಿಕ ಸ್ಥಿತಿ, ಪರಸ್ಪರರಲ್ಲಿ ಪ್ರೇಮ ವಿವಾಹದ ಕಾಲ, ಮುಂತಾದ ವಿಷಯಗಳನ್ನು ಹೇಳಲಿಕ್ಕೆ ಬರುತ್ತದೆ. ಪತಿಯ ಕುಂಡಲಿಯಿಂದ ಪತ್ನಿಯ ಬಗ್ಗೆಯೂ ಪತ್ನಿಯ ಕುಂಡಲಿಯಿಂದ ಪತಿಯ ಬಗ್ಗೆಯೂ ಹೇಳಲಿಕ್ಕೆ ಬರುತ್ತದೆ. ಇದಲ್ಲದೆ ಈ ಸ್ಥಾನದಿಂದ ಭಾಗೋದಯ ದಿವಾಣ, ಪಟ್ಟಿ, ವ್ಯಾಪಾರ ಹಾಗೂ ಲೇವಾದೇವಿ, ದೂರದ ಪ್ರವಾಸ, ಆಕಸ್ಮಿಕ ಧನಲಾಭ ಮುಂತಾದ ಸಂಗತಿಗಳನ್ನು ಹೇಗೆ ನೋಡಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ.

ವಿವಾಹ :— ಸ್ತ್ರೀಯರ ಜೀವನದಲ್ಲಿ ಮಹತ್ವದ ಘಟನೆಯೆಂದರೆ ವಿವಾಹವು. ಅವರ ಸುಖದುಃಖ, ಭಾಗ್ಯ, ದೌರ್ಭಾಗ್ಯ, ಎಲ್ಲವೂ ವಿವಾಹವನ್ನೇ ಅವಲಂಬಿಸಿರುವದು. ಕನ್ಯೆಯು ವಯಸ್ಸಿಗೆ ಬಂದೊಡನೆಯೇ ಅವಳಲ್ಲಿ ಮುಖ್ಯವಾಗಿ ಸ್ಥಾಯಿಯಾದ ವಿಚಾರವೆಂದರೆ—ತನಗೆ ತಕ್ಕ ಪತಿಯು ದೊರೆತಾನೋ ಇಲ್ಲವೋ ಎಂಬುದಾಗಿದೆ. ತನ್ನ ಭಾವೀಪತಿಯು ರೂಪವಂತನೂ, ಗುಣವಂತನೂ, ವಿದ್ಯಾಸಂಪನ್ನನೂ, ಯುವಕನೂ ಇರು-ವನೋ? ಇಲ್ಲವೋ? ಸಂಪತ್ತುಳ್ಳವನೋ? ಅಧಿಕಾರವುಳ್ಳವನೋ? ಇರುವನೋ. ಮದುವೆಯಾದ ಮೇಲೆ ತಮ್ಮ ಜೀವನ ಸುಸೂತ್ರ ಸಾಗುವದೋ ಎಂಬ ಬಗ್ಗೆ ಪ್ರತಿಯೊಬ್ಬ ಅವಿವಾಹಿತ ತರುಣಿಯು ಜಿಜ್ಞಾಸೆಯಿರುತ್ತದೆ, ಅನೇಕ ಸಂಪನ್ನ ಮನೆತನದ ಕನ್ಯೆಯರು ರೂಪವಂತ, ಸಿರಿವಂತ ಹಾಗೂ ಅಧಿಕಾರಿ ಪತಿಯನ್ನು ಪಡೆದಾಗ್ಯೂ ಪತಿಯ ಮನೆಯಲ್ಲಿ ದುಃಖದಿಂದ ಕಾಲ ಕಳೆಯುತ್ತಾರೆ. ಇಂಥ ಅನೇಕ ಉದಾಹರಣೆಗಳನ್ನು ನಾವು ಪ್ರತಿನಿತ್ಯವೂ ಕಾಣುತ್ತೇವೆ. ಆದುದರಿಂದ ಕೇವಲ ಪತಿಯ (ವರನ) ಬಾಹ್ಯ ಸೌಂದರ್ಯ, ಸಾಂಪತ್ತಿಕ ಸ್ಥಿತಿಯ ಮೇಲೆಯೇ ವಧುವಿನ ಜೀವನ ಸುಗಮವಾಗಿ ಸಾಗುವದೆಂದು ಹೇಳಲು ಬರುವಂತಿಲ್ಲ. ಅವರೀರ್ವರಲ್ಲಿ ನೈಸರ್ಗಿಕವಾಗಿ ಬಂದ

ಮಿತ್ರತ್ವ (ಸೌಖ್ಯ) ಇದೆಯೋ? ಇಲ್ಲವೋ? ಎಂಬುದನ್ನು ಕುಂಡಲಿಯ ಮುಖಾಂತರ ತಿಳಿಯಬಹುದು. (ಈ ಎಲ್ಲ ವಿಷಯಗಳನು ವಿವರವಾಗಿ ನಮ್ಮ 'ವಧೂವರರ ಜ್ಯೋತಿಷ್ಯ ಗ್ರಂಥ' ದಲ್ಲಿ ಬರೆಯಲಾಗಿದೆ).

ವೈವಾಹಿಕ ವಿಷಯದ ಬಗ್ಗೆ ನೋಡಬೇಕಾದರೆ ಸಪ್ತಮಸ್ಥಾನವನ್ನು ವಿಶೇಷವಾಗಿ ಪರಿಶೀಲಿಸಬೆ ಕೆಂಬುದೇನೋ ನಿಜ. ಆದರೆ ಸಪ್ತಮಸ್ಥಾನ ಹಾಗೂ ಸಪ್ತಮಾಧೀಶನ ಬಲಾಬಲಕ್ಕಾಗಿ ಲಗ್ನವನ್ನು ವಿಶೇಷವಾಗಿ ಪರಿಶೀಲಿಸಬೇಕಾಗುತ್ತದೆ. ಏಕೆದರೆ ಲಗ್ನದಿಂದ ಆರೋಗ್ಯ, ಮನಸ್ಸು, ವಾಸನಾ, ಮುಂತಾದ ಸಂಗತಿಗಳು ತಿಳಿಯುತ್ತವೆ.

## ಆಜನ್ಮ ಕುಮಾರಿಯೋಗ

ನಮ್ಮ ಸಮಾಜದದ ಸ್ತ್ರೀಯರು ಆಜನ್ಮ ಕುಮಾರಿಯವರಿರುವದು ಕಡಿಮೆ. ವಿವಾಹವಿದು ಅತ್ಯಂತ ಅವಶ್ಯಕ ಧಾರ್ಮಿಕ ಸಂಸ್ಕಾರ ಇರುತ್ತದೆ. ಸ್ತ್ರೀಯರು ಕುರೂಪಿಯರಿರಲಿ, ಮೂಕರಿರಲಿ ಏನೇ ಇದ್ದರೂ ಯೋಗ್ಯ ವಯಸ್ಸಿಗೆ ವಿವಾಹ ಮಾಡುವದೇ ಪಾಲಕರ ಕರ್ತವ್ಯವೆಂದು ಭಾವಿಸಲಾಗಿದೆ ಕುಮಾರಿಯಾಗಿ ಉಳಿಯುವ ಇಚ್ಛೆ ಇರಲಿ ಅಥವಾ ಇರದೇ ಇರಲಿ ಕುಮಾರಿಯರಿಗೆ ತಂದೆ ತಾಯಿಗಳು ಕೊಟ್ಟ ಮನೆಗೆ ಹೋಗಲೇ ಬೇಕಾಗುವದು.

ಇತ್ತೀಚಿಗೆ ಸುಶಿಕ್ಷಿತ ಸ್ತ್ರೀಯರು ಅವಿವಾಹಿತರಾಗಿ ಇರುವದನ್ನು ನಾವು ಕಾಣುತ್ತೇವೆ (೨೮-೩೨ ವಯಸ್ಸಿನ ಕುಮಾರಿಯರನ್ನು ಕಾಣುತ್ತೇವೆ). ಪುರುಷರ ಕುಂಡಲಿಗಳಲ್ಲಿ ಹೇಗೆ ಆಜನ್ಮ ಬ್ರಹ್ಮಚಾರಿಯಾಗಿ ಉಳಿಯುವ ಯೋಗಗಳಿರುತ್ತವೆಯೋ ಹಾಗೆಯೇ ಸ್ತ್ರೀಯರ ಕುಂಡಲಿಗಳಲ್ಲಿ ಕೂಡ ಆಜನ್ಮ ಕುಮಾರಿಯಾಗಿರುವ ಯೋಗಗಳಿರುತ್ತವೆ.

ವಿವಾಹವು ಆಗುವದೋ ಇಲ್ಲವೋ ಎಂಬುದು ಕೇವಲ ಒಂದೇ ಗ್ರಹದ ಸ್ಥಾನದ ಮೇಲಿಂದ ಹೇಳಲು ಬರುವದಿಲ್ಲ. ಪುರುಷರ ಕುಂಡಲಿಗಳಲ್ಲಿ ಶುಕ್ರ, ಚಂದ್ರ ಹಾಗೂ ಸಪ್ತಮಸ್ಥಾನಗಳ ಬಲಾಬಲವನ್ನು ಹೇಗೆ ನೋಡುವರೋ ಹಾಗೆಯೇ ಸ್ತ್ರೀಯರ ಕುಂಡಲಿಗಳಲ್ಲಿ ರವಿ ಮಂಗಳ ಹಾಗೂ

ಪಂಚಮಸ್ಥಾನಗಳ ಬಲಾಬಲವನ್ನು ನೋಡಬೇಕಾಗುತ್ತದೆ. (ಶುಕ್ರ, ಚಂದ್ರರೊಂದಿಗೆ). ಪುರುಷರ ವಿವಾಹದ ಬಗ್ಗೆ ಹೇಳಬೇಕಾದರೆ ಚಂದ್ರ-ಶುಕ್ರ ಹಾಗೂ ಸಪ್ತಮಸ್ಥಾನಗಳನ್ನು ವಿಶೇಷವಾಗಿ ಪರಿಶೀಲಿಸಿ ಪಾಪಗ್ರಹಗಳ ಅಶುಭ ಯೋಗವನ್ನು ನೋಡುತ್ತೇವೆ. ಬಳಿಕ ಕೆಳಗಿನ ವಿಷಯಗಳನ್ನು ನೋಡುತ್ತೇವೆ.

(೧) ವಿವಾಹವಾಗುವ ಇಚ್ಛೆ ಇದೆಯೋ ಇಲ್ಲವೋ
(೨) ವೈವಾಹಿಕ ಸುಖ
(೩) ಸನ್ಯಾಸಯೋಗ

ಅದರಂತೆಯೇ ಸ್ತ್ರೀಯರ ವಿವಾಹದ ಬಗ್ಗೆ ವಿಚಾರಿಸುವಾಗ ಶನಿ ಮಂಗಳ ರಾಹು ಮತ್ತು ಪಂಚಮ, ಸಪ್ತಮ ಸ್ಥಾನಗಳ ಶುಭಾಶುಭ ಯೋಗಗಳನ್ನು ನೋಡಬೇಕಾಗುತ್ತದೆ. ಮತ್ತು ಸ್ತ್ರೀಯರಲ್ಲಿರುವ ಮನೋದಾರ್ಢ್ಯ, ಮನೋದೌರ್ಬಲ್ಯ ಮುಂತಾದವುಗಳನ್ನು ಕೂಡ ವಿಚಾರಿಸಬೇಕಾಗುವದು. ಆದುದರಿಂದ ಪುರುಷರ ಕುಂಡಲಿಯಲ್ಲಿ ಅವಿವಾಹಕಾರಕ ಯೋಗಗಳಿರುವಂತೆ ಸ್ತ್ರೀಯರ ಕುಂಡಲಿಗಳಲ್ಲಿಯೂ ಇರುತ್ತವೆ. ಅವು ಇಂತಿವೆ,

೧) ಶನಿ. ಮಂಗಳರ ಸಮಸಪ್ತಕವು ಲಗ್ನ ಸಪ್ತಮ ಅಥವಾ ಪಂಚಮ ಏಕಾದಶಗಳಲ್ಲಿದ್ದರೆ
೨) ಶನಿ, ಮಂಗಳರ ಯುತಿಯು ಲಗ್ನ ಸಪ್ತಮ ಇಲ್ಲವೆ ಪಂಚಮ ಸ್ಥಾನಗಳಲ್ಲಿದ್ದರೆ
೩) ಅನೇಕ ಪಾಪಗ್ರಹಗಳು ಲಗ್ನ ಇಲ್ಲವೆ ಸಪ್ತಮದಲ್ಲಿದ್ದರೆ
೪) ಬಲಾಢ್ಯ ಮಂಗಳನು ಸಪ್ತಮದಲ್ಲಿದ್ದು ಶನಿಯಿಂದ ದೃಷ್ಟಿಸಲ್ಪಟ್ಟರೆ
೫) ಬಲಾಢ್ಯ ಶನಿಯು ಸಪ್ತಮದಲ್ಲಿದ್ದು, ಮಂಗಳನಿಂದ ದೃಷ್ಟಿಸಲ್ಪಟ್ಟಿದ್ದರೆ
೬) ಸಪ್ತಮಾಧೀಶ ಹಾಗೂ ಶುಕ್ರರು ನಿರ್ಬಲರಾಗಿ ಶನಿಯುತರಾಗಿದ್ದರೆ.

೭) ಅನೇಕ ಗ್ರಹಗಳು ಪುರುಷ ರಾಶಿಗಳಲ್ಲಿದ್ದು, ಲಗ್ನವೂ ಕೂಡ ಪುರುಷ ಸಂಜ್ಞಕರಾಶಿಯೇ ಇದ್ದರೆ ಅಥವಾ ಜನ್ಮಕುಂಡಲಿಯಲ್ಲಿ ಪುರುಷ ಗ್ರಹಗಳೇ ಬಲಾಢ್ಯರಾಗಿದ್ದರೆ

೮) ಶುಕ್ರ, ಚಂದ್ರರು ವಂಧ್ಯಾರಾಶಿಯ ೬-೮-೧೨ ಸ್ಥಾನದಲ್ಲಿದ್ದು, ಶನಿ, ಮಂಗಳ, ರಾಹು ೧-೫-೭-೯ ಸ್ಥಾನದಲ್ಲಿ ಇದ್ದರೆ

ಮೇಲೆ ಕಾಣಿಸಿದ ಯೋಗಗಳು ಕುಂಡಲಿಯಲ್ಲಿ ಇದ್ದ ಸ್ತ್ರೀಯರು ಆಜನ್ಮ ಕುಮಾರಿಕೆಯರಾಗಿ ಉಳಿಯುವ ಸಂಭವವಿರುತ್ತದೆ.

## ಪ್ರೀತಿಯೋಗಗಳು

ವಿವಾಹದ ಬಗ್ಗೆ ವಧೂ-ವರರ ಕುಂಡಲಿಗಳನ್ನು ಪರಿಶೀಲಿಸುವಾಗ ಜನ್ಮನಕ್ಷತ್ರ ಹಾಗೂ ಜನ್ಮರಾಶಿಗಳಿಗೆ ಪ್ರಾಧಾನ್ಯತೆ ಕೊಟ್ಟು ವಿವಾಹ ಸಾಂಗ ಗೊಳಿಸುತ್ತಾರೆ. ಅಂದರೆ ೩೬ ಗುಣಗಳು ಕೂಡಿದವೆಂದರೆ ವಿವಾಹವು ಜರುಗುವದು. ವಧೂ-ವರರ ಜನ್ಮಲಗ್ನದ ರಾಶಿಗಳು ಬೇರೆಬೇರೆ ತತ್ವ ವುಳ್ಳವು ಇದ್ದರೂ ಕೂಡ ವಿವಾಹವನ್ನು ಜರುಗಿಸುವರು. "ಛತ್ತೀಸ" ಗುಣ ಕೂಡಿ ಬರುವದು ಅಂದರೆ ಪತಿ-ಪತ್ನಿಯರ ಜೀವನ ಸ್ವಭಾವವೂ "ಛತ್ತೀಸಕ್ಕೂ ಹೊಂದದಂತೆ" ಇರಬೇಕೆಂಬುದೇ ಅದರ ಉದ್ದೇಶ. ಆದರೆ ೩೬ ಗುಣ ಗಳು ಕೂಡಿ ಬಂದರೂ ಅವರ ಜೀವನವು ೩೬ ಅಂಕಿಯ ಹಾಗೆ ಇದ್ದರೆ ಏನು ಪ್ರಯೋಜನ? ಅದ್ದರಿಂದ ವಧೂ-ವರರ ಕುಂಡಲಿಗಳನ್ನು ಪರಿಶೀಲಿಸುವಾಗ ಕೇವಲ ಜನ್ಮ ನಕ್ಷತ್ರಕ್ಕೆ ಪ್ರಾಧಾನ್ಯತೆ ಕೊಡದೆ ಅವರೀರ್ವರಲ್ಲಿಯ ಶುಭಾ-ಶುಭ ಯೋಗಗಳನ್ನು ನೋಡಬೇಕು.

ಶುಭಾಶುಭ ಯೋಗಗಳನ್ನು ನೋಡುವಾಗ ಲಗ್ನ, ಪಂಚಮ, ಸಪ್ತಮ ಹಾಗೂ ಭಾಗ್ಯ ಈ ಸ್ಥಾನಗಳನ್ನು ನೋಡಬೇಕಾಗುತ್ತದೆ. ಹಾಗೂ ರವಿ, ಚಂದ್ರ, ಮಂಗಳ, ಶುಕ್ರ ಈ ಗ್ರಹಗಳ ಬಲಾಬಲಗಳನ್ನು ನೋಡಬೇಕಾಗು ತ್ತದೆ. ಏಕೆಂದರೆ ಲಗ್ನ ಹಾಗೂ ರವಿ-ಚಂದ್ರ ಇವರಿಂದ ಸ್ವಭಾವ ಹಾಗೂ ಆರೋಗ್ಯಗಳ ಬಗ್ಗೆ ಗೊತ್ತಾಗುತ್ತದೆ. ಶುಕ್ರ, ಚಂದ್ರ ಮತ್ತು ಸಪ್ತಮ ಸ್ಥಾನ ಮತ್ತು ಪಂಚಮ ಸ್ಥಾನಗಳಿಂದ ಪತಿ-ಪತ್ನಿಯರಲ್ಲಿರುವ ಸ್ವಭಾವ ವಿಷಯವಾಸನಾ ಮುಂತಾದ ಸಂಗತಿಗಳು ಗೊತ್ತಾಗುತ್ತವೆ.

ಮಂಗಳ ಹಾಗೂ ಭಾಗ್ಯಸ್ಥಾನಗಳಿಂದ ಅವರಲ್ಲಿರುವ ಅನ್ಯೋನ್ಯ ಪ್ರೀತಿ ಹಾಗೂ ಭಾಗ್ಯಗಳ ಬಗ್ಗೆ ಗೊತ್ತಾಗುತ್ತದೆ. ಆದುದರಿಂದ ಜನ್ಮ ನಕ್ಷತ್ರ ಹಾಗೂ ಜನ್ಮರಾಶಿಗಳ ಹೊರತಾಗಿ ಮೇಲೆ ವಿವೇಚಿಸಿದ ಸಂಗತಿಗಳನ್ನು ಕೂಡ ವಿಚಾರಿಸಬೇಕು.

೧) ವಧೂವರರ ಕುಂಡಲಿಗಳಲ್ಲಿ ಇಬ್ಬರ ಲಗ್ನಗಳು ಒಂದೇ ತತ್ವವುಳ್ಳವು ಇದ್ದರೆ ಉತ್ತಮವು. ಮಿತ್ರತತ್ವದ ರಾಶಿಗಳು ಲಗ್ನದಲ್ಲಿದ್ದರೆ ಉತ್ತಮ. ಉದಾ: ಇಬ್ಬರದೂ ಒಂದೇ ತತ್ವದ ರಾಶಿ, ಅಥವಾ ಅಗ್ನಿ–ವಾಯು, ಭೂತತ್ತ ಜಲತತ್ವ. ಇತ್ಯಾದಿ ಆದರೆ ಒಬ್ಬರದು ಅಗ್ನಿ ತತ್ವದ ಲಗ್ನ ಹಾಗೂ ಮತ್ತೊಬ್ಬರದು ಜಲತತ್ವವುಳ್ಳ ಲಗ್ನವಿದ್ದರೆ ಅವರೀರ್ವರಲ್ಲಿ ಐಕ್ಯತೆ ಹೇಗೆ ಇದ್ದೀತು ?

೨) ಇಬ್ಬರದೂ ಒಂದೇ ಲಗ್ನವಿದ್ದರೆ ಉತ್ತಮ, ಇಂಥ ಜೋಡಿಯ ಜೀವನವು ಸುಖಮಯವಿರುತ್ತದೆ. ಏಕೆಂದರೆ ಇಬ್ಬರ ಗುಣ ಸ್ವಭಾವಗಳು ಒಂದೇ ಇರುತ್ತವೆ.

೩) ಪತಿ ಪತ್ನಿಯರ ಕುಂಡಲಿಗಳಲ್ಲಿ ಮಹತ್ವದ ಗ್ರಹಗಳು ಒಂದೇ ಗೋಲಾರ್ಧದಲ್ಲಿರಬೇಕು.

೪) ಒಬ್ಬರ ಚಂದ್ರನು ನಿರ್ಬಲನಿದ್ದರೆ ಇನ್ನೊಬ್ಬರ ಚಂದ್ರನು ನಿರ್ಬಲನಿರಕೂಡದು, ಅಥವಾ ಇಬ್ಬರ ಕುಂಡಲಿಯಲ್ಲಿಯೂ ದಾರಿದ್ರ್ಯಯೋಗ ಇರಕೂಡದು (ಏಕಾದಶಿಯ ಮನೆಗೆ ಶಿವರಾತ್ರಿ ಬಂದಂತೆ)

೫) ಒಂದು ಕುಂಡಲಿಯಲ್ಲಿ ಅಶುಭಯೋಗವಿದ್ದರೆ ಇನ್ನೊಬ್ಬರ ಕುಂಡಲಿಯಲ್ಲಿಯೂ ಕೂಡ ಅದೇ ಅಶುಭಯೋಗವಿರಕೂಡದು. ಉದಾ : ಪತಿಯ ಕುಂಡಲಿಯಲ್ಲಿ ಸಪ್ತಮ ಸ್ಥಾನದಲ್ಲಿ ಶನಿ–ಮಂಗಳರ ಯುತಿಯು ಇದೆಯೆಂದು ತಿಳಿಯಿರಿ, ಆದರೆ ಅದೇ ಯುತಿಯು ಪತ್ನಿಯ ಕುಂಡಲಿಯಲ್ಲಿ ಯಾವ ರಾಶಿಯಲ್ಲಿಯೂ ಇರಕೂಡದು. ಪತಿಯ ಕುಂಡಲಿಯಲ್ಲಿ ಶನಿ–ಮಂಗಳರ ಯುತಿ ತೃತೀಯ ಸ್ಥಾನದಲ್ಲಿ ಕನ್ಯಾರಾಶಿಯಲ್ಲಿ ಇದೆ ಎಂದು ತಿಳಿದರೆ ತೃತೀಯದಲ್ಲಿದ್ದ ಕಾರಣ ಆರೋಗ್ಯಕ್ಕೆ ಗಂಡಾಂತರ ಇಲ್ಲ ಆದರೆ ಅದೇ ಕನ್ಯಾ ರಾಶಿಯು ಪತ್ನಿಯ ಕುಂಡಲಿಯಲ್ಲಿ ಷಷ್ಠದಲ್ಲಿದ್ದರೆ ಪತಿಯ ಕುಂಡಲಿಯಲ್ಲಿ

ತೃತೀಯ ಸ್ಥಾನದಲ್ಲಿದ್ದ ಯುತಿಯು ಪತ್ನಿಯ ಆರೋಗ್ಯವನ್ನು ಕೆಡಿಸುತ್ತಿದೆ. ಚತುರ್ಥದಲ್ಲಿದ್ದರೆ ಗೃಹಸೌಖ್ಯ ಕಡಿಮೆ, ಪಂಚಮದಲ್ಲಿದ್ದರೆ ಸಂತತಿಯ ಅಭಾವ ಇತ್ಯಾದಿ. ಆದ್ದರಿಂದ ಪತಿಯ ಕುಂಡಲಿಯಲ್ಲಿದ್ದ ಅಶುಭಯೋಗಗಳು ಪತ್ನಿಯ ಕುಂಡಲಿಯಲ್ಲಿ ಯಾವ ಸ್ಥಾನದಲ್ಲಿಯೂ ಇರಬಾರದು.

೬) ಒಬ್ಬರ ಕುಂಡಲಿಯಲ್ಲಿದ್ದ ಶುಭಯೋಗವು ಇನ್ನೊಬ್ಬರ ಯಾವ ಸ್ಥಾನದಲ್ಲಿ ಇದೆ ಎಂಬುದನ್ನು ನೋಡಬೇಕು ಉದಾ: ಪತ್ನಿಯ ಕುಂಡಲಿಯಲ್ಲಿ ಗುರು-ಚಂದ್ರರ ನವಪಂಚಮ ಯೋಗವು ನವಮ ಹಾಗೂ ಪಂಚಮ್ಮ ಗಳಲ್ಲಿ ಇದೆ ಎಂದು ತಿಳಿಯಿರಿ. ಅದೇ ಯೋಗವು ಪತಿಯ ಕಂಡಲಿಯಲ್ಲಿ ಅಷ್ಟಮ ಹಾಗೂ ದ್ವಾದಶ ಸ್ಥಾನಗಳಲ್ಲಿದ್ದರೆ ಪತ್ನಿಯ ಕುಂಡಲಿಯಲ್ಲಿದ್ದ ಯೋಗಕ್ಕೆ ಭಂಗಬರುವದು. ಆದ್ದರಿಂದ ಇಬ್ಬರಲ್ಲಿಯ ಶುಭಯೋಗಗಳನ್ನು ಪರೀಕ್ಷಿಸಬೇಕು.

೭) ಈರ್ವರ ಕುಂಡಲಿಯ ಲಗ್ನದಲ್ಲಿದ್ದ ಗ್ರಹಗಳು ಒಂದೇ ತತ್ವವುಳ್ಳವರಿರಬೇಕು. ಉದಾ: ಒಬ್ಬರ ಕುಂಡಲಿಯ ಲಗ್ನದಲ್ಲಿ ಶನಿ ಇನ್ನೊಬ್ಬರ ಕುಂಡಲಿಯ ಲಗ್ನದಲ್ಲಿ ಮಂಗಳನು ಇರದೆ ಮಿತ್ರರು ಅಥವಾ ಒಂದೇ ತತ್ವವುಳ್ಳವರು ಇರಬೇಕು.

೮) ಪತಿ-ಪತ್ನಿಯರ ಕುಂಡಲಿಗಳನ್ನು ಪರಿಶೀಲಿಸುವಾಗ ಒಬ್ಬರ ಕುಂಡಲಿಯಲ್ಲಿ ಶನಿ, ಮಂಗಳ, ರಾಹು, ಮೊದಲಾದ ಗ್ರಹಗಳಲ್ಲಿ ಒಂದು ಗ್ರಹವು ಲಗ್ನದಲ್ಲಿದ್ದರೆ ಇನ್ನೊಬ್ಬರ ಕುಂಡಲಿಯಲ್ಲಿ ಅವೇ ಗ್ರಹಗಳು ಇರದೆ ಗುರು, ಶುಕ್ರ, ಚಂದ್ರ ಮೊದಲಾದ ಶುಭ ಗ್ರಹಗಳು (ಬಲಾಢ್ಯರಾಗಿ) ಅವೇ ಸ್ಥಾನಗಳಲ್ಲಿದ್ದರೆ ಉತ್ತಮವು.

೯) ಈರ್ವರ ಕುಂಡಲಿಯಲ್ಲಿಯೂ ಸಂತತಿಯ ಬಗ್ಗೆ ಅಶುಭ ಯೋಗಗಳು ಇರಕೂಡದು.

ಇದರಂತೆ ದೃಷ್ಟಿ, ಯುತಿ ಸ್ಥಾನ ಇವುಗಳಿಂದ ಈರ್ವರಲ್ಲಿಯ ಶುಭಾಶುಭ ಯೋಗಗಳನ್ನು ನೋಡಿದ ಬಳಿಕ ಈರ್ವರಲ್ಲಿ ಪುರುಷ ಗ್ರಹಗಳ

(positive) ಪ್ರಭಾವರುವದೋ ಅಥವಾ ಸ್ತ್ರೀ ಗ್ರಹ (negative) ಪ್ರಭಾವವಿರುವದೋ ಎಂಬುದನ್ನು ಪರಿಶೀಲಿಸಬೇಕು.

ಯಾರ ಕುಂಡಲಿಯ ಲಗ್ನ, ರವಿ, ಮಂಗಳ, ಗುರು ಈ ಗ್ರಹಗಳು ಬಲಿಷ್ಠರಾಗಿ ಪುರುಷ ರಾಶಿಗಳಲ್ಲಿ ಇರುವರೋ ಅಥವಾ ಅನೇಕ ಗ್ರಹಗಳು ಪುರುಷ ರಾಶಿಗಳಲ್ಲಿ ಇರುವರೋ ಎಂಬುದನ್ನು ನೋಡಬೇಕು.

ಯಾರ ಕುಂಡಲಿಯಲ್ಲಿ ಲಗ್ನ, ಚಂದ್ರ, ಶುಕ್ರ ಇವರು ಬಲಿಷ್ಠರಾಗಿ ಸ್ತ್ರೀ ರಾಶಿಯಲ್ಲಿರುವರೋ ಅಥವಾ ಅನೇಕ ಗ್ರಹಗಳು ಬಲಾಢ್ಯರಾಗಿ ಸ್ತ್ರೀ ರಾಶಿಯಲ್ಲಿರುವರೋ ಎಂಬುದನ್ನು ನೋಡಬೇಕು.

ಅನೇಕ ಗ್ರಹಗಳು ಪುರುಷ ರಾಶಿಗಳಲ್ಲಿದ್ದರೆ ಅಥವಾ ಪುರುಷ ಗ್ರಹಗಳು ಹಾಗೂ ಪುರುಷ ರಾಶಿಯ ಲಗ್ನ ಪ್ರಾಬಲ್ಯವಿದ್ದರೆ ಪುರುಷ ಸಂಜ್ಞಕ ಕುಂಡಲಿಯೆಂದು ತಿಳಿಯಬೇಕು

ಅನೇಕ ಗ್ರಹಗಳು ಸ್ತ್ರೀರಾಶಿಗಳಲ್ಲಿದ್ದರೆ ಅಥವಾ ಸ್ತ್ರೀ ಗ್ರಹಗಳು ಹಾಗೂ ಸ್ತ್ರೀರಾಶಿಯ ಲಗ್ನ ಪ್ರಾಬಲ್ಯವಿದ್ದರೆ ಸ್ತ್ರೀ ಸಂಜ್ಞಕ ಕುಂಡಲಿಯೆಂದು ತಿಳಿಯಬೇಕು.

ಹೀಗೆ ಸ್ತ್ರೀ ಸಂಜ್ಞಕ ಹಾಗೂ ಪುರುಷ ಸಂಜ್ಞಕ ಕುಂಡಲಿಗಳಲ್ಲಿ ನಾಲ್ಕು ಪ್ರಕಾರಗಳುಂಟು.

(೧) ಪತಿ-ಪತ್ನಿ ಇಬ್ಬರ ಕುಂಡಲಿಗಳೂ ಪುರುಷ ಸಂಜ್ಞಕ

(೨) ಪತಿ-ಪತ್ನಿ ಇಬ್ಬರ ಕುಂಡಲಿಗಳೂ ಸ್ತ್ರೀ ಸಂಜ್ಞಕ

(೩) ಪತಿಯ ಕುಂಡಲಿಯು ಪುರುಷ ಸಂಜ್ಞಕ ಹಾಗೂ ಪತ್ನಿಯ ಕುಂಡಲಿಯು ಸ್ತ್ರೀ ಸಂಜ್ಞಕ

(೪) ಪತಿಯ ಕುಂಡಲಿಯ ಸ್ತ್ರೀ ಸಂಜ್ಞಕ ಹಾಗೂ ಪತ್ನಿಯ ಕುಂಡಲಿಯು ಪುರುಷ ಸಂಜ್ಞಕ

(೧) ಈರ್ವರಲ್ಲಿಯು ಪುರುಷ ಸಂಜ್ಞಕ ಕುಂಡಲಿ

ಈರ್ವರಲ್ಲಿಯೂ ಪುರುಷರಾಶಿ ಹಾಗೂ ಪುರುಷ ಗ್ರಹಗಳು ಪ್ರಬಲರಿದ್ದರೆ ದಾಂಪತ್ಯ ಜೀವನವು ಸುಗಮವಾಗಿ ಸಾಗದೇ ಈರ್ವರಲ್ಲಿಯೂ

ಭಿನ್ನಾಭಿಪ್ರಾಯ ಉಂಟಾಗುತ್ತದೆ. ಏಕೆಂದರೆ ಈರ್ವರೂ ಹಟವಾದಿಗಳೂ ಸ್ವಾತಂತ್ರ್ಯಪ್ರಿಯರೂ ಇರುವದರಿಂದ ದಾಂಪತ್ಯ ಜೀವನವು ಸುಗಮವಾಗಿ ನಡೆಯುವದಿಲ್ಲ.

ಇಂಥ ಜೋಡಿಗಳ ಪತ್ನಿಯ ಕುಂಡಲಿಗಳಲ್ಲಿ (ಸ್ತ್ರೀಯರ) ರವಿ ಮಂಗಳರು ಪ್ರಬಲರಾಗಿದ್ದು ಪತಿಯ (ಪುರುಷರ) ಕುಂಡಲಿಯಲ್ಲಿ ಚಂದ್ರ ಶುಕ್ರರ ಹಾಗೂ ಸಪ್ತಮೇಶರ ಅಶುಭಯೋಗವಿದ್ದರಂತೂ ಪತಿ ಪತ್ನಿಯರಲ್ಲಿ ಭಿನ್ನಾಭಿಪ್ರಾಯವು ಹೆಚ್ಚಾಗಿ ತೋರುತ್ತದೆ. (ಉತ್ತರ ಧ್ರುವ ದಕ್ಷಿಣ ಧ್ರುವಗಳಂತೆ).

ಒಬ್ಬರ ವಿವಾಹಕಾರಕ ಗ್ರಹವು ಇನ್ನೊಬ್ಬರ ಕುಂಡಲಿಯಲ್ಲಿ ಶುಭ ಯೋಗವನ್ನುಂಟು ಮಾಡುತ್ತಿದ್ದರೆ ಮಾತ್ರ ವೈವಾಹಿಕ ಜೀವನವು ಸುರಳೀತ ಸಾಗುವದೆಂಬ ಆಸೆ ಇರುತ್ತದೆ. ಆದರೆ ಸಂಪೂರ್ಣ ದಾಂಪತ್ಯ ಸುಖವು ಮಾತ್ರ ಸಿಗಲಾರದು. (ಸಹಕಾರ್ಯಸುಖ ಮಾತ್ರ).

ಇಂಥ ಜೋಡಿಗಳಲ್ಲಿ ಸಾಂಪತ್ತಿಕ ಸ್ಥಿತಿಯು ಉತ್ತಮ ಇರುತ್ತದೆ. ಏಕೆಂದರೆ ಈರ್ವರೂ ಸಂಪಾದಿಸುವರು ಉದಾ: ಈರ್ವರೂ ಡಾಕ್ಟರರೂ, ಈರ್ವರೂ ಪ್ರೊಫೆಸರರು ಇತ್ಯಾದಿ ಉದ್ಯೋಗಗಳಲ್ಲಿ ತೊಡಗುವರು. ಆದರೆ ಪ್ರೇಮ, ಶೃಂಗಾರ, ಮುಂತಾದ ಗುಣಗಳ ಅಭಾವವಿರುತ್ತದೆ. ಹೀಗೆ ಈರ್ವರ ಕುಂಡಲಿಗಳು ಪುರುಷ ಸಂಜ್ಞಕಗಳಿದ್ದರೆ ಮೇಲೆ ಹೇಳಿದ ಗುಣಗಳು ಕಂಡುಬರುತ್ತವೆ.

### ೨) ಈರ್ವರ ಸ್ತ್ರೀ ಸಂಜ್ಞಕ ಕುಂಡಲಿ

ಇಂಥ ಜೋಡಿಗಳಲ್ಲಿ ಶಾಂತ ಸ್ವಭಾವ ಕೋಮಲ ಹೃದಯ ಮುಂತಾದ ಗುಣಗಳ ಐಕ್ಯತೆ ಇರುವದರಿಂದ (Harmony) ಇಂಥ ದಂಪತಿಗಳ ಜೀವನವು ಸುಗಮವಾಗಿ ಸಾಗುವದು. ಆದರೆ ಇಬ್ಬರ ಅಭಿಪ್ರಾಯಗಳು ಒಂದೇ ಇರುತ್ತವೆ. ಆದರೆ ಆರ್ಥಿಕ ಪರಿಸ್ಥಿತಿಯು ಮಾತ್ರ ಚಿಂತಾಜನಕ ಇರುತ್ತವೆ.

ಇಂಥ ಸ್ತ್ರೀಯರು (ಪತ್ನಿಯು) ಸುಶಿಕ್ಷಿತರಿದ್ದಾಗ್ಯೂ ಸ್ವಾವಲಂಬಿಗಳಾಗದೆ ಬಡತನದಲ್ಲಿ ಕಾಲ ಕಳೆಯುವರು. ಹಾಗೂ ಇಂಥ ಪುರುಷರ

ಕುಂಡಲಿಗಳಲ್ಲಿ ಸ್ತ್ರೀ ಗ್ರಹಗಳ ಪ್ರಭಾವವೇ ಹೆಚ್ಚಾಗಿರುವದರಿಂದ ಸಾಹಸ, ಧೈರ್ಯ, ದೃಢನಿಶ್ಚಯ ಮುಂತಾದ ಗುಣಗಳ ಅಭಾವವಿರುವದರಿಂದ ಆರ್ಥಿಕ ಸಮಸ್ಯೆಯು ಜಟಿಲವಾಗಿರುತ್ತದೆ.

ಇಂಥ ಜೋಡಿಗಳಿಗೆ ಸಂತಾನವು ಹೆಚ್ಚಾಗಿರುವದರಿಂದ ಬಡತನದಲ್ಲಿಯೇ ಪೂರ್ವಾರ್ಧ ಜೀವನವನ್ನು ಕಳೆಯಬೇಕಾಗುವದು.

(೩) ಪತಿಯ ಕುಂಡಲಿ ಪುರುಷ ಸಂಜ್ಞಕ, ಪತ್ನಿಯ ಕುಂಡಲಿ ಸ್ತ್ರೀ ಸಂಜ್ಞಕ

ಇಂಥ ಜೋಡಿಗಳಲ್ಲಿ ದಾಂಪತ್ಯ ಜೀವನವು ಆದರ್ಶವಿರುತ್ತದೆ. ಸಾಹಸ; ಧೈರ್ಯ, ನೇತೃತ್ವ ಮುಂತಾದ ಗುಣಗಳು ಪತಿಯಲ್ಲಿ ಕಂಡು ಬರುತ್ತವೆ. ಆದರೆ ಶಾಂತತೆ ಕೋಮಲ ಮತ್ತು ಹೃದಯ ವೈಶಾಲ್ಯ ಮುಂತಾದ ಗುಣಗಳಿಂದ ತುಂಬಿರುವ ಇಂಥ ಸ್ತ್ರೀಯರ ವೈವಾಹಿಕ ಜೀವನವು ಸುಗಮವಾಗಿ ಸಾಗುತ್ತದೆ.

ಇಂಥ ಜೋಡಿಗಳಲ್ಲಿ ಅಶುಭಯೋಗವಿದ್ದರೆ ಪತಿಯು ಪತ್ನಿಯನ್ನು ಗುಲಾಮಳಂತೆ ನಡೆಸುತ್ತಾನೆ. ಪುರುಷನ ಕುಂಡಲಿಯು ಪುರುಷಸಂಜ್ಞಕ ಇರುವದರಿಂದ ಅವನ ಗುಣಗಳಲ್ಲಿ ಹೆಚ್ಚಳ ಉಂಟಾಗುತ್ತದೆ. ಅದರಂತೆ ಸ್ತ್ರೀ ಸಂಜ್ಞಕ ಕುಂಡಲಿಯುಳ್ಳ ಸ್ತ್ರೀಯಳಿರುವದರಿಂದ ಅವಳಲ್ಲಿಯ ನಾರೀತನದ ಗುಣಗಳು ಸ್ಪಷ್ಟವಾಗುತ್ತವೆ. ಅದುದರಿಂದ ಇಲ್ಲಿ ಹೆಣ್ಣುಮಗಳು ಅಥವಾ ಸ್ತ್ರೀಯು ಗಂಡಸಿನ ವಿದ್ಯಾ, ಬಲ, ಸಿಟ್ಟು ಮೊದಲಾದ ಗುಣಗಳಿಗೆ ಅಂಜಿ ದಾಸಿಯಾಗುತ್ತಾಳೆ. ( ಅವಳಿಗೆ ಮಾನಾಪಮಾನ ಸಹಿಸಬೇಕಾಗುತ್ತದೆ ).

(೪) ಸ್ತ್ರೀ ಸಂಜ್ಞಕ ಪುರುಷ ಕುಂಡಲಿ ಹಾಗೂ ಪುರುಷ ಸಂಜ್ಞಕ ಸ್ತ್ರೀ ಕುಂಡಲಿ

ಇಂಥ ಜೋಡಿಗಳಲ್ಲಿ ಸ್ತ್ರೀಗೆ ಹೆಚ್ಚು ಪ್ರಾಧಾನ್ಯತೆ ಇರುತ್ತದೆ. ಗಂಡಸು ಸ್ತ್ರೀಯ ಗುಲಾಮನಾಗುತ್ತಾನೆ. ಇಂಥ ಸ್ಥಿತಿಯಲ್ಲಿ ಪುರುಷನ ಸಾಂಪತ್ತಿಕ ಸ್ಥಿತಿಯು ಚೆನ್ನಾಗಿರುವದಿಲ್ಲ. ಶಿಕ್ಷಣವು ಕೂಡ ಅಷ್ಟಕ್ಕಷ್ಟೇ ಅವರೆ ಪತ್ನಿಯು ಮಾತ್ರ ಪತಿಯಷ್ಟೇ ಅಲ್ಲವೇ ಪತಿಗಿಂತ ಹೆಚ್ಚು ವಿದ್ಯಾವಂತಳಿರುತ್ತಾಳೆ. ಮತ್ತು ಸ್ವಾವಲಂಬಿಯಾಗಿರುತ್ತಾಳೆ.

## ಪ್ರೀತಿ ಯೋಗಗಳು

೧) ಒಬ್ಬರ ರವಿಯು ಯಾವ ಸ್ಥಾನದಲ್ಲಿರುವನೋ ಇನ್ನೊಬ್ಬರ ಕುಂಡಲಿಯಲ್ಲಿ ಅದೇ ಸ್ಥಾನದಲ್ಲಿ ಚಂದ್ರನಿರಬೇಕು.

೨) ಇಬ್ಬರ ಕುಂಡಲಿಗಳಲ್ಲಿ ಒಂದೇ ಸ್ಥಾನದಲ್ಲಿ ಚಂದ್ರನಿರಬೇಕು.

೩) ಈರ್ವರದು ಒಂದೇ ರಾಶಿ ಇರಬೇಕು.

೪) ಒಬ್ಬರ ಕುಂಡಲಿಯಲ್ಲಿ ಪುರುಷ ರಾಶಿಯ ಲಗ್ನವಿದ್ದರೆ ಮತ್ತೊಬ್ಬರ ಕುಂಡಲಿಯಲ್ಲಿ ಸ್ತ್ರೀ ರಾಶಿಯು ಲಗ್ನದಲ್ಲಿರಬೇಕು.

೫) ಈರ್ವರ ಕುಂಡಲಿಗಳಲ್ಲಿ ಗುರು, ಚಂದ್ರ, ಶುಕ್ರ, ಇವರು ೧-೫-೭-೯-೧೧ ಈ ಸ್ಥಾನಗಳಲ್ಲಿರಬೇಕು.

೬) ಒಬ್ಬರ ಕುಂಡಲಿಯಲ್ಲಿಯ ಶನಿ-ಮಂಗಳರ ಸಮಸಪ್ತಕ ಇಲ್ಲವೇ ಯುತಿ ಯಾವ ಸ್ಥಾನಗಳಲ್ಲಿ ಇರುವದೋ ಅದೇ ಸ್ಥಾನಗಳಲ್ಲಿ ಇನ್ನೊಬ್ಬರ ಕುಂಡಲಿಯಲ್ಲಿ ಗುರು-ಚಂದ್ರ, ಗುರು-ಶುಕ್ರ, ಶುಕ್ರ-ಚಂದ್ರ ಇವರ ಸಮಸಪ್ತಕ ಇಲ್ಲವೇ ಯುತಿಯು ಇರಬೇಕು.

೭) ಒಬ್ಬರ ಲಗ್ನದಲ್ಲಿ ಶನಿ ಇಲ್ಲವೇ ಮಂಗಳರಿದ್ದು. ಇನ್ನೊಬ್ಬರ ಲಗ್ನದಲ್ಲಿ ರವಿ ಇಲ್ಲವೇ ರಾಹು ಇರಬಾರದು.

೮) ಈರ್ವರ ಕುಂಡಲಿಯಲ್ಲಿಯೂ ಶನಿ-ಮಂಗಳ, ರವಿ-ಶನಿ, ರಾಹು-ಶನಿ, ರಾಹು-ಚಂದ್ರ, ರಾಹು-ಮಂಗಳ, ಈ ಜೋಡಿಗಳಲ್ಲಿ ಒಂದು ಜೋಡಿಯು ಲಗ್ನ, ಪಂಚಮ, ಸಪ್ತಮ, ಭಾಗ್ಯ, ಲಾಭಗಳಲ್ಲಿ ಇರಬಾರದು.

೯) ಈರ್ವರಿಗೂ ಕಾಲ-ಸರ್ಪ ಯೋಗವಿರಬಾರದು.

೧೦) ಈರ್ವರ ಸಪ್ತಮ ಸ್ಥಾನದಲ್ಲಿ ಅಶುಭ ಗ್ರಹಗಳು ಇರಬಾರದು.

## ಪ್ರೇಮ ವಿವಾಹ

ಸುಶಿಕ್ಷಿತ ತರುಣ ತರುಣಿಯರು ಪ್ರೇಮ ವಿವಾಹದಲ್ಲಿ ಸಿಲುಕುವರು. ಹೆಚ್ಚು ಧಾರ್ಮಿಕ ವಿಧಿ-ನಿಷೇಧಗಳನ್ನು ಅಲ್ಲಗಳೆದು ಪಾಲಕರಿಗೆ ತಿಳಿಯದಂತೆಯೇ ಪರಸ್ಪರ ನಿಶ್ಚಯ ಮಾಡಿಕೊಂಡಿರುತ್ತಾರೆ. " ಮಿಯಾ-ಬೀಬಿ ರಾಜಿ ತೋ ಕ್ಯಾ ಕರೇಗಾ ಖಾಜಿ " ಎಂಬುದೇ ಇವರ ಪ್ರಮಾಣ.

ಇಂಥ ಜೋಡಿಗಳ ಕುಂಡಲಿಗಳಲ್ಲಿ ಕೆಳಗೆ ಕಾಣಿಸಿದ ಯೋಗಗಳು ಕೆಲವು ಬರುತ್ತವೆ.

(೧) ಕರ್ಕ, ವೃಶ್ಚಿಕ, ಮೀನ ಈ ರಾಶಿಗಳು ೧-೫-೭-೮-೧೨ನೇ ಸ್ಥಾನಗಳಲ್ಲಿದ್ದು ಅಲ್ಲಿಯೇ ಶುಕ್ರ ಮಂಗಳರ ಯುತಿಯು ಇದ್ದರೆ;

(೨) ಶುಕ್ರ-ಚಂದ್ರರ ಸಮಸಪ್ತಕವು ಲಗ್ನ, ಸಪ್ತಮ ಹಾಗೂ ಪಂಚಮ ಲಾಭದಲ್ಲಿದ್ದರೆ;

(೩) ಕನ್ಯಾರಾಶಿಯ ಶುಕ್ರನು ಮಂಗಳನೊಂದಿಗೆ ೧-೫-೭-೮-೧೨ ರಲ್ಲಿ ಇದ್ದರೆ;

(೪) ಶುಕ್ರ-ಮಂಗಳರ ಯುತಿಯು ೧-೫-೭-೮-೧೨ ರಲ್ಲಿದ್ದರೆ;

(೫) ಮೇಷ, ಕರ್ಕ, ಸಿಂಹ, ವೃಶ್ಚಿಕ ಈ ರಾಶಿಗಳು ಸಪ್ತಮದಲ್ಲಿದ್ದು ಅಲ್ಲಿಯೇ ಶನಿ-ಚಂದ್ರ, ಶುಕ್ರ ಯುತಿಯು ಇದ್ದರೆ ;

(೬) ಬಲಾಢ್ಯ ರವಿ, ಮಂಗಳರು ೧, ೩, ೬, ೮ ಈ ಯಾವದೆ ಸ್ಥಾನದಲ್ಲಿದ್ದರೆ;

(೭) ಶುಕ್ರ, ಮಂಗಳರು ಬಲಾಢ್ಯರಾಗಿ ಪಂಚಮದಲ್ಲಿ ಇದ್ದರೆ;

(೮) ಶುಕ್ರ-ಮಂಗಳರ ಸಮಸಪ್ತಕವು ಲಗ್ನ, ಸಪ್ತಮ, ಪಂಚಮ ಅಷ್ಟಮ ಇದ್ದರೆ;

ಹೀಗೆ ಯೋಗಗಳಿದ್ದ ಕುಂಡಲಿಗಳಲ್ಲಿ ಪ್ರೇಮ ವಿವಾಹ ಜರುಗುತ್ತದೆ.

### ಪುನರ್ವಿವಾಹ ಯೋಗ

(೧) ಸಪ್ತಮೇಶ ರವಿ, ಶುಕ್ರರು ೧, ೫, ೭, ೧೦, ೧೧ ಈ ಸ್ಥಾನಗಳಲ್ಲಿದ್ದು ಪರಸ್ಪರ ದೃಷ್ಟಿಯೋಗವಿದ್ದರೆ,

(೨) ರವಿ, ಶುಕ್ರ ಅಥವಾ ಸಪ್ತಮೇಶ ಇವರಲ್ಲಿ ಯಾವದೇ ಎರಡು ಗ್ರಹ ಕರ್ಕ, ವೃಶ್ಚಿಕ, ಮೀನ ಯಾವದೊಂದು ರಾಶಿಯಲ್ಲಿದ್ದರೆ.

(೩) ಸ್ತ್ರೀಯರ ಕುಂಡಲಿಯಲ್ಲಿ ರವಿ ಹಾಗೂ ಮಂಗಳ ಈ ಎರಡೂ ಗ್ರಹಗಳು ಮಿಥುನ, ಧನು, ಮೀನ ಈ ಯಾವದೊಂದು ರಾಶಿಯಲ್ಲಿ ೧, ೫, ೭, ೧೧ ಈ ಯಾವದೊಂದು ಸ್ಥಾನದಲ್ಲಿದ್ದರೆ.

(೪) ಸಪ್ತಮೇಶ, ಸಪ್ತಮಾರಕ ಮತ್ತು ರವಿ ಈ ಮೂರು ಗ್ರಹಗಳು ದ್ವಿಸ್ವಭಾವ ರಾಶಿಯಲ್ಲಿದ್ದರೆ;

(೫) ಶುಕ್ರ-ಮಂಗಳರ ಯುತಿ ಪಂಚಮ ಇಲ್ಲವೆ ಸಪ್ತಮದಲ್ಲಿದ್ದರೆ;

(೬) ಕರ್ಕ, ವೃಶ್ಚಿಕ, ಮೀನ ಈ ಯಾವದೊಂದು ರಾಶಿಯ ಶುಕ್ರ, ಮಂಗಳರ ಯುತಿಯು ೧, ೮, ೧೨ ೫ ಈ ಯಾವದೊಂದು ಸ್ಥಾನಗಳಲ್ಲಿದ್ದರೆ;

ಮೇಲೆ ತೋರಿಸಿದ ಯೋಗಗಳಿದ್ದ ಸ್ತ್ರೀಯರ ಪುನರ್ವಿವಾಹವಾಗುವ ದೆಂದು ಅನುಭವದಿಂದ ಹೇಳಲಾಗುತ್ತದೆ. ಯಾವ ಸಮಾಜದಲ್ಲಿ ಪುನರ್ವಿವಾಹದ ರೂಢಿ ಇರುವದೋ ಅವರಿಗೆ ಮಾತ್ರ ಈ ನಿಯಮಗಳು ಅನ್ವಯಿಸುವದು ಕಂಡು ಬರುತ್ತದೆ.

## ದಾಂಪತ್ಯ ಸುಖದ ಅನುಕೂಲ ಗೋಚರಿ ಗ್ರಹಗಳು

ಗೋಚರೀ ಗ್ರಹಗಳ ಪರಿಭ್ರಮಣವು ದಾಂಪತ್ಯ ಸುಖವನ್ನು ವೃದ್ಧಿಸುತ್ತವೆ ಅಥವಾ ಪತಿಸೌಖ್ಯವನ್ನು ಕೊಡುತ್ತವೆ. ಇಂಥ ಗ್ರಹಗಳೆಂದರೆ ಗುರು, ಶುಕ್ರ, ಚಂದ್ರ, ರವಿ ಇವರ ಗೋಚರಿ ಪರಿಭ್ರಮಣವು ಜನ್ಮಕುಂಡಲಿಗಳ ಯಾವ ಸ್ಥಾನದಲ್ಲಿ ಅಥವಾ ಯಾವ ಗ್ರಹಗಳ ಮೇಲಿಂದ ಇವರ ಪರಿಭ್ರಮಣವಾಗುವದೆಂಬುದನ್ನು ಪರಿಶೀಲಿಸಬೇಕಾಗುತ್ತವೆ.

ಗೋಚರಿ ಗುರುವಿನ ಪರಿಭ್ರಮಣವು ೧, ೪, ೫, ೭, ೯, ೧೦, ೧೧ ಈ ಸ್ಥಾನದಲ್ಲಿಯೂ ಚಂದ್ರನಿಂದ ೨, ೫, ೭, ೯, ೧೧ನೇಯವನಾಗಿಯೂ ಚಂದ್ರ, ಶುಕ್ರ, ಗುರು, ರವಿ, ಸಪ್ತಮಾಧೀಶ ಪಂಚಮಾಧೀಶ ಇವರ ಮೇಲಿಂದ ಆಗುತ್ತಿದ್ದಾಗ ವಿವಾಹ, ಪತಿಯ ಸೌಖ್ಯ, ಸಂತತಿ ಸುಖ ಮುಂತಾದ ಸಂಗತಿಗಳು ಲಬ್ಧವಾಗುತ್ತವೆ.

ಗೋಚರೀ ಗುರುವಿನ ಪರಿಭ್ರಮಣವು ರವಿಯ ಮೇಲಿಂದಾ ಅಥವಾ ಜನ್ಮಕುಂಡಲಿಯಲ್ಲಿ ರವಿಯು ೧, ೫, ೯, ೧೦, ೧೧ ಈ ಯಾವದೊಂದು ಸ್ಥಾನದಲ್ಲಿದ್ದು, ಗೋಚರಿ ಗುರುವಿನ ಪರಿಭ್ರಮಣವು ಅವನ ಮೇಲಿಂದ ಆಗುತ್ತಿದ್ದಾಗ್ಗ ಮಾನ-ಸನ್ಮಾನ, ಐಶ್ವರ್ಯ ಲಭಿಸುತ್ತದೆ.

ಗೋಚರಿ ಶುಕ್ರನ ಪರಿಭ್ರಮಣವು ಮೂಲ ಶುಕ್ರ, ಚಂದ್ರ, ಮಂಗಳ ಸಪ್ತಮಾಧೀಶನ ಮೇಲಿಂದ ಆಗುತ್ತಿದ್ದಾಗ ವಿಷಯ ವಾಸನಾ ಸುಖವು ಹೆಚ್ಚುವದು.

ಜನ್ಮಸ್ಥ ಶುಕ್ರನು ವೃಷಭ, ಮಿಥುನ, ತುಲಾ, ಮೀನ ರಾಶಿಯವ ನಿದ್ದು ೧, ೨, ೫, ೭, ೯, ೧೧, ಈ ಸ್ಥಾನದಲ್ಲಿದ್ದು ಗೋಚರಿ ಶುಕ್ರನ ಪರಿ-ಭ್ರಮಣವಾದಾಗ್ಗ ಅನೇಕ ಕೆಲಸಗಳು ಕೈಗೂಡುವವು.

ಗೋಚರೀ ರವಿಯ ಪರಿಭ್ರಮಣವು ಶುಭಗ್ರಹಗಳ ಮೇಲಿಂದ ಆಗುತ್ತಿದ್ದಾಗ ಉತ್ತಮವಿರುತ್ತದೆ. ಅದರಲ್ಲಿಯೂ ೩, ೫, ೭, ೯, ೧೦, ೧೧, ಈ ಸ್ಥಾನಗಳ ಮೇಲಿಂದ ಆಗುತ್ತಿದ್ದಾಗಂತೂ ಅನೇಕ ಸಾಮಾಜಿಕ ರಾಜಕೀಯ ಹಾಗೂ ಉದ್ಯೋಗ, ನೌಕರಿ ಮೊದಲಾದ ಎಲ್ಲ ಕೆಲಸಗಳು ಕೈಗೂಡುತ್ತವೆ.

## ವೈವಾಹಿಕ ಜೀವನದಲ್ಲಿ ಅಪಾಯಕಾರಕ ಗ್ರಹಗಳ ಪರಿಭ್ರಮಣ

ಶನಿ, ಮಂಗಳ, ರಾಹು ಈ ಗ್ರಹಗಳ ಪರಿಭ್ರಮಣವು ಲಗ್ನ ಸಪ್ತಮ, ಸಪ್ತಮಾಧೀಶ, ರವಿ, ಚಂದ್ರ ಇವರ ಮೇಲಿಂದ ಆಗುತ್ತಿದ್ದಾಗ್ಗ ಅನೇಕ ತರಹದ ವಿಘ್ನಗಳು ಬರುತ್ತವೆ.

ಗೋಚರೀಯ ಶನಿಯ ಪರಿಭ್ರಮಣ ರವಿ, ಮಂಗಳರ ಮೇಲೆ ಆದಾಗ ಅನೇಕ ಅಶುಭದಾಯಕ ಘಟನೆಗಳು ಜರಗುತ್ತವೆ. ಜನ್ಮಕುಂಡಲಿಯಲ್ಲಿ ರವಿ-ಮಂಗಳರು ಮೇಷ, ಸಿಂಹ, ತುಲಾ, ವೃಶ್ಚಿಕ, ಮಕರ ಈ ಯಾವುದೊಂದು ರಾಶಿಯಲ್ಲಿ ಗೋಚರೀಯ ಶನಿಯ ಪರಿಭ್ರಮಣ ಅವರ ಮೇಲಿಂದ ಆಗುತ್ತಿದ್ದರೆ ಆ ಸ್ತ್ರೀಗೆ ಪುನರ್ಜನ್ಮವಾದಂತೆ ಅನೇಕ ತರಹದ ಗಂಡಾಂತರ-ಗಳನ್ನು ಎದುರಿಸಬೇಕಾಗುತ್ತದೆ ಆದರೆ ಈ ಎಲ್ಲ ಸಂಗತಿಗಳಿಗೆ ಆಯಾ ಸ್ಥಾನಗಳು ಕಾರಣವಾಗುತ್ತವೆ. ಉದಾ: ರವಿಯು ಪರಿಭ್ರಮಣ ಅಷ್ಟಮದಲ್ಲಿ ಆಗುತ್ತಿದ್ದರೆ ಶಾರೀರಕ, ಧನಸ್ಥಾನದಲ್ಲಿ ಆಗುತ್ತಿದ್ದರೆ ಆರ್ಥಿಕ ಇತ್ಯಾದಿ.

ಗೋಚರೀ ರಾಹುವಿನ ಪರಿಭ್ರಮಣ ಪಂಚಮ ಸಪ್ತಮ ಲಗ್ನ ಹಾಗೂ ರವಿ. ಚಂದ್ರರ ಮೇಲೆ ಆಗುತ್ತಿದ್ದಾಗ ಅನೇಕ ಅಶುಭಕಾರಕ ಘಟನೆಗಳು ಜರಗುತ್ತವೆ

**ಪತಿ-ಪತ್ನಿಯರಲ್ಲಿ ಯಾರು ಬಹುಕಾಲ ವಾಸಿಸುವರು?**

೧) ಸಪ್ತಮೇಶನಿಗಿಂತ ಲಗ್ನೇಶನು ಬಲವಂತನಾಗಿ ಯಾರ ಕುಂಡಲಿಯಲ್ಲಿ ಇರುವನೋ ಆ ವ್ಯಕ್ತಿಯು ತನ್ನ ಜೋಡಿಯಕಿಂತ ಅಧಿಕ ವರ್ಷ ಬದುಕುವರು.

೨) ಸಪ್ತಮೇಶನು ನಿರ್ಬಲನಾಗಿ ಸಪ್ತಮದಲ್ಲಿ ಅನೇಕ ಪಾಪಗ್ರಹಗಳಿದ್ದ ವ್ಯಕ್ತಿಯ ಜೋಡಿದಾರನು ಮೊದಲು ಸಾಯುವರು.

೩) ಲಗ್ನ ಹಾಗೂ ಸಪ್ತಮದಲ್ಲಿ ಅನೇಕ ಪಾಪಗ್ರಹಗಳು ಬಲಿಷ್ಠ ಇದ್ದರೆ ಆ ವ್ಯಕ್ತಿಯ ಜೋಡಿದಾರನು ಮೊದಲು ಸಾಯುತ್ತಾರೆ.

೪) ಯಾರ ಕುಂಡಲಿಯ ಚತುರ್ಥ ಹಾಗೂ ಸಪ್ತಮದಲ್ಲಿ ಪಾಪಗ್ರಹಗಳಿರುವವೋ ಆ ವ್ಯಕ್ತಿಯ ಜೋಡಿದಾರನು ಮೊದಲು ಸಾಯುತ್ತಾರೆ

೫) ಸಪ್ತಮೇಶ ಕರ್ಕ ರಾಶಿಯಲ್ಲಿದ್ದು, ಚಂದ್ರನು ಅಷ್ಟಮದಲ್ಲಿದ್ದರೆ ಆ ಸ್ತ್ರೀಯರಿಗೆ ವೈಧವ್ಯಯೋಗ ಉಂಟಾಗುತ್ತದೆ.

೬) ಪುರುಷ ಕುಂಡಲಿಯಲ್ಲಿ ಚಂದ್ರ ಶನಿ-ಯುಕ್ತರಾಗಿ ಸಪ್ತಮದಲ್ಲಿ ಇದ್ದರೆ ಆ ವ್ಯಕ್ತಿಯ ಪತ್ನಿಯು ಮೊದಲು ಸಾಯುತ್ತಾಳೆ.

೭) ಉಚ್ಚ ಅಥವಾ ಸ್ವಗ್ರಹದ ಮಂಗಳನು ಲಗ್ನ ಇಲ್ಲವೆ ಸಪ್ತಮದಲ್ಲಿದ್ದರೆ ಆ ವ್ಯಕ್ತಿಯ ಜೋಡಿದಾರನು ಮೊದಲು ಸಾಯುತ್ತಾರೆ.

೮) ಯಾರ ಕುಂಡಲಿಯಲ್ಲಿ ಶನಿ-ಮಂಗಳರ ಸಮಸಪ್ತಕವು ಲಗ್ನ ಹಾಗೂ ಸಪ್ತಮದಲ್ಲಿರುವದೋ ಆ ವ್ಯಕ್ತಿಯ ಜೋಡಿದಾರನು ಮೊದಲು ಸಾಯುವರು

೯) ಲಗ್ನ, ಚತುರ್ಥ, ಸಪ್ತಮ, ಭಾಗ್ಯ, ಈ ಯಾವುದಾದರೊಂದು ಸ್ಥಾನದಲ್ಲಿ ಶನಿ, ಮಂಗಳರ ಅಂಶಾತ್ಮಕ ಯುತಿ ಯಾರ ಕುಂಡಲಿಯಲ್ಲಿರುವದೊ ಆ ಜೋಡಿದಾರರು ಮೊದಲು ಸಾಯುವರು.

೧೦) ಶುಕ್ರನು ಬಲಹೀನನಾಗಿ ರವಿಯ ಮುಂದಿನ ಸ್ಥಾನದಲ್ಲಿದ್ದರೆ ಅವನ ಪತ್ನಿಯು ಮೊದಲು ಸಾಯುವಳು.

(೧೧) ಯಾರ ಕುಂಡಲಿಯಲ್ಲಿ ಬಲಹೀನ ಶುಕ್ರನು, ಮಂಗಳನೊಂದಿಗೆ ದ್ವಾದಶದಲ್ಲಿದ್ದರೆ ಅಥವಾ ಮಂಗಳನು ೧, ೪, ೭, ೮, ೧೨ ಈ ಯಾವುದಾದರೊಂದು ಸ್ಥಾನದಲ್ಲಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟರೆ ಆ ವ್ಯಕ್ತಿಯ ಜೋಡಿದಾರರು ಮೊದಲು ಸಾಯುವರು.

(೧೨) ಸಪ್ತಮೇಶನು ಬಲಹೀನನಾಗಿ ೩, ೬, ೮, ೧೨ ಈ ಸ್ಥಾನಗಳಲ್ಲಿದ್ದರೆ ಅಥವಾ ರವಿಯೊಂದಿಗೆ ೮-೧೨ ಯಾವದೊಂದು ಸ್ಥಾನದಲ್ಲಿದ್ದರೆ ಇಂಥ ವ್ಯಕ್ತಿಯ ಜೋಡಿಯು ಮೊದಲು ತೀರಿಕೊಳ್ಳುವರು.

ಮೇಲೆ ತೋರಿಸಿದ ನಿಯಮಗಳು ಪತಿ-ಪತ್ನಿಯರಲ್ಲಿ ಯಾರು ಅಧಿಕ ವರ್ಷ ಬದುಕುವರು ಎಂಬುದು ಮಾತ್ರ ಹೇಳಲ್ಪಟ್ಟಿದೆ. ಆದರೆ ಅದರರ್ಥ ವೈಧವ್ಯ ಅಥವಾ ವಿಧುರ ಎಂದು ಮಾತ್ರವಲ್ಲ.

## ವೈಧವ್ಯಯೋಗ

ಸ್ತ್ರೀಯರ ಕುಂಡಲಿಗಳನ್ನು ಪರಿಶೀಲಿಸುವಾಗ್ಗೆ ವೈಧವ್ಯಯೋಗದಂಥ ಯಾವ ಯೋಗಗಳೂ ಅರಿಷ್ಟ ಯೋಗಗಳಾಗಿರುವದಿಲ್ಲ, ಎಂಥ ವೈಭವಶಾಲಿಗಳೂ ಅಧಿಕಾರಿಗಳೂ ಸಾಂಪತ್ತಿಕಸ್ಥಿತಿ ಚನ್ನಾಗಿ ಉಳ್ಳವರೂ ಆದ ತಂದೆ-ತಾಯಿಯ ಮನೆಗೆ ಬಾಲವಿಧವೆ ಬಂದರೆ ಅದು ಶೂಲ ಚುಚ್ಚಿದಕ್ಕಿಂತಲೂ ಅಧಿಕ ನೋವು ಉಂಟುಮಾಡುತ್ತದೆ.

ವೈಧವ್ಯದ ಬಗ್ಗೆ ವಿಚಾರಿಸುವಾಗ್ಗೆ ನಾಲ್ಕು ಪ್ರಕಾರಗಳಿವೆ (೧) ಬಾಲ ವೈಧವ್ಯ (೨) ಅಕಾಲಿಕ ವೈಧವ್ಯ (೩) ಪ್ರೌಢ ವೈಧವ್ಯ (೪) ನೈಸರ್ಗಿಕ ವೈಧವ್ಯ.

(೧) ಬಾಲವೈಧವ್ಯ : ಅಂದರೆ ವಯಸ್ಸಿನ ೨೫ ಒಳಗಾಗಿ ಅಥವಾ ಲಗ್ನವಾದ ೩-೪ ವರ್ಷದೊಳಗಾಗಿ ವೈಧವ್ಯವು ಪ್ರಾಪ್ತವಾಗುವದು. ಇದು ಅತ್ಯಂತ ದುಃಖದಾಯಕವು. ಹಾಗೂ ತಂದೆ ತಾಯಿ ಅಥವಾ ಪಾಲಕರಿಗೆ ಮನೋವೇದನಾದಾಯಕವೂ ಆಗಿರುತ್ತದೆ.

(೨) ಅಕಾಲಿಕ ವೈಧವ್ಯ : ಈ ವೈಧವ್ಯ ಅಂದರೆ ವಯಸ್ಸಿನ ೨೫ರಿಂದ ೩೫ ವರುಷ ಒಳಗಾಗಿರುತ್ತದೆ. ೩-೪ ಸಂತಾನವಾದ ಬಳಿಕ ಹಾಗೂ

ಅರ್ಧಮರ್ಧ ಸಂಸಾರಮಾಡಿ ಆಶೆ ಆಕಾಂಕ್ಷೆಗಳ ಬಗ್ಗೆ ಅತೃಪ್ತರಾಗಿರುತ್ತಾರೆ. ಆದುದರಿಂದ ಈ ಯೋಗವು ಬಹಳೇ ದುಃಖದಾಯಕವಿರುತ್ತದೆ.

(೩) ಪ್ರೌಢವೈಧವ್ಯ : ಅಂದರೆ ವಯಸ್ಸಿನ ೩೬ ರಿಂದ ೪೫ ವರ್ಷದ ಒಳಗಾಗಿ ಇರುವ ವೈಧವ್ಯ ಈ ವೈಧವ್ಯದಲ್ಲಿ ಅರ್ಧಮರ್ಧ ಸಂಸಾರವಾಗಿ ಅರ್ಧಮರ್ಧ ಹೊಣೆಗಾರಿಕೆಯನ್ನು ಪೂರ್ತಿಗೊಳಿಸಿರುತ್ತಾರೆ.

(೪) ನೈಸರ್ಗಿಕ ವೈಧವ್ಯ : ೬೦ ವರ್ಷದ ಸುಮಾರು ಅಥವಾ ೬೦ ವರ್ಷ ಆದ ಬಳಿಕ ಪ್ರಾಪ್ತವಾಗುವ ಈ ವೈಧವ್ಯಕ್ಕೆ ವೈಧವ್ಯ ಅನ್ನಬೇಕೋ ? ಅನ್ನಬಾರದೊ ? ಎಂಬ ಶಂಕೆಯು ಉದ್ಭವಿಸುತ್ತದೆ. ಏಕೆಂದರೆ ೬೦ ವರ್ಷದ ಮೇಲೆ ಪುರುಷನು ಸತ್ತರೆ ವೃದ್ಧಾಪ್ಯದಲ್ಲಿಯೇ ಸಾವು ಬಂದಂತೆ ಸರಿ. ಇಂಥ ಸ್ತ್ರೀಯರು ಪುತ್ರ-ಪುತ್ರಿಯರ ಎಲ್ಲ ಹೊಣೆ-ಗಾರಿಕೆಯನ್ನೂ ಈಡೇರಿಸಿದವರಾಗಿರುತ್ತಾರೆ. ಪತಿಯ ವಿಯೋಗದ ದುಃಖ ಹೊರತಾಗಿ ಯಾವ ದುಃಖವೂ ಇರುವದಿಲ್ಲ.

ಪ್ರತಿಯೊಂದು ಕುಂಡಲಿಯನ್ನು ಹೇಗೆ ಪರಿಶೀಲಿಸಬೇಕೆಂದು ವಿವೇಚಿಸಲಾಗಿದೆ.

## ೧. ಬಾಲವೈಧವ್ಯ

(ಅ) ಇಂಥ ಸ್ತ್ರೀಯರ ಕುಂಡಲಿಗಳಲ್ಲಿ ಅನೇಕ ಪಾಪಗ್ರಹಗಳು (೨-೩ ಪಾಪಗ್ರಹಗಳು) ಸಪ್ತಮದಲ್ಲಿರುತ್ತವೆ.

(ಬ) ಶನಿ-ಮಂಗಳರು ಸಮಸಪ್ತಕರಾಗಿ ಲಗ್ನ ಸಪ್ತಮದಲ್ಲಿರುತ್ತಾರೆ.

(ಕ) ರಾಹು-ಕೇತು ಸಮಸಪ್ತಕರಾಗಿ ಲಗ್ನ ಸಪ್ತಮದಲ್ಲಿದ್ದು, ಅಶುಭ ಮಂಗಳನ ದೃಷ್ಟಿ ಸಪ್ತಮದಲ್ಲಿರುತ್ತದೆ.

(ಡ) ಸಪ್ತಮೇಶನು ನಿರ್ಬಲನಾಗಿ ೬, ೮, ೧೨ ಯಾವದೊಂದು ಸ್ಥಾನದಲ್ಲಿದ್ದು ಶನಿ-ಮಂಗಳರ ಯುತಿ ಸಪ್ತಮ ಇಲ್ಲವೇ ಲಗ್ನದಲ್ಲಿ ಇರುತ್ತದೆ.

(ಇ) ಶನಿಯು ಪಂಚಮದಲ್ಲಿಯೂ ಮಂಗಳನು ಸಪ್ತಮದಲ್ಲಿಯೂ ರಾಹು ಲಗ್ನದಲ್ಲಿಯೂ ಇದ್ದು, ಸಪ್ತಮೇಶನು ನಿರ್ಬಲ ಇರುತ್ತಾನೆ.

(ಉ) ಶನಿ ಇಲ್ಲವೇ ಮಂಗಳರು ಸಪ್ತಮೇಶರಾಗಿ ಅಷ್ಟಮದಲ್ಲಿದ್ದರೆ.

ಮೇಲೆ ತೋರಿಸಿದ ಯೋಗಗಳಿದ್ದ ಸ್ತ್ರೀಯರಿಗೆ ಬಾಲವೈಧವ್ಯ ಪ್ರಾಪ್ತವಾಗುತ್ತದೆ.

## ೨ ಅಕಾಲಿಕ ವೈಧವ್ಯ

(ಅ) ಇಂಥ ಸ್ತ್ರೀಯರ ಕುಂಡಲಿಯಲ್ಲಿ ಅನೇಕ ಪಾಪಗ್ರಹಗಳು ಸಪ್ತಮದಲ್ಲಿರುತ್ತವೆ ಅಥವಾ ಸಪ್ತಮೇಶನು ಪಾಪಗ್ರಹವಿದ್ದು, ೬, ೮, ೧೨ ಈ ಸ್ಥಾನದಲ್ಲಿರುತ್ತಾನೆ.

(ಬ) ಇಂಥ ಸ್ತ್ರೀಯರ ಕುಂಡಲಿಗಳಲ್ಲಿ ಚತುರ್ಥ ಹಾಗೂ ಪಂಚಮ ಸ್ಥಾನಗಳು ಸಹ ಅಶುಭದಾಯಕವಿರುತ್ತವೆ.

(ಕ) ಮೇಷ, ವೃಶ್ಚಿಕ, ಮಕರ, ಸಿಂಹ, ಧನು ಈ ಯಾವದೇ ರಾಶಿಯು ಮಂಗಳನು ಚತುರ್ಥದಲ್ಲಿಯೂ ಶನಿಯು ಸಪ್ತಮದಲ್ಲಿಯೂ ಇದ್ದು ಸಪ್ತಮೇಶನು ನಿರ್ಬಲನಾಗಿ ೬, ೮, ೧೨ ಈ ಯಾವದೊಂದು ಸ್ಥಾನದಲ್ಲಿರುತ್ತಾನೆ.

(ಡ) ಬಹಾಥ್ ಮಂಗಳನು ಸಪ್ತಮದಲ್ಲಿಯೂ ಪಂಚಮದಲ್ಲಿ ಶನಿಯೂ ಧನಸ್ಥಾನದಲ್ಲಿ ರಾಹುವೂ ಇರುತ್ತಾರೆ.

(ಇ) ಅನೇಕ ಪಾಪಗ್ರಹಗಳು ಧನಸ್ಥಾನದಲ್ಲಿದ್ದರೆ.

೨೫ ರಿಂದ ೩೬ನೇ ವರ್ಷದ ಅವಧಿಯಲ್ಲಿ ಸಾಡೆಸಾತಿ ಶನಿಯು ಪ್ರಾಪ್ತವಾದರೆ ಅಥವಾ ರವಿ. ಮಂಗಳ, ಚಂದ್ರ ಇವರಲ್ಲಿ ಯಾರಾದರೂ ಇಬ್ಬರು ಧನಸ್ಥಾನ, ಚತುರ್ಥಸ್ಥಾನದಲ್ಲಿದ್ದು; ಗೋಚರೀಯ ಶನಿಯು ಪರಿಭ್ರಮಣ ಇವರ ಮೇಲಿಂದ ಆಗುತ್ತಿದ್ದರೆ.

ಮೇಲೆ ತೋರಿಸಿದ ಯೋಗಗಳಿದ್ದ ಸ್ತ್ರೀಯರಿಗೆ ಅಕಾಲಿಕ ವೈಧವ್ಯ ಪ್ರಾಪ್ತವಾಗುತ್ತದೆ.

## ೩ ಪ್ರೌಢಾವಸ್ಥೆಯಲ್ಲಿರುವ ವೈಧವ್ಯ

(ಅ) ಇಂಥ ಸ್ತ್ರೀಯರ ಕುಂಡಲಿಯಲ್ಲಿ ಅನೇಕ ಪಾಪಗ್ರಹಗಳು ಅಷ್ಟಮದಲ್ಲಿರುತ್ತಾರೆ.

(ಬ) ಇಂಥ ಸ್ತ್ರೀಯರ ಕುಂಡಲಿಯಲ್ಲಿ ಪಂಚಮ ಹಾಗೂ ಸಪ್ತಮ ಸ್ಥಾನಗಳು ಬಲಾಢ್ಯವಿರುತ್ತವೆ. ಏಕೆಂದರೆ ಇಂಥ ಸ್ತ್ರೀಯರಿಗೆ ಪತಿಯ ಸೌಖ್ಯವೂ ಸಂತತಿಯ ಸೌಖ್ಯವೂ ಲಭಿಸುತ್ತದೆ. ಮಧ್ಯಮ ವಯಸ್ಸಿನಲ್ಲಿ ಆರ್ಥಿಕ ಪರಿಸ್ಥಿತಿಗೆ ಗಂಡಾಂತರವಾಗುವದೆಂದರೆ ದ್ವಿತೀಯ, ಚತುರ್ಥ, ಲಾಭ, ಈ ಸ್ಥಾನಗಳಲ್ಲಿ ಮಾತ್ರ ಅಶುಭಯೋಗಗಳಿರುತ್ತವೆ.

(ಕ) ಧನೇಶ, ಲಾಭೇಶ ಸುಖೇಶರು ನಿರ್ಬಲರಾಗಿದ್ದರೆ ಮಾತ್ರ ಪ್ರೌಢಾವಸ್ಥೆಯಲ್ಲಿ ವೈಧವ್ಯ ಪ್ರಾಪ್ತಿ ಆಗುತ್ತದೆ.

(ಡ) ಆಕಸ್ಮಿಕ ಹಾಗೂ ಮಧ್ಯಮ ವಯಸ್ಸಿನಲ್ಲಿ ಆರ್ಥಿಕ ಗಂಡಾಂತರ ತರುವಂಥ ಗ್ರಹಗಳೆಂದರೆ ರವಿ, ಮಂಗಳ, ಶನಿ ಇವರ ಅಶುಭಯೋಗ ಅಥವಾ ಅಶುಭ ಸಂಬಂಧ ಧನಸ್ಥಾನ, ಸುಖಸ್ಥಾನದಲ್ಲಿದ್ದರೆ,

(ಇ) ಶನಿ-ಮಂಗಳ, ರವಿ-ಶನಿ, ರಾಹು-ಚಂದ್ರ ಇವರ ಯುತಿಗಳು ೨, ೪, ೧೧ ಈ ಯಾವದೇ ಸ್ಥಾನದಲ್ಲಿದ್ದರೆ

(ಈ) ರವಿ, ಮಂಗಳ, ಚಂದ್ರ ಇವರಲ್ಲಿ ಯಾರಿಬ್ಬರ ಯುತಿಯು ಧನಸ್ಥಾನ, ಚತುರ್ಥಸ್ಥಾನ, ಲಾಭಸ್ಥಾನ ಈ ಯಾವದೊಂದು ಸ್ಥಾನದಲ್ಲಿದ್ದು, ಗೋಚರೀಯ ಶನಿಯ ಪರಿಭ್ರಮಣ ಇವರ ಮೇಲಿಂದ ಆಗುತ್ತಿದ್ದರೆ

(ಉ) ನಿರ್ಬಲನಾದ ರವಿಯು ಚತುರ್ಥ ಇಲ್ಲವೇ ಅಷ್ಟಮದಲ್ಲಿದ್ದರೆ

(ಊ) ಶನಿ, ಮಂಗಳರ ಷಡಾಷ್ಟಕ ಯಾವದೊಂದು ಸ್ಥಾನದಲ್ಲಿದ್ದರೆ.

ಮೇಲೆ ತೋರಿಸಿದ ಯೋಗಗಳಿದ್ದ ಸ್ತ್ರೀಯರಿಗೆ ಪ್ರೌಢಾವಸ್ಥೆಯ ವೈಧವ್ಯ ಪ್ರಾಪ್ತ ಆಗುತ್ತದೆ.

## ನೈಸರ್ಗಿಕ ವೈಧವ್ಯ

ವೈಧವ್ಯದ ನಾಲ್ಕನೇ ಪ್ರಕಾರವಾದ ಇಂಥ ಕುಂಡಲಿಗಳ ಆಯುಷ್ಯ ಸ್ಥಾನವನ್ನು ನೋಡಬೇಕು. ಪತಿ-ಪತ್ನಿಯರ ಕುಂಡಲಿಗಳಲ್ಲಿ ಯಾರ ಆಯುಷ್ಯಸ್ಥಾನ ಬಲವಿರುವದೋ ಅವರು ಬಹಳ ದಿನಗಳ ವರೆಗೆ ಬದುಕುತ್ತಾರೆ.

ಇಂಥ ಸ್ತ್ರೀಯರ ಕುಂಡಲೀಯಲ್ಲಿ ಅಷ್ಟಮ, ಭಾಗ್ಯ ಷಷ್ಠ, ದ್ವಾದಶ ಈ ಸ್ಥಾನಗಳನ್ನು ಪರಿಶೀಲಿಸಬೇಕು.

(ಅ) ಅನೇಕ ಕ್ರೂರ ಗ್ರಹಗಳು ಅಷ್ಟಮದಲ್ಲಿದ್ದರೆ. (ಬ) ದ್ವಿತೀಯದಲ್ಲಿ ಕೇತು ಅಷ್ಟಮದಲ್ಲಿ ರಾಹು ಇದ್ದರೆ. (ಕ) ಕ್ಷೀಣ ಚಂದ್ರನು ೬,೮,೧೨ ಈ ಯಾವದೊಂದು ಸ್ಥಾನದಲ್ಲಿದ್ದರೆ. (ಡ) ಅಷ್ಟಮೇಶನು ನಿರ್ಬಲನಾಗಿ ಷಷ್ಠ ಇಲ್ಲವೆ ದ್ವಾದಶದಲ್ಲಿದ್ದರೆ. (ಇ) ಶನಿ-ಮಂಗಳ, ರವಿ ಶನಿ, ಚಂದ್ರ-ರಾಹು, ರವಿ-ಚಂದ್ರ ಇವರ ಯುತಿಗಳು ೬, ೮, ೧೨ ಈ ಯಾವದೊಂದು ಸ್ಥಾನದಲ್ಲಿದ್ದರೆ. (ಈ) ರವಿ, ಚಂದ್ರ, ಮಂಗಳ ಇವರಲ್ಲಿ ಯಾರಿಬ್ಬರು ೬, ೮, ೧೨ ಈ ಯಾವದೇ ಸ್ಥಾನದಲ್ಲಿದ್ದು ಗೋಚರೀಯ ಶನಿಯು ಪರಿಭ್ರಮಣ ಇವರ ಮೇಲಿಂದ ಆಗುತ್ತಿದ್ದರೆ.

ಮೇಲೆ ತೋರಿಸಿದ ಯೋಗಗಳು ಪತಿ-ಪತ್ನಿಯರಲ್ಲಿ ಯಾರಲ್ಲಿ ಬಹಳ ಇರುವದೋ ಅವರು ಅಭಾಗಿಗಳಿರುತ್ತಾರೆ.

## ಘಟಸ್ಫೋಟ (ಸೋಡಚೀಟಿ) ಯೋಗಗಳು

ಪತಿ-ಪತ್ನಿಯರಲ್ಲಿ ಬಡಿದಾಟ, ವೈಮನಸ್ಯಾಗಿ ಸ್ತ್ರೀಯರು ಪತಿಯಿಂದ ಘಟಸ್ಫೋಟ ಮಾಡಿಸಿಕೊಳ್ಳುತ್ತಾರೆ ಅಥವಾ ಘಟಸ್ಫೋಟ ಮಾಡುತ್ತಾರೆ ಇಂಥ ಸ್ತ್ರೀಯರ ಕುಂಡಲಿಯಲ್ಲಿರುವ ಅಶುಭ ಯೋಗಗಳನ್ನು ಕೆಳಗೆ ಕೊಡಲಾಗಿದೆ

೧) ಬಲಾತ್ಯ ಮಂಗಳನು ಲಗ್ನ ಅಥವಾ ಸಪ್ತಮದಲ್ಲಿದ್ದರೆ.

೨) ಅನೇಕ ಪಾಪಗ್ರಹಗಳು ಸಪ್ತಮದಲ್ಲಿದ್ದರೆ.

೩) ಸಪ್ತಮಾಧಿಪತಿಯು ನಿರ್ಬಲನಾಗಿ ೬, ೮, ೧೨ ಈ ಸ್ಥಾನ-ಗಳಲ್ಲಿದ್ದರೆ.

೪) ಶುಕ್ರ, ಮಂಗಳರ ಯುತಿ ಪಂಚಮಸ್ಥಾನದಲ್ಲಿದ್ದರೆ.

೫) ಕರ್ಕ, ವೃಶ್ಚಿಕ, ಮೀನ ಈ ರಾಶಿಗಳ ಶುಕ್ರ, ಮಂಗಳರ ಯುತಿ ೫, ೭, ೮, ೧೨ ಈ ಯಾವದೊಂದು ಸ್ಥಾನಗಳಲ್ಲಿದ್ದರೆ.

೬) ಶನಿ, ಮಂಗಳರ ಸಮಸಪ್ತಕವು ಲಗ್ನ ಹಾಗೂ ಸಪ್ತಮದಲ್ಲಿದ್ದರೆ.

೭) ಶನಿ, ಮಂಗಳ ಈರ್ವರ ದೃಷ್ಟಿ ಸಪ್ತಮದಲ್ಲಿದ್ದರೆ.

೮) ಪಂಚಮದಲ್ಲಿ ಶನಿಯಿದ್ದು, ಸಪ್ತಮದಲ್ಲಿ ಮಂಗಳನಿದ್ದರೆ ಅಥವಾ ಚತುರ್ಥದಲ್ಲಿ ಮಂಗಳನಿದ್ದು, ಸಪ್ತಮದಲ್ಲಿ ಶನಿ ಇದ್ದರೆ.

೯) ಚತುರ್ಥ, ಪಂಚಮ, ಸಪ್ತಮ ಈ ಸ್ಥಾನಗಳಲ್ಲಿ ಅಶುಭ ಯೋಗವಿದ್ದರೆ.

೧೦) ಸ್ತ್ರೀಯರ ಕುಂಡಲಿಯಲ್ಲಿ ರವಿ, ಮಂಗಳರು ಪ್ರಬಲರಿದ್ದರೆ.

೧೧) ಲಗ್ನೇಶ ಹಾಗೂ ಸಪ್ತಮೇಶರ ಷಡಾಷ್ಟಕ ಯೋಗವಿದ್ದರೆ.

೧೨) ಚಂದ್ರ ಹಾಗೂ ಲಗ್ನೇಶರ ಷಡಾಷ್ಟಕ ಯೋಗವಿದ್ದರೆ.

೧೩) ಪತಿ ಪತ್ನಿ ಈರ್ವರ ಕುಂಡಲಿಯಲ್ಲಿ ಪುರುಷಗ್ರಹಗಳೇ ಪ್ರಬಲರಿದ್ದರೆ.

೧೪) ಸಪ್ತಮಾಧೀಶನು ನಿರ್ಬಲನಿದ್ದು ಸಪ್ತಮದಲ್ಲಿ ಮಂಗಳನಿದ್ದರೆ.

೧೫) ಶನಿ, ಮಂಗಳರ ಷಡಾಷ್ಟಕವಿದ್ದರೆ.

೧೬) ಚತುರ್ಥದಲ್ಲಿ ಮಂಗಳ ಪಂಚಮದಲ್ಲಿ ಶನಿ ಸಪ್ತಮದಲ್ಲಿ ರಾಹು ಇದ್ದರೆ.

ಮೇಲೆ ತೋರಿಸಿದ ಅಶುಭ ಯೋಗಗಳಿದ್ದರೆ ಪತಿ-ಪತ್ನಿಯರ ಜೀವನ ಸರಿಯಾಗಿ ಸಾಗದೆ ಘಟಸ್ಫೋಟ ಮಾಡಿಕೊಳ್ಳುವ ಸಂಭವವಿರುತ್ತದೆ.

## ಸಪ್ತಮದಲ್ಲಿರುವ ಗ್ರಹಗಳ ಪರಿಣಾಮ

ಸಪ್ತಮೇಶ ಹಾಗೂ ಸಪ್ತಮಸ್ಥಾನದಲ್ಲಿರುವ ಗ್ರಹಗಳು ವೈವಾಹಿಕ ಜೀವನದಲ್ಲಿ ಪರಿಣಾಮವನ್ನುಂಟುಮಾಡುತ್ತವೆ. ಏಕೆಂದರೆ ಸ್ತ್ರೀಯರಿಗೆ ವಿವಾಹವಾದಮೇಲೆಯೇ ಅವರ ನಿಜವಾದ ಜೀವನ ಪ್ರಾರಂಭವಾಗುತ್ತದೆ. ಮತ್ತೂ ವೈವಾಹಿಕ ಜೀವನದ ಬಗ್ಗೆ ನೋಡಬೇಕಾದರೆ ನಾವು ಸಪ್ತಮಸ್ಥಾನ ಸಪ್ತಮಾಧೀಶ ಸಪ್ತಮಸ್ಥಾನದಲ್ಲಿರುವ ಗ್ರಹ ಇವುಗಳ ಮೇಲೆಯೇ ಅವಲಂಬಿಸಿರುತ್ತದೆ.

ಮೂಲ ಕುಂಡಲಿಯಲ್ಲಿ ರವಿ, ಗುರುಗಳ ಸಂಬಂಧವಿದ್ದು, ಮೇಷ ರಾಶಿಯ ಶನಿಯು ಸಪ್ತಮದಲ್ಲಿದ್ದರೆ ಎಂದು ತಿಳಿಯಿರಿ. ರವಿ, ಗುರುಗಳ ಸಂಬಂಧದಿಂದ ಪತಿಯು ಅಧಿಕಾರಿಯೂ ವಿದ್ಯಾಸಂಪನ್ನನೂ ಇರಬಹುದು

ಆದರೆ ಸಪ್ತಮದಲ್ಲಿ ಶನಿ ಮಂಗಳರಂಥ ಗ್ರಹಗಳಿದ್ದರೆ ಪ್ರೇಮ, ಆನಂದ ಮುಂತಾದ ಸುಖ ಹೇಗೆ ಸಿಗುತ್ತದೆ ? (ಭಿನ್ನಾಭಿಪ್ರಾಯ).

ಇನ್ನು ಸಪ್ತಮೇಶ ಹಾಗೂ ಸಪ್ತಮ ಸ್ಥಾನದಲ್ಲಿರುವ ಗ್ರಹಗಳ ವಿಚಾರ ಮಾಡಬೇಕು. ಉದಾ : ಸಪ್ತಮಸ್ಥಾನದಲ್ಲಿ ಗುರು, ಶುಕ್ರ, ಚಂದ್ರರಂಥ ಗ್ರಹಗಳಿವೆ ಅಂತಾ ತಿಳಿಯಿರಿ. ಆದರೆ ಸಪ್ತಮೇಶನು ಅಶುಭಗ್ರಹವಿದ್ದು, ಬಲಹೀನನಿದ್ದಾನೆ ಎಂದು ಕಲ್ಪಿಸಿರಿ. ಮನೆಯ ಯಜಮಾನನು ದುಃಖದಲ್ಲಿಯೂ ಬಂಧನದಲ್ಲಿಯೂ ಇದ್ದ ಸ್ಥಿತಿಯಲ್ಲಿ ಮನೆಗೆ ಬಂದ ಸಿರಿವಂತ ಬೀಗನಿಗೆ ಆದರ ಸತ್ಕಾರ ಸಿಗಲು ಹೇಗೆ ಸಾಧ್ಯ ?

ಇದರಂತೆ ಸಪ್ತಮಸ್ಥಾನದಲ್ಲಿ ಕುಂಭ ರಾಶಿಯಿದ್ದು ಅಲ್ಲಿಯೇ ಗುರು ಇದ್ದಾನೆ ಎಂದು ತಿಳಿಯಿರಿ ಹಾಗೂ ಶನಿಯು ಮೇಷ ಅಥವಾ ಮಿಥುನ ರಾಶಿಯಲ್ಲಿ ಇದ್ದಾನೆ ಒಂದು ತಿಳಿಯಿರಿ. ಇಲ್ಲಿ ಗುರು ಸಪ್ತಮದಲ್ಲಿರುವ ಕಾರಣ ಇಂಥ ಸ್ತ್ರೀಯರು ವಿವಾಹವಾದ ಬಳಿಕ ಕೆಲವು ವರ್ಷದವರೆಗಾದರೂ ಸುಖದಿಂದ ಕಾಲ ಕಳೆಯುತ್ತಾರೆ. ಇದರಂತೆ ಮುಂದೆ ಸಪ್ತಮೇಶನಾದ ಶನಿಯು ಮೇಷದಲ್ಲಿರುವ ಕಾರಣ ಕೆಲವು ವರ್ಷ ದುಃಖದಿಂದ ಕಾಲ ಕಳೆಯುತ್ತಾರೆ.

ಆದುದರಿಂದ ಸಪ್ತಮ ಸ್ಥಾನದಲ್ಲಿರುವ ಗ್ರಹ ಹಾಗೂ ಸಪ್ತಮಾಧೀಶನ ಸ್ಥಿತಿ ಎಲ್ಲವನ್ನು ಸೂಕ್ಷ್ಮವಾಗಿ ಪರಿಶೀಲಿಸಿದ ನಂತರ ವೈವಾಹಿಕ ಜೀವನದ ಬಗ್ಗೆ ಹೇಳಲಾಗುವದು.

ರವಿ :— ಸ್ತ್ರೀಯರ ಕುಂಡಲಿಯಲ್ಲಿ ರವಿಯು ಸಪ್ತಮಸ್ಥಾನದಲ್ಲಿ ಇದ್ದರೆ ಅವರ ಪತಿಯು ಅಭಿಮಾನಿಯೂ ಉದಾರಿಯೂ ಮಹತ್ವಾಕಾಂಕ್ಷಿಯೂ ಇರುತ್ತಾನೆ. ಆದರೆ ರವಿಯು ಪಾಪಗ್ರಹ ದೃಷ್ಟಿಯಲ್ಲಿದ್ದರೆ ಮಾತ್ರ ದುರ್ಗುಣಗಳಿರುತ್ತವೆ.

ರವಿಯು ಸಪ್ತಮಸ್ಥಾನದಲ್ಲಿರುವ ಸ್ತ್ರೀಯರ ಲಗ್ನ ತಡವಾಗಿ ಆಗುತ್ತದೆ. ಅಗ್ನಿ ಹಾಗೂ ಜಲರಾಶಿಯ ರವಿಯು ಲಗ್ನದಲ್ಲಿದ್ದ ಸ್ತ್ರೀಯರಿಗೆ ಅಧಿಕಾರಿಪತಿ ಸಿಗುವನು. ಹಾಗೂ ಇಂಥ ಸ್ತ್ರೀಯರು ಪತಿಯೊಂದಿಗೆ ಸಾಮಾಜಿಕ ಹಾಗೂ ರಾಜಕೀಯ ಕೆಲಸದಲ್ಲಿ ನೆರವಾಗುತ್ತಾರೆ. ನಿರ್ಬಲ

ರವಿ ಸಪ್ತಮದಲ್ಲಿದ್ದ ಸ್ತ್ರೀಯರ ವಿವಾಹ ತಡವಾಗಿ ಆಗುವದಲ್ಲದೆ ಪತಿ–ಪತ್ನಿಯರಲ್ಲಿ ಭಿನ್ನಾಭಿಪ್ರಾಯವಿರುತ್ತದೆ.

ಅಗ್ನಿ ರಾಶಿಯ ರವಿಯೂ ಸಪ್ತಮದಲ್ಲಿರುವ ಸ್ತ್ರೀಯರ ಸಾಂಪತ್ತಿಕ ಸ್ಥಿತಿ ಚೆನ್ನಾಗಿರುತ್ತದೆ.

ಚಂದ್ರ :— ಸ್ತ್ರೀಯರ ಕುಂಡಲಿಯಲ್ಲಿ ಚಂದ್ರನು ಸಪ್ತಮದಲ್ಲಿದ್ದರೆ ಅವರ ಇಚ್ಛೆಯಂತೆ ಅಥವಾ ಅವರ ಸಮ್ಮತಿಯಂತೆ ವಿವಾಹವಾಗುತ್ತದೆ. (Love Marriage). ಚಂದ್ರನು ಸಪ್ತಮದಲ್ಲಿದ್ದರೆ ಸ್ತ್ರೀಯರ ವಿವಾಹ ಬಹುಬೇಗ ಆಗುತ್ತದೆ. ಆದರೆ ಪತಿಯು ಚಂಚಲ ಮನಸ್ಸಿನವನು.

ಚಂದ್ರನು ಸಪ್ತಮದಲ್ಲಿರುವ ಸ್ತ್ರೀಯರಿಗೆ ಪತಿಯೊಂದಿಗೆ ಪ್ರವಾಸ ಬಹಳವಾಗುತ್ತದೆ ಅಥವಾ ಯಾವಾಗಲೂ ಪ್ರವಾಸದ ನೌಕರಿ ಮಾಡುವ ಪತಿಯನ್ನು ಪಡೆಯುತ್ತಾರೆ. (T. C. or Railway Servent) ಚರ–ರಾಶಿಯ ಚಂದ್ರನು ಸಪ್ತಮದಲ್ಲಿದ್ದ ಸ್ತ್ರೀಯರದಂತೂ ಪ್ರವಾಸಮಯ ಜೀವನವಿರುತ್ತದೆ.

ಬಲಾಢ್ಯ ಚಂದ್ರನು ಸಪ್ತಮದಲ್ಲಿದ್ದ ಸ್ತ್ರೀಯರ ಸಾಂಪತ್ತಿಕ ಸೌಖ್ಯ ಹಾಗೂ ಪತಿಯ ಸೌಖ್ಯ ಉತ್ತಮವಿರುತ್ತದೆ. ಸ್ತ್ರೀ ರಾಶಿಯ ಚಂದ್ರನು ಸಪ್ತಮದಲ್ಲಿದ್ದ ಸ್ತ್ರೀಯರ ವಿವಾಹ ಬಹಳ ಚಿಕ್ಕ ವಯಸ್ಸಿನಲ್ಲಿ ಆಗುತ್ತದೆ. ನಿರ್ಬಲ ಚಂದ್ರನು ಸಪ್ತಮದಲ್ಲಿದ್ದ ಸ್ತ್ರೀಯರು ಪತಿಯೊಂದಿಗೆ ಹೊಂದಿಕೊಂಡು ಹೋಗಲಾರರು. ಅಗ್ನಿ ರಾಶಿಯ ಚಂದ್ರನು ಸಪ್ತಮದಲ್ಲಿದ್ದ ಸ್ತ್ರೀಯರೂ ವಿದ್ಯಾಸಂಪನ್ನರೂ ಇದ್ದು ಸ್ವಾವಲಂಬಿಗಳಿರುತ್ತಾರೆ.

ಮಂಗಳ :— ಯಾವದೇ ರಾಶಿಯ ಮಂಗಳನು ಸಪ್ತಮದಲ್ಲಿದ್ದರೂ ಅಂಥ ಸ್ತ್ರೀಯರ ವಿವಾಹವು ತಡವಾಗಿ ಆಗುತ್ತದೆ. ಪುರುಷರ ಕುಂಡಲಿಯ ಸಪ್ತಮಸ್ಥಾನದಲ್ಲಿಯ ಮಂಗಳನಕಿಂತ ಸ್ತ್ರೀಯರ ಕುಂಡಲಿಯ ಸಪ್ತಮ–ಸ್ಥಾನದ ಮಂಗಳನು ಅಷ್ಟೊಂದು ಅಶುಭದಾಯಕನಾಗಲಾರನೆಂದು ನಮ್ಮ ಅಭಿಪ್ರಾಯವಿದೆ. ಏಕೆಂದರೆ ಸ್ತ್ರೀಯರ ಸಪ್ತಮದಲ್ಲಿ ಮಂಗಳನಿದ್ದರೆ ಪತಿಯು ಸದೃಢನೂ ಸಾಹಸಿಯೂ ಅಸಾಮಾನ್ಯ ಮಂತ್ರದ ಗುಣಗಳಿರುವ ಪತಿಯು ದೊರಕುವನು. ಇದರಂತೆ ಪುರುಷರ ಕುಂಡಲಿಯಲ್ಲಿ ಸಪ್ತಮ

ಸ್ಥಾನದಲ್ಲಿ ಮಂಗಳನಿದ್ದರೂ ಮೇಲೆ ತೋರಿಸಿದ ಗುಣಗಳ ಸತಿಯು ದೊರಕುವಳು. ಬಲಾಢ್ಯ ಮಂಗಳನು ಸಪ್ತಮದಲ್ಲಿದ್ದ ಸ್ತ್ರೀಯರಿಗೆ ಕಾರ್ಖಾನೆ ಅಥವಾ ಯಂತ್ರಗಳಲ್ಲಿ ಕೆಲಸ ಮಾಡುವ ಪತಿ ದೊರಕುವನು.

ಪತಿ-ಪತ್ನಿ ಇವರ್ವರ ಲಗ್ನದಲ್ಲಿ ಮಂಗಳನಾಗಲಿ ಇವರ್ವರ ಕುಂಡಲಿಯಲ್ಲಿ ಸಪ್ತಮಸ್ಥಾನದಲ್ಲಿ ಮಂಗಳನಾಗಲಿ ಇದ್ದರೆ ಇಂಥ ಜೋಡಿಗಳ ಜೀವನ ಸರಿಯಾಗಿ ಸಾಗಲಾರದು.

ಬುಧ:— ಬುಧನೊಬ್ಬನೇ ಬಲಾಢ್ಯನಿದ್ದು, ಸಪ್ತಮದಲ್ಲಿದ್ದರೆ ಇಂಥ ಸ್ತ್ರೀಯರಿಗೆ ಬುದ್ಧಿವಂತನೂ ಚಾಣಾಕ್ಷನೂ ಧೂರ್ತನೂ ಬಹಳ ಮಾತುಗಾರನೂ ಆದ ಪತಿಯು ದೊರಕುವನು. ಬಲಾಢ್ಯ ಬುಧನೊಬ್ಬನೇ ಸಪ್ತಮದಲ್ಲಿದ್ದರೆ ಸ್ತ್ರೀಯರ ಪ್ರೇಮ ವಿವಾಹವು ಆಗುತ್ತದೆ. ಹಾಗೂ ಇಂಥ ಸ್ತ್ರೀಯರ ಪತಿಯು ಧನವಂತವಿದ್ದು ಸ್ವತಂತ್ರ ಉದ್ಯೋಗಿಯು ಇರುತ್ತಾನೆ.

ಮಿಥುನ ಕನ್ಯಾರಾಶಿಗಳು ಸಪ್ತಮದಲ್ಲಿದ್ದು ಗುರು ಬುಧರ, ಯುತಿ ಇದ್ದ ಸ್ತ್ರೀಯರಿಗೆ ವಿದ್ಯಾಸಂಪನ್ನ ಪತಿಯಾಗಲಿ ಪ್ರೊಫೆಸರ, ಶಿಕ್ಷಕ ಮುಂತಾದ ಶಿಕ್ಷಣ ಖಾತೆಯಲ್ಲಿ ಕೆಲಸಮಾಡು ಪತಿಯಾಗಲಿ ದೊರಕುತ್ತಾನೆ.

ಗುರು:— ಯಾವದೇ ರಾಶಿಯ ಗುರು ಸಪ್ತಮದಲ್ಲಿದ್ದ ಸ್ತ್ರೀಯರ ವಿವಾಹವು ಬೇಗ ಆಗುತ್ತದೆ. ಬಲಾಢ್ಯ ಗುರು ಸಪ್ತಮದಲ್ಲಿದ್ದ ಸ್ತ್ರೀಯರ ವಿವಾಹದ ನಂತರ ಭಾಗ್ಯೋದಯವಾಗುತ್ತದೆ.

ಬಲಾಢ್ಯ ಗುರು ಸಪ್ತಮದಲ್ಲಿದ್ದ ಸ್ತ್ರೀಯರ ಪತಿಯು ವಿದ್ಯಾಸಂಪನ್ನನೂ ಶ್ರೀಮಂತನೂ ರೂಪವಂತನೂ ಪ್ರಖ್ಯಾತನೂ ಇರುತ್ತಾನೆ.

ಶುಕ್ರ:— ಸ್ತ್ರೀಯರ ಕುಂಡಲಿಯಲ್ಲಿ ಶುಕ್ರನು ಸಪ್ತಮದಲ್ಲಿರುವದು ಅನುಕೂಲವು ಇಂಥ ಸ್ತ್ರೀಯರ ಪತಿಯು ರೂಪವಂತನೂ ಕುಲೀನನೂ ಗುಣವಂತನೂ ಇದ್ದು ಪತ್ನಿಯೊಂದಿಗೆ ಹೊಂದಿಕೊಂಡು ಹೋಗಬಲ್ಲವನೂ ಇರುತ್ತಾನೆ

ಬಲಾಢ್ಯ ಶುಕ್ರನು ಸಪ್ತಮದಲ್ಲಿದ್ದ ಸ್ತ್ರೀಯು ಮುಕಿ ಇರಲಿ ಕುರೂಪಿ ಇರಲಿ ಬಡವನಿರಲಿ ಹೇಗೆ ಇದ್ದರೂ ಅವಳ ಪತಿಯು ಮಾತ್ರ ರೂಪವಂತನೂ

ಗುಣವಂತನೂ ಶ್ರೀಮಂತನೂ ಇದ್ದು, ಪತ್ನಿಯೊಂದಿಗೆ ಹೊಂದಿಕೊಂಡು ಹೋಗಬಲ್ಲನು. ಶುಕ್ರನು ಸಪ್ತಮದಲ್ಲಿದ್ದ ಸ್ತ್ರೀಯರ ಪತಿಯು ಭೋಗ ವಿಲಾಸಿ ಇರುವನು. ನಿರ್ಬಲ ಶುಕ್ರನು ಸಪ್ತಮದಲ್ಲಿದ್ದು ಚಂದ್ರ, ಮಂಗಳರ ದೃಷ್ಟಿ ಇಲ್ಲವೆ ಯುತಿಯಲ್ಲಿ ಇದ್ದರೆ ಅಂಥ ಸ್ತ್ರೀಯರ ವೈವಾಹಿಕ ಜೀವನ ಸುಗಮವಾಗಿ ಸಾಗಲಾರದು.

ಶನಿ :— ಮಕರ, ತುಲಾ, ಕುಂಭ ಈ ರಾಶಿಗಳ ಹೊರತಾಗಿ ಯಾವದೇ ರಾಶಿಯ ಶನಿಯು ಸ್ತ್ರೀಯರ ವೈವಾಹಿಕ ಜೀವನಕ್ಕೆ ಹಾನಿ-ದಾಯಕನು.

ರಾಹು-ಕೇತು :— ಮಿಥುನ, ಕನ್ಯಾ, ರಾಶಿಗಳ ರಾಹು. ಧನು, ಮೀನಗಳ ಕೇತುವಿನ ಹೊರತಾಗಿ ಯಾವದೇ ರಾಶಿಯ ರಾಹು. ಕೇತುಗಳು ಸ್ತ್ರೀಯರ ವೈವಾಹಿಕ ಜೀವನಕ್ಕೆ ಅಶುಭದಾಯಕರು.

### ಭಾವೇಶನ ಫಲ

೧) ಸಪ್ತಮೇಶನು ಲಗ್ನದಲ್ಲಿದ್ದ ಸ್ತ್ರೀಯರ ವಿವಾಹವು ಚಿಕ್ಕ ವಯಸ್ಸಿನಲ್ಲಿಯೇ ಆಗುವದಲ್ಲದೇ ಪತಿ ಪತ್ನಿಯರು ಹೊಂದಿಕೊಂಡು ಹೋಗ-ಬಲ್ಲರು.

೨) ಸಪ್ತಮೇಶನು ಧನಸ್ಥಾನದಲ್ಲಿದ್ದ ಸ್ತ್ರೀಯರ ಸಾಂಪತ್ತಿಕ ಸ್ಥಿತಿ ಉತ್ತಮವಿರುತ್ತದೆ.

೩) ಸಪ್ತಮೇಶನು ತೃತೀಯದಲ್ಲಿದ್ದರೆ ವೈವಾಹಿಕ ಜೀವನ ತೊಂದರೆ ದಾಯಕವು

೪) ಸಪ್ತಮೇಶನು ಶುಭಗ್ರಹವಿದ್ದು, ಚತುರ್ಥದಲ್ಲಿದ್ದರೆ ಗೃಹಸೌಖ್ಯ ಲಭಿಸುವದು.

೫) ಸಪ್ತಮೇಶನು ಪಂಚಮದಲ್ಲಿದ್ದ ಸ್ತ್ರೀಯರ ವಿವಾಹ ಬೇಗ ಆಗುವದಲ್ಲದೆ ಪತಿಯ ಹಾಗೂ ಸೂತರ ಸೌಖ್ಯ ಸಿಗುತ್ತದೆ ಮತ್ತು ಸಾಂಪತ್ತಿಕ ಸ್ಥಿತಿ ಉತ್ತಮವಿರುತ್ತದೆ.

೬) ಸಪ್ತಮೇಶನು ಶುಭಗ್ರಹವಿದ್ದು, ಷಷ್ಠದಲ್ಲಿದ್ದರೆ ಮಾತುಲ ಸಹಾಯ ಸಿಗುತ್ತದೆ. ಪಾಪಗ್ರಹವಿದ್ದರೆ ವಿವಾಹ ತಡವಾಗಿ ಆಗುತ್ತದೆ.

೭) ಸಪ್ತಮೇಶನು ಸಪ್ತಮದಲ್ಲಿರುವದು ಎಲ್ಲ ರೀತಿಯಿಂದಲೂ ಲಾಭದಾಯಕವು.

೮) ಸಪ್ತಮೇಶನು ಅಷ್ಟಮದಲ್ಲಿದ್ದರೆ ವೈವಾಹಿಕ ಜೀವನಕ್ಕೆ ತೊಂದರೆದಾಯಕವು.

೯) ಸಪ್ತಮೇಶನು ಭಾಗ್ಯದಲ್ಲಿದ್ದರೆ ಎಲ್ಲ ರೀತಿಯಿಂದಲೂ ಲಾಭದಾಯಕವು.

೧೦) ಸಪ್ತಮೇಶನು ದಶಮದಲ್ಲಿದ್ದ ಸ್ತ್ರೀಯರ ಸಾಂಪತ್ತಿಕ ಸ್ಥಿತಿ ಉತ್ತಮವಿರುತ್ತದೆ.

೧೧) ಸಪ್ತಮೇಶನು ಲಾಭದಲ್ಲಿದ್ದ ಸ್ತ್ರೀಯರು ಭಾಗ್ಯಶಾಲಿಗಳಿರುತ್ತಾರೆ.

೧೨) ಸಪ್ತಮೇಶನು ವ್ಯಯದಲ್ಲಿರುವ ಸ್ತ್ರೀಯರು ದುರ್ಭಾಗ್ಯಗಳಿರುತ್ತಾರೆ.



# ಅಷ್ಟಮಸ್ಥಾನ

ಅಷ್ಟಮಸ್ಥಾನ ಅಥವಾ ಮೃತ್ಯುಸ್ಥಾನ ಈ ಸ್ಥಾನದಿಂದ ಮೃತ್ಯು, ಅಪಮೃತ್ಯು, ತೀವ್ರ ರೋಗ, ಆಕಸ್ಮಿತರೋಗ, ಗುಪ್ತಸ್ಥಾನ, ಸಟ್ಟಾ, ಲಾಟರಿ ಭೂಗತದ್ರವ್ಯ, ಮುಂತಾದವುಗಳಿಂದ ಆಕಸ್ಮಿಕ ಧನಲಾಭ, ಆಧ್ಯಾತ್ಮಜ್ಞಾನ ಈ ಎಲ್ಲ ಸಂಗತಿಗಳನ್ನು ಹೇಗೆ ಪರಿಶೀಲಿಸಬೇಕೆಂಬುದು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ

ಈ ಸ್ಥಾನದ ಕಾರಕಗ್ರಹವೆಂದರೆ ಶನಿಯು. ಯಾವದೇ ರಾಶಿಯ ಶನಿಯು ಅಷ್ಟಮದಲ್ಲಿದ್ದರೂ ಆಯುಷ್ಯ ವೃದ್ಧಿಕಾರಕನೆ ( ಶನಿಯ ಬಲಾಬಲಗಳಂತೆ). ಅಷ್ಟಮೇಶನು ಕ್ರೂರ ಗ್ರಹನಿದ್ದು ಅಷ್ಟಮದಲ್ಲಿ ಇಲ್ಲವೆ ಬಲಾಢ್ಯನಾಗಿ ಕೇಂದ್ರದಲ್ಲಿ ಇದ್ದರೆ ಆಯುಷ್ಯವರ್ಧಕನು ಅಷ್ಟಮೇಶನು ೩, ೬, ೧೨ ಈ ಸ್ಥಾನಗಳಲ್ಲಿದ್ದರೆ ಅಲ್ಪಾಯುಷ್ಯ ದ್ಯೋತಕವು. ಅಷ್ಟಮೇಶನು ೨, ೭, ೧೧ನೇ ಸ್ಥಾನಗಳಲ್ಲಿದ್ದರೆ ಮಧ್ಯಮ ಆಯುಸ್ಸು.

ಆಯುಷ್ಯದ ಬಗ್ಗೆ ಹೇಳಬೇಕಾದರೆ ಕೇವಲ ಅಷ್ಟಮಸ್ಥಾನದಿಂದ ಹೇಳಲು ಬರುವದಿಲ್ಲ ಅಷ್ಟಮಸ್ಥಾನ, ಅಷ್ಟಮೇಶ, ಶನಿ, ಲಗ್ನ, ರವಿ ಇವರ ಬಲಾಬಲಗಳನ್ನು ವಿಚಾರಿಸಬೇಕು. ಎಂಟು ವರ್ಷದ ವರೆಗೆ ಚಂದ್ರನ ಬಲಾಬಲಗಳನ್ನು ಕೂಡ ವಿಚಾರಿಸಬೇಕಾಗುವದು.

## ಪತಿಯ ಸಾಂಪತ್ತಿಕ ಸ್ಥಿತಿ

ಅಷ್ಟಮೇಶನು ಪಾಪಗ್ರಹನಿದ್ದು, ಲಗ್ನದಲ್ಲಿ ಇದ್ದರೆ ಅಥವಾ ಗುರು, ಶುಕ್ರ, ಚಂದ್ರ ಇವರೊಂದಿಗೆ ತ್ರಿಕೋಣಯೋಗ ಮಾಡುತ್ತಿದ್ದರೆ ಅತ್ತೆ ಮಾವಂದಿರ ಸಾಂಪತ್ತಿಕ ಸ್ಥಿತಿಯು ಚೆನ್ನಾಗಿರುತ್ತದೆ. ರವಿ ಮಂಗಳ, ಶನಿ ಇವರು ಅಷ್ಟಮೇಶರಿದ್ದು, ಬಲಿಷ್ಠರಾಗಿ ಶುಭಗ್ರಹಗಳ ದೃಷ್ಟಿಯಲ್ಲಿದ್ದರೆ ಸ್ಥಾವರ ಆಸ್ತಿಯು ಸಿಗುತ್ತದೆ. ಚಂದ್ರ, ಗುರು, ಶುಕ್ರ ಇವರು ಅಷ್ಟಮೇಶರಿದ್ದು ಬಲಾಢ್ಯರಾಗಿ ತ್ರಿಕೋಣದಲ್ಲಿದ್ದರೆ ರೋಖ ಹಣ ಇಲ್ಲವೆ ಜಂಗಮ

ಆಸ್ತಿಯು ಪ್ರಾಪ್ತವಾಗುತ್ತದೆ. ಹಾಗೂ ಪತಿಯು ಶ್ರೀಮಂತನಿರುತ್ತಾನೆ.

ಗುರು, ಶುಕ್ರ, ಚಂದ್ರರು ಸಪ್ತಮಾಧಿಪತಿಗಳಿದ್ದು, ಅಷ್ಟಮದಲ್ಲಿದ್ದರೆ, ಸೌಭಾಗ್ಯ ಪ್ರಾಪ್ತಿಯಾಗುತ್ತದೆ. ಪಾಪಗ್ರಹಗಳು ಸಪ್ತಮಾಧಿಪತಿಗಳಿದ್ದು ಅಷ್ಟಮದಲ್ಲಿದ್ದರೆ ವೈಧವ್ಯ ದ್ಯೋತಕವು.

ಸ್ವಗೃಹ ಅಥವಾ ಉಚ್ಚರಾಶಿಯ ಗುರು, ಶುಕ್ರ, ಚಂದ್ರ, ಬುಧರು ಅಷ್ಟಮದಲ್ಲಿದ್ದ ಸ್ತ್ರೀಯರಿಗೆ ಆಕಸ್ಮಿಕ ವಾರಸಾ ಹಣವು ದೊರೆಯುತ್ತದೆ.

ಬಲಾಢ್ಯ ಬುಧ ಅಥವಾ ರಾಹು ಅಷ್ಟಮದಲ್ಲಿದ್ದರೆ ಲಾಟರಿ ಸಟ್ಟಾ ರೇಸುಗಳಿಂದ ಲಾಭವಾಗುತ್ತದೆ.

## ಅನಾರೋಗ್ಯ

ನಿರ್ಬಲನಾದ ಚಂದ್ರನು ಅಥವಾ ಬುಧ ಅಷ್ಟಮದಲ್ಲಿದ್ದರೆ, ದಮ್ಮು, ಕೆಮ್ಮು, ಪುಷ್ಟ ಸಹಾರುವಂಥ ಬಹುಕಾಲದ ಬೇನೆಗಳನ್ನು ಕೊಡುತ್ತಾರೆ. ನಿರ್ಬಲನಾದ ಮಂಗಳನು ಅಷ್ಟಮದಲ್ಲಿದ್ದರೆ ಅಥವಾ ಮಂಗಳನಿಂದ ದೃಷ್ಟಿ ಸಲ್ಪಟ್ಟ ಕ್ಷೀಣ ಚಂದ್ರನು ಅಷ್ಟಮದಲ್ಲಿದ್ದರೆ ಅಪಮೃತ್ಯುಕಾರಕನಾಗುತ್ತಾನೆ. ನಿರ್ಬಲ ಗುರು ಅಷ್ಟಮದಲ್ಲಿದ್ದರೆ ಅಪಚನಕಾರಕವು ನಿರ್ಬಲ ಶುಕ್ರನು ಅಷ್ಟಮದಲ್ಲಿದ್ದರೆ ಅಥವಾ, ಶುಕ್ರ, ಮಂಗಳರ ಯೋಗವು ಅಷ್ಟಮದಲ್ಲಿದ್ದರೆ ಗುಪ್ತಸ್ಥಾನದ ರೋಗವು ಅಥವಾ ಬಾಣಂತಿ ಬೇನೆಗಳು ಬರುತ್ತವೆ.

## ಆಯುಷ್ಯ

ಕುಂಡಲಿಯ ಅಷ್ಟಮಸ್ಥಾನದ ಮೇಲಿಂದ ಆಯುಷ್ಯದ ಬಗ್ಗೆ ಹೇಳಲಾಗುತ್ತದೆ. ಆಯುಷ್ಯದಲ್ಲಿ ಮೂರು ಪ್ರಕಾರಗಳಿವೆ. (೧) ಅಲ್ಪಾಯುಷ್ಯ (೨) ಮಧ್ಯಮಾಯುಷ್ಯ (೩) ದೀರ್ಘಾಯುಷ್ಯ. ಅಲ್ಪಾಯುಷ್ಯ ಎಂದರೆ ೩೬ರ ಒಳಗೆ ಮಧ್ಯಮಾಯುಷ್ಯ ಅಂದರೆ ೩೬ರಿಂದ ೭೨ರ ವರೆಗೆ ದೀರ್ಘಾಯುಷ್ಯ ಅಂದರೆ ೬೦ರಿಂದ ೭೨ರ ವರೆಗೆ ೧-೮, ಇಲ್ಲವೇ ೧-೬ ಸ್ಥಾನಗಳ ಅಧಿಪತಿಗಳು ಮಿತ್ರರಿದ್ದು ಪರಸ್ಪರ ಸ್ಥಾನಗಳಲ್ಲಿದ್ದರೆ ದೀರ್ಘಾಯುಷ್ಯ ದ್ಯೋತಕವು. ರವಿ, ಚಂದ್ರ, ಶನಿ, ಲಗ್ನ, ಅಷ್ಟಮ,

ಅಷ್ಟಮಾಧೀಶ ಇವರಲ್ಲಿ ಯಾವದೇ ನಾಲ್ಕು ಸಂಗತಿಗಳು ಅನುಕೂಲವಿದ್ದರೆ ದೀರ್ಘಾಯುಷ್ಯ ದ್ಯೋತಕವು. ಗುರು, ಚಂದ್ರ, ರವಿ, ಶನಿ ಇವರು ಬಲಿಷ್ಠರಾಗಿ ಲಗ್ನ ಇಲ್ಲವೇ ಅಷ್ಟಮದಲ್ಲಿದ್ದರೆ ಆಯುಷ್ಯವರ್ಧಕರು. ಬಾಲ್ಯಕಾಲದಲ್ಲಿ ಚಂದ್ರನ ಬಲಾಬಲ ತಾರುಣ್ಯದಲ್ಲಿ ಕುಜ. ಬುಧ. ಶುಕ್ರರ ಬಲಾಬಲ, ಮಧ್ಯಮ ವಯಸ್ಸಿನಲ್ಲಿ ಗುರುವಿನ ಬಲಾಬಲ, ಹಾಗೂ ವೃದ್ಧಾಪ್ಯದಲ್ಲಿ ಶನಿಯ ಬಲಾಬಲಗಳನ್ನು ನೋಡಬೇಕು. ಏಕೆಂದರೆ ವಯಸ್ಸಿನ ೩-೮ ವರ್ಷಗಳ ವರೆಗೆ ಚಂದ್ರನು ಪರಿಣಾಮಕಾರಕ ಗ್ರಹನು ಇದು ತಂದೆ-ತಾಯಿಗಳ ಗ್ರಹಗಳ ಮೇಲೆಯೂ ಅವಲಂಬಿಸಿರುತ್ತದೆ. ೯ನೇ ವರ್ಷದಿಂದ ೧೬ರ ವರೆಗಿನ ಅವಧಿಯಲ್ಲಿ ರವಿ. ಬುಧರು ಪರಿಣಾಮ ಕಾರಕ ಗ್ರಹಗಳು. ೧೬ರಿಂದ ೨೫ರ ವರೆಗೆ ಮಂಗಳನು ಆಯುಷ್ಯಕಾರಕನು ೨೫ರಿಂದ ೩೫ರ ವರೆಗೆ ಶುಕ್ರನು ಆಯುಷ್ಯಕಾರಕನು, ೩೫ರಿಂದ ೫೦ರ ವರೆಗೆ ಗುರು ಆಯುಷ್ಯಕಾರಕ ಗ್ರಹನು. ಆದುದರಿಂದ ಆಯಾ ಅವಧಿಯಲ್ಲಿ ಮೇಲೆ ಕಾಣಿಸಿದ ಗ್ರಹಗಳ ಬಲಾಬಲದಿಂದ ಆಯುಷ್ಯದ ಬಗ್ಗೆ ತೀರ್ಮಾನ ಮಾಡಲು ಬರುತ್ತದೆ.

## ಅಲ್ಪಾಯುಃ ಯೋಗ

(೧) ನಿರ್ಬಲ ಗುರು ಇಲ್ಲವೆ ಚಂದ್ರರು ಅಷ್ಟಮದಲ್ಲಿದ್ದರೆ.

(೨) ಅನೇಕ ಪಾಪಗ್ರಹಗಳು ಲಗ್ನ ಇಲ್ಲವೇ ಅಷ್ಟಮದಲ್ಲಿದ್ದರೆ.

(೩) ಕ್ಷೀಣ ಚಂದ್ರನು ೬,೮, ೧೨ನೇ ಸ್ಥಾನಗಳಲ್ಲಿದ್ದರೆ

(೪) ಲಗ್ನೇಶನು ನಿರ್ಬಲನಾಗಿ ಪಾಪಗ್ರಹಗಳಿಂದ ದೃಷ್ಟನಾಗಿ ೬, ೮, ೧೨ನೇ ಸ್ಥಾನಗಳಲ್ಲಿದ್ದರೆ.

(೫) ನಿರ್ಬಲನಾದ ಅಷ್ಟಮೇಶನು ಲಗ್ನದಲ್ಲಿ ಇಲ್ಲವೇ ನಿರ್ಬಲನಾದ ಲಗ್ನೇಶನು ಅಷ್ಟಮದಲ್ಲಿದ್ದರೆ.

(೬) ಅನೇಕ ಪಾಪಗ್ರಹಗಳು ಚತುರ್ಥ ಇಲ್ಲವೇ ಸಪ್ತಮದಲ್ಲಿದ್ದರೆ.

(೭) ಶನಿ-ಮಂಗಳ, ಶನಿ-ಚಂದ್ರ, ರಾಹು-ಚಂದ್ರ, ರವಿ ಶನಿ ಇವರ ಅಂಶಾತ್ಮಕ ಯುತಿಯು ಲಗ್ನ ಇಲ್ಲವೇ ಅಷ್ಟಮದಲ್ಲಿದ್ದರೆ

(೮) ಶುಭಗ್ರಹಗಳ ದೃಷ್ಟಿರಹಿತ ನಿರ್ಬಲ ಅಷ್ಟಮೇಶನು ಲಗ್ನದಲ್ಲಿ ಇದ್ದ ಸ್ತ್ರೀಯರಿಗೆ ಮಾನಸಿಕ ಚಿಂತೆ ಇರುತ್ತದೆ.

(೯) ಕ್ಷೀಣ ಚಂದ್ರನು ಷಷ್ಠದಲ್ಲಿದ್ದು, ಅಷ್ಟಮೇಶನು ನಿರ್ಬಲನಾಗಿದ್ದ ಸ್ತ್ರೀಯರು ಸದಾ ರೋಗಿಗಳಿರುತ್ತಾರೆ.

(೧೦) ನಿರ್ಬಲನಾದ ಮಂಗಳನು ಅಷ್ಟಮದಲ್ಲಿದ್ದರೆ ಅಲ್ಪಾಯು ದ್ಯೋತಕವು.

### ರೋಗ-ರುಜಿಗಳು

ಬೇನೆ-ಬೇಸರಿಕೆಗಳ ಬಗ್ಗೆ ವಿಚಾರಿಸುವಾಗ ಲಗ್ನ, ಷಷ್ಠ, ಅಷ್ಟಮ ಹಾಗೂ ಷಷ್ಠಸ್ಥಾನದಲ್ಲಿರುವ ಗ್ರಹಗಳನ್ನು ಪರಿಶೀಲಿಸಬೇಕು. ಷಷ್ಠಸ್ಥಾನದಲ್ಲಿರುವ ರಾಶಿಯ ತತ್ತ್ವ ಹಾಗೂ ಷಷ್ಠಸ್ಥಾನದಲ್ಲಿಯ ಗ್ರಹಗಳ ತತ್ತ್ವಕ್ಕನುಗುಣವಾಗಿ ಆಯಾ ರೋಗಗಳು ಉದ್ಭವಿಸುವವು. ಉದಾ: ಮೇಷ ಲಗ್ನಕ್ಕೆ ಷಷ್ಠಮಸ್ಥಾನದಲ್ಲಿ ಶನಿಯು ಇದ್ದರೆ ಬಸ್ತಿಯ ದುರ್ಬಲತೆ; ಷಷ್ಠದಲ್ಲಿ ಸಿಂಹರಾಶಿ ಇದ್ದು ಷಷ್ಠಸ್ಥಾನದ ಮೇಲೆ ಅಶುಭ ಗ್ರಹಗಳ ದೃಷ್ಟಿ ಇದ್ದರೆ, ಇಂಥ ಸ್ತ್ರೀಯರು ಹೊಟ್ಟೆನೋವು, ಅಪಚನ ವಿಕಾರಗಳಿಂದ ಬಳಲುವರು. ತುಲಾರಾಶಿ ಇದ್ದರೆ ಮೂತ್ರಾಶಯದ ವಿಕಾರ, ವೃಶ್ಚಿಕರಾಶಿಯು ಷಷ್ಠಮದಲ್ಲಿದ್ದರೆ ಗರ್ಭಾಶಯ ವಿಕಾರ, ಇತ್ಯಾದಿ. ರವಿ, ಚಂದ್ರರು ನೈಸರ್ಗಿಕ ದುರ್ಬಲತೆಯನ್ನು, ಮಂಗಳನು ಅಪಘಾತ ಹಾಗೂ ಕೈಕಾಲುಗಳಿಗೆ ಪೆಟ್ಟು, ಬುಧನು ಮಜ್ಜಾತಂತು ಹಾಗೂ ಜ್ಞಾನ ತಂತುಗಳ ದೌರ್ಬಲತೆಯನ್ನು, ಗುರುವು ಅಪಚನ ಕ್ರಿಯಾ ಹಾಗೂ ಅಶಕ್ತತೆಯನ್ನು, (Liver Complaint), ಶುಕ್ರನು ಆರ್ತವ ಪೀಡೆ, ಬಾಣಂತಿ ಬೇನೆಯನ್ನು ಶನಿಯು ಕೆಮ್ಮು, ದಮ್ಮು ಹಾಗೂ ಬಹುದಿನದ ಬೇನೆ, ಅರ್ಧಾಂಗ ವಾಯು ಹಾಗೂ ವಾತವಿಕಾರಕನು, ರಾಹು—ಕೇತುಗಳು ವಿಷ ಕೀಟಕ ಹಾಗೂ ಪ್ರಾಣಿಗಳಿಂದುಂಟಾಗುವ ಬೇನೆಗಳನ್ನು, ಹೀಗೆ ಆಯಾ ರಾಶಿ ಹಾಗೂ ಗ್ರಹಗಳ ಮೂಲಿಂದ ಬೇನೆ ಬೇಸರಿಕೆಗಳನ್ನು ತಿಳಿದುಕೊಳ್ಳಲಾಗುತ್ತದೆ.

## ಆಕಸ್ಮಿಕ ಧನಲಾಭ

ಅಷ್ಟಮೇಶನು ರವಿಯು ಇದ್ದು ಲಗ್ನ ರಾಶಿಯಲ್ಲಿದ್ದ ಸ್ತ್ರೀಯರಿಗೆ ತವರುಮನೆಯ ಸಂಪತ್ತು ದೊರೆಯುವದು. ರಾಜಕೀಯ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ಇಂಥ ಮಹಿಳೆಯರು ಮುಂದುವರೆಯುವರು. ಅಷ್ಟಮೇಶನು ಚಂದ್ರನಿದ್ದು ವೃಷಭ, ಕರ್ಕ, ಮೀನ, ಸಿಂಹ, ಮಕರ, ಕನ್ಯಾ ಈ ರಾಶಿಗಳಲ್ಲಿದ್ದರೆ ಅತ್ತೆಯ ಮನೆಯ ಸೌಖ್ಯವು ದೊರೆಯುವದು. ಚಂದ್ರನು ಅಷ್ಟಮೇಶನಿದ್ದು ೧, ೩, ೫, ೯, ೧೦, ೧೧ ಈ ಸ್ಥಾನಗಳಲ್ಲಿದ್ದರೆ ನೌಕರಿ ಉದ್ಯೋಗಗಳಿಂದ ಲಾಭ. ಬುಧನು ಅಷ್ಟಮೇಶನು ಇದ್ದು ಮಿಥುನ, ಕನ್ಯಾ, ತುಲಾ, ಕುಂಭ ರಾಶಿಗಳಲ್ಲಿದ್ದರೆ ವ್ಯಾಪಾರ ಉದ್ಯೋಗ ಗಳಿಂದ ಹಣವನು ಸಂಪಾದಿಸುತ್ತಾರೆ. ಅಷ್ಟಮೇಶನು ಗುರು ಇದ್ದು ಜಲ ಹಾಗೂ ವಾಯು ರಾಶಿಗಳಲ್ಲಿದ್ದರೆ ಧಾರ್ಮಿಕ ಪ್ರವೃತ್ತಿಯುಳ್ಳವರು ಇರುತ್ತಾರೆ. ಶುಕ್ರನು ಅಷ್ಟಮೇಶನಿದ್ದು ಪೃಥ್ವಿ ಹಾಗೂ ವಾಯು ರಾಶಿ ಗಳಲ್ಲಿದ್ದರೆ ವ್ಯಾಪಾರ ಉದ್ಯೋಗ ಹಾಗೂ ಕಲಾಕೌಶಲ್ಯದಿಂದ ಧನಪ್ರಾಪ್ತಿ ಶನಿಯು ಅಷ್ಟಮೇಶನಿದ್ದು ವಾಯು ಹಾಗೂ ಪೃಥ್ವಿ ರಾಶಿಯಲ್ಲಿದ್ದರೆ ಒಕ್ಕಲತನದಿಂದ ಧನಪ್ರಾಪ್ತಿಯಾಗುವದು. ಅಷ್ಟಮೇಶನು ಮಂಗಳನಿದ್ದು ಉಚ್ಚ ಇಲ್ಲವೆ ಸ್ವಗೃಹ, ಮಿತ್ರ ಕ್ಷೇತ್ರ ಇದ್ದರೆ ಸಟ್ಟಾ-ಲಾಟರಿ ರೇಸ ಮುಂತಾದವುಗಳಿಂದ ಲಾಭವಾಗುತ್ತದೆ.

## ಅಷ್ಟಮಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ :— ಅಗ್ನಿರಾಶಿಯ ರವಿಯು ಅಷ್ಟಮದಲ್ಲಿದ್ದರೆ ಸಾಂಪತ್ತಿಕ ಸ್ಥಿತಿಯು ಉತ್ತಮವಿರುತ್ತದೆ. ಉಳಿದ ಯಾವದೇ ರಾಶಿಯ ರವಿಯು (ಅಷ್ಟಮದಲ್ಲಿರುವುದು) ಆರ್ಥಿಕ ಹಾಗೂ ಆರೋಗ್ಯಕ್ಕೆ ಪ್ರತಿಕೂಲವು. ರವಿ-ಚಂದ್ರ, ರವಿ-ಶನಿ ಇವರ ಯೋಗ ಅಷ್ಟಮದಲ್ಲಿರುವದು ಅಲ್ಪಾಯು ಸೂಚಕವು. ರವಿ—ಮಂಗಳರ ಯೋಗ ಅಷ್ಟಮದಲ್ಲಿರುವದು ಆಕಸ್ಮಿಕ ಧನಲಾಭವನ್ನು ತೋರಿಸುತ್ತದೆ. ರವಿ-ಶುಕ್ರರ ಯೋಗವು ಅಷ್ಟಮದಲ್ಲಿ ಇದ್ದರೆ ಮಧ್ಯಮ ಹಾಗೂ ಸೌಭಾಗ್ಯ ಮೃತ್ಯು ದ್ಯೋತಕವು

ಚಂದ್ರ :— ಬಲಾಢ್ಯ ರಾಶಿಯ ಚಂದ್ರನು ಅಷ್ಟಮದಲ್ಲಿದ್ದರೆ ಒಳ್ಳೆಯ ಸಾಂಪತ್ತಿಕ ಸ್ಥಿತಿಯ ದ್ಯೋತಕವು. ನಿರ್ಬಲ ಚಂದ್ರನು ಅಷ್ಟಮದಲ್ಲಿರುವುದು ಅಲ್ಪಾಯು (ಸೌಭಾಗ್ಯ ಮೃತ್ಯು) ದ್ಯೋತಕವು. ಚಂದ್ರ-ಶನಿ, ನಿರ್ಬಲರಾಗಿ ಅಷ್ಟಮದಲ್ಲಿದ್ದರೆ ಕ್ಷಯರೋಗದ ಭೀತಿ ಇರುತ್ತದೆ. ಚಂದ್ರ-ಮಂಗಳರ ಯುತಿಯು ಅಷ್ಟಮದಲ್ಲಿದ್ದರೆ ಪ್ರಸೂತಿ ಬೇನೆಯ ಭೀತಿಯು ಬಲಾಢ್ಯ ಗುರು-ಚಂದ್ರ, ಚಂದ್ರ-ಶುಕ್ರ ಇವರ ಯುತಿಯು ಅಷ್ಟಮದಲ್ಲಿ ಇದ್ದರೆ ಸಾಂಪತ್ತಿಕ ಸ್ಥಿತಿಯು ಚೆನ್ನಾಗಿರುತ್ತದೆ.

ಮಂಗಳ :— ಬಲಾಢ್ಯ ಮಂಗಳನು ಅಷ್ಟಮದಲ್ಲಿರುವುದು ಆಕಸ್ಮಿಕ ಧನ ಪ್ರಾಪ್ತಿಯ ಸೂಚಕವು. ನಿರ್ಬಲ ಮಂಗಳನು ಅಷ್ಟಮದಲ್ಲಿದ್ದರೆ ಅಪಮೃತ್ಯುವಿನ ಭಯವಿರುತ್ತದೆ. ( accidental death ). ರವಿ-ಮಂಗಳ, ಮಂಗಳ-ರಾಹು, ಮಂಗಳ-ಬುಧ ಇವರ ಯೋಗವು ಅಷ್ಟಮದಲ್ಲಿ ಇದ್ದರೆ ಸಟ್ಟಾ, ಲಾಟರಿ ಮುಂತಾದವುಗಳಿಂದ ಧನ ಪ್ರಾಪ್ತಿ. ಮಂಗಳ-ಶನಿ ಇವರ ಯುತಿಯು ಅಷ್ಟಮದಲ್ಲಿದ್ದರೆ ಆರೋಗ್ಯಕ್ಕೆ ಹಾನಿದಾಯಕವು.

ಬುಧ :— ಸ್ವಗ್ರಹ ಹಾಗೂ ಉಚ್ಚ ರಾಶಿಯ ಅಥವಾ ವಾಯು ರಾಶಿ ಬುಧನು ಅಷ್ಟಮದಲ್ಲಿರುವದು ವ್ಯಾಪಾರದಲ್ಲಿ ಪ್ರಗತಿಯನ್ನು ಸೂಚಿಸುತ್ತದೆ. ಮಿಥುನ, ಕನ್ಯಾ ರಾಶಿಗಳು ಅಷ್ಟಮದಲ್ಲಿದ್ದು ಬುಧ-ರಾಹು ಇವರ ಯುತಿಯು ಅಷ್ಟಮದಲ್ಲಿದ್ದರೆ ಆಕಸ್ಮಿಕ ಧನಲಾಭವು.

ಗುರು :— ಬಲಾಢ್ಯ ಗುರು ಅಷ್ಟಮದಲ್ಲಿರುವದು ಸಾಂಪತ್ತಿಕ ಸ್ಥಿತಿಗೆ ಅನುಕೂಲ. ನಿರ್ಬಲ ಗುರು ಅಷ್ಟಮದಲ್ಲಿದ್ದರೆ ಆರೋಗ್ಯಕ್ಕೆ ಹಾನಿ-ಗುರು-ಶುಕ್ರ, ಗುರು-ಚಂದ್ರರ ಯುತಿಯು ಅಷ್ಟಮದಲ್ಲಿದ್ದರೆ, ಸಾಂಪತ್ತಿಕ ಸ್ಥಿತಿಗೆ ಪೋಷಕವು.

ಶುಕ್ರ :— ನಿರ್ಬಲ ಶುಕ್ರನು ಅಷ್ಟಮದಲ್ಲಿರುವದು ಆರೋಗ್ಯಕ್ಕೆ ಪ್ರತಿಕೂಲ, ರವಿ ಶುಕ್ರ, ಶುಕ್ರ-ಮಂಗಳರ ಯೋಗವು ಅಷ್ಟಮದಲ್ಲಿದ್ದರೆ ಗರ್ಭಸ್ರಾವ ಭಯದ ಸೂಚಕವು (abortion).

ಶನಿ :— ಯಾವದೇ ರಾಶಿಯ ಶನಿಯು ಅಷ್ಟಮದಲ್ಲಿರುವದು

ಆರೋಗ್ಯಕ್ಕೆ ಅನುಕೂಲ. ಮಕರ, ತುಲಾ, ಕುಂಭ, ಮಿಥುನ, ಕನ್ಯಾ, ವೃಷಭ ರಾಶಿಗಳ ಶನಿಯು ಅಷ್ಟಮದಲ್ಲಿದ್ದರೆ ಆಯುಷ್ಯಕ್ಕೆ ಪೋಷಕನು.

ರಾಹು :— ನಿರ್ಬಲ ರಾಹು ಅಷ್ಟಮದಲ್ಲಿರುವುದು ಆರೋಗ್ಯಕ್ಕೆ ಪ್ರತಿಕೂಲ. ರಾಹು ಮಂಗಳ, ರಾಹು-ರವಿ, ರಾಹು-ಬುಧ ಯುತಿಗಳು ಅಷ್ಟಮದಲ್ಲಿರುವದು ಆಕಸ್ಮಿಕ ಧನ ಲಾಭವನ್ನು ಸೂಚಿಸುತ್ತದೆ. ಕರ್ಕ, ವೃಶ್ಚಿಕ, ಮೀನ ರಾಶಿಗಳ ರಾಹುವು ಅಷ್ಟಮದಲ್ಲಿದ್ದರೆ ಗರ್ಭಾಶಯಕ್ಕೆ ತೊಂದರೆ.

ಕೇತು :— ಧನು, ಮೀನಗಳ ಹೊರತಾಗಿ ಮಿಕ್ಕ ಯಾವದೇ ರಾಶಿಗಳ ಕೇತುವು ಅಷ್ಟಮದಲ್ಲಿರುವದು ಆರೋಗ್ಯಕ್ಕೆ ಹಾಗೂ ಸಾಂಪತ್ತಿಕ ಸ್ಥಿತಿಗೆ ಪ್ರತಿಕೂಲ.

## ಭಾವೇಶನ ಫಲ

(೧) ಅಷ್ಟಮೇಶನು ಲಗ್ನದಲ್ಲಿ ನಿರ್ಬಲನಿದ್ದ ಸ್ತ್ರೀಯರು ಅಶಕ್ತರೂ ರೋಗ ಪೀಡಿತರೂ ಇರುತ್ತಾರೆ. ಅಷ್ಟಮೇಶನು ಬಲಾಢ್ಯನಾಗಿ ಲಗ್ನದಲ್ಲಿ ಇದ್ದರೆ ಆರೋಗ್ಯವರ್ಧಕವು.

(೨) ಅಷ್ಟಮೇಶನು ಧನಸ್ಥಾನದಲ್ಲಿರುವದು ಸಾಂಪತ್ತಿಕ ಸ್ಥಿತಿಗೆ ಹಾನಿದಾಯಕವು. ಅಷ್ಟಮೇಶನು ನಿರ್ಬಲನಾಗಿ ಧನಸ್ಥಾನದಲ್ಲಿದ್ದರೆ ಕಳವು, ಸುಲಿಗೆ, ದುರ್ಮರಣಗಳ ಭೀತಿಯು ಇರುತ್ತದೆ.

(೩) ಅಷ್ಟಮೇಶನು ಪಾಪಗ್ರಹನಿದ್ದು ತೃತೀಯನಿದ್ದರೆ ಬಂಧು-ಭಗಿನಿಯರ ಸೌಖ್ಯ ದೊರಕಲಾರದು (ಕನ್ಯಾ ಲಗ್ನವು ಇದಕ್ಕೆ ಅಪವಾದ).

(೪) ಅಷ್ಟಮೇಶನು ಚತುರ್ಥದಲ್ಲಿದ್ದರೆ ಅಸುಖಿ ಜೀವನವನ್ನು ಕಳೆಯ ಬೇಕಾಗುವದು. ಅಷ್ಟಮೇಶನಾದ ರವಿಯು ಚತುರ್ಥದಲ್ಲಿದ್ದರೆ ಸ್ಥಾವರ ಆಸ್ತಿ ಹಾಗೂ ವಾಹನ ಸೌಖ್ಯ ದೊರಕುತ್ತದೆ.

(೫) ಅಷ್ಟಮೇಶನು ಪಂಚಮದಲ್ಲಿದ್ದರೆ ವಿದ್ಯಾ ಹಾಗೂ ಸಂತತಿಗೆ ಪ್ರತಿಕೂಲ. ಸಿಂಹ, ಕನ್ಯಾ, ಕುಂಭ ಲಗ್ನಗಳ ಅಷ್ಟಮಾಧಿಪನು ಪಂಚಮದಲ್ಲಿದ್ದರೆ ವಿದ್ಯೆಗೆ ಅನುಕೂಲ.

(೬) ಅಷ್ಟಮೇಶನು ಷಷ್ಠದಲ್ಲಿದ್ದರೆ ದಾರಿದ್ರ್ಯ ದ್ಯೋತಕ ಹಾಗೂ ಚೋರಭಯ. (ತುಲಾ ಹಾಗೂ ಧನು ಲಗ್ನಗಳನ್ನು ಹೊರತುಪಡಿಸಿ) ಅಷ್ಟಮೇಶನು ಷಷ್ಠದಲ್ಲಿರುವದು ಆರೋಗ್ಯಕ್ಕೆ ಹಾನಿದಾಯಕವು. ಗುರು ಇದ್ದರೆ ಅಶಕ್ತತೆ, ಮಂಗಳನಿದ್ದರೆ ಶಸ್ತ್ರಕ್ರಿಯೆಯಪ್ರಸಂಗ, ಶುಕ್ರನಿದ್ದರೆ ಆರ್ತವ ಹಾಗೂ ಪ್ರಸೂತಿ ರೋಗ, ಬುಧನಿದ್ದರೆ ವಿಷಜಂತುಗಳ ಬಯ, ಹಾಗೂ ಮಾನಸಿಕ ರೋಗ, ಚಂದ್ರ ಇದ್ದರೆ ಕೆಮ್ಮು-ದಮ್ಮು ಹಾಗೂ ಕಫದ ವಿಕಾರ. ರವಿ ಇದ್ದರೆ ಉಷ್ಣ ವಿಕಾರ, ಶನಿಯು ಇದ್ದರೆ ವಾತ ವಿಕಾರವನ್ನು ಸೂಚಿಸುತ್ತದೆ.

(೭) ಅಷ್ಟಮೇಶನು ಸಪ್ತಮದಲ್ಲಿದ್ದರೆ ಧಾರ್ಮಿಕ ಪ್ರವೃತ್ತಿಯುಳ್ಳವರು ಇರುತ್ತಾರೆ.

(೮) ಅಷ್ಟಮೇಶನು ಅಷ್ಟಮದಲ್ಲಿದ್ದರೆ ಆರೋಗ್ಯ ಹಾಗೂ ಸಾಂಪತ್ತಿಕ ಸ್ಥಿತಿಗೆ ಅನುಕೂಲ.

(೯) ಅಷ್ಟಮೇಶನು ನವಮದಲ್ಲಿದ್ದರೆ ತೀರ್ಥಯಾತ್ರಾ ಯೋಗವನ್ನು ಸೂಚಿಸುವದು.

(೧೦) ಅಷ್ಟಮೇಶನು ದಶಮದಲ್ಲಿರುವುದು ದಾರಿದ್ರ್ಯಯೋಗವೆನಿಸುತ್ತದೆ. ಆದರೆ ಇಂಥ ಸ್ತ್ರೀಯರು ಸ್ವಪರಾಕ್ರಮದಿಂದ ಧನಾರ್ಜನೆಯನ್ನು ಮಾಡುತ್ತಾರೆ. ಅಷ್ಟಮೇಶರು ಶನಿ, ಬುಧ, ಮಂಗಳರಿದ್ದು, ದಶಮದಲ್ಲಿದ್ದ ಸ್ತ್ರೀಯರು ಕಾರಕೂನ ಮುಂತಾದ ಕೆಲಸದಲ್ಲಿ ಪ್ರಾವೀಣ್ಯತೆಯನ್ನು ಹೊಂದುವರು.

(೧೧) ಅಷ್ಟಮೇಶನು ಲಾಭದಲ್ಲಿರುವದು ಸಾಂಪತ್ತಿಕ ದೃಷ್ಟಿಯಿಂದ ಉತ್ತಮ.

(೧೨) ಅಷ್ಟಮೇಶನು ದ್ವಾದಶದಲ್ಲಿದ್ದರೆ ಅಶುಭದಾಯಕವು (ದಾರಿದ್ರ್ಯ ಯೋಗ ದ್ಯೋತಕವು)

---

# ಭಾಗ್ಯಸ್ಥಾನ

ಕುಂಡಲಿಯ ನವಮಸ್ಥಾನ ಭಾಗ್ಯಸ್ಥಾನವೆನುತ್ತಾರೆ. ಈ ಸ್ಥಾನದ ಮೇಲಿಂದ ಭಾಗ್ಯೋದಯ, ಧರ್ಮ-ಅಧರ್ಮ, ಆಚಾರ-ವಿಚಾರ, ಶ್ರದ್ಧಾ, ಕೀರ್ತಿ, ದೂರ ಪ್ರವಾಸ, ತೀರ್ಥಯಾತ್ರಾ, ಸಂದರ್ಶ, ಜನಪ್ರಿಯತೆ ಜನನೀದೆ, ನೀತಿ-ಅನೀತಿ ಮುಂತಾದ ಸಂಗತಿಗಳನ್ನು ಹೇಗೆ ನೋಡಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ಸ್ತ್ರೀ ಪುರುಷರಿಗೆ ಜನ್ಮಕುಂಡಲಿಯ ನವಮಸ್ಥಾನವು ಬಹಳೇ ಮಹತ್ವದ್ದಿರುತ್ತದೆ. ಆ ಸ್ಥಾನದಲ್ಲಿ ಯಾವ ಗ್ರಹವಿರುವದೋ.. ಅದರ ಅಥವಾ ಸ್ಥಾನಾಧೀಶನ ಬಲಾಬಲದಂತೆ ಭಾಗ್ಯೋದಯವುಂಟಾಗುತ್ತದೆ. ಶನಿ, ಮಂಗಳ, ರಾಹು ಮುಂತಾದ ಕ್ರೂರ ಗ್ರಹಗಳು ನವಮಸ್ಥಾನದಲ್ಲಿದ್ದರೆ ಧೈರ್ಯಶಾಲಿಗಳೂ, ಸಾಹಸಿಯರೂ, ಮಹತ್ವಾಕಾಂಕ್ಷಿಗಳೂ ಇರುತ್ತಾರೆ. ಅದೇ ಸ್ಥಾನದಲ್ಲಿ ಗುರು, ಶುಕ್ರ, ಚಂದ್ರರಿದ್ದರೆ ಶಾಂತತೆ, ವಿನಯ, ವಾತ್ಸಲ್ಯ, ಪರೋಪಕಾರ, ಭೂತದಯೆ ಮುಂತಾದ ಸದ್ಗುಣಗಳಿಂದ ಕೂಡಿದವರಿರುತ್ತಾರೆ. ಶುಕ್ರ, ಚಂದ್ರ, ಗುರು ಇವರು ಬಲಿಷ್ಠರಾಗಿ ನವಮದಲ್ಲಿದ್ದ ಸ್ತ್ರೀಯರ ಭಾಗ್ಯೋದಯವು ವಿವಾಹದ ನಂತರ ಇರುತ್ತದೆ. ಹಾಗೂ ಅಂತಹ ಸ್ತ್ರೀಯರ ವಿವಾಹವು ಚಿಕ್ಕ ವಯಸ್ಸಿನಲ್ಲಿ ಆಗುತ್ತದೆ.

## ಧರ್ಮ

ಈ ಸ್ಥಾನದ ಮೇಲಿಂದ ದೇವ ಧರ್ಮ, ಧಾರ್ಮಿಕವೃತಗಳು, ತೀರ್ಥಯಾತ್ರಾ ಮುಂತಾದ ಸಂಗತಿಗಳ ಬಗ್ಗೆ ಹೇಳಲು ಬರುತ್ತದೆ. ವೃಷಭ, ಸಿಂಹ, ತುಲಾ, ಕರ್ಕ, ಧನು, ಮಕರ, ಕುಂಭ, ಮೀನ ಈ ರಾಶಿಗಳು, ಮತ್ತು ಗುರು, ಶುಕ್ರ, ಚಂದ್ರ, ಶನಿ ಈ ಗ್ರಹಗಳು ಧರ್ಮ ಪೋಷಕ ಗ್ರಹಗಳು. ಭಾಗ್ಯಸ್ಥಾನದಲ್ಲಿ ಯಾವದೇ ಗ್ರಹವಿದ್ದು, ಭಾಗ್ಯೇಶನು

ಮೇಷ, ಮಿಥುನ, ಕರ್ಕ, ಕನ್ಯಾ, ವೃಶ್ಚಿಕ ಈ ಯಾವದೇ ರಾಶಿಯಲ್ಲಿದ್ದ ಸ್ತ್ರೀಯರಿಗೆ ದೇವ-ಧರ್ಮಗಳಲ್ಲಿ ಆಸಕ್ತಿಯು ಇರುವದಿಲ್ಲ.

ಮೇಷ, ಮಿಥುನ, ವೃಶ್ಚಿಕ ಈ ರಾಶಿಗಳು ನಾಸ್ತಿಕತ್ವವನ್ನು ತೋರಿಸುತ್ತವೆ. ತುಲಾ ರಾಶಿಯ ಸ್ತ್ರೀಯರು ಸಹ ಧರ್ಮದಲ್ಲಿ ಅಷ್ಟೊಂದು ವಿಶ್ವಾಸವುಳ್ಳವರು ಇರುವದಿಲ್ಲ. ಮಕರ ರಾಶಿಯು ಧಾರ್ಮಿಕ ಜೀವನ ಹಾಗೂ ಘೋರ ವ್ರತ ಉಪವಾಸಾದಿಗಳಿಗೆ ಪೂರಕವಾಗಿರುತ್ತದೆ. ಮಕರ ರಾಶಿಯು ನವಮ ಸ್ಥಾನದಲ್ಲಿರುವ ಸ್ತ್ರೀಯರು ವ್ರತ-ಉಪವಾಸಾದಿಗಳಲ್ಲಿ ಶ್ರದ್ಧೆಯುಳ್ಳವರು ಇರುತ್ತಾರೆ. ಗುರು ಇಲ್ಲವೆ ಶನಿಗ್ರಹಗಳು ಬಲಾಢ್ಯರಾಗಿ ನವಮದಲ್ಲಿದ್ದ ಸ್ತ್ರೀಯರು ದೇವಿಯ ಉಪವಾಸಕರು ಇರುತ್ತಾರೆ. ಅಗ್ನಿ ಇಲ್ಲವೆ ಜಲರಾಶಿಯ ಶನಿಯು ನವಮದಲ್ಲಿದ್ದರೆ, ಆ ಸ್ತ್ರೀಯರಿಗೆ ಧರ್ಮದಲ್ಲಿ ಶ್ರದ್ಧೆ ಕಡಿಮೆ. ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ಯಾವದೇ ರಾಶಿಯ ಮಂಗಳನು ನವಮದಲ್ಲಿದ್ದ ಸ್ತ್ರೀಯರಿಗೆ ಧರ್ಮದಲ್ಲಿ ಶ್ರದ್ಧೆ ಕಡಿಮೆ. ಕೇತು ಗ್ರಹವು ಮಕರ ರಾಶಿಯ ಹಾಗೂ ವಾಯು ರಾಶಿಯ ಶನಿಯೊಂದಿಗೆ; ಅಥವಾ ಬಲಾಢ ಗುರುವಿನೊಂದಿಗೆ ನವಮದಲ್ಲಿದ್ದರೆ, ಆ ಸ್ತ್ರೀಯರು ಧಾರ್ಮಿಕರು, ನೀತಿವಂತರು ಮತ್ತು ತತ್ವಜ್ಞಾನಿಗಳಾಗಿರುತ್ತಾರೆ ಹಾಗೂ ಮೇಷ, ಸಿಂಹ ರಾಶಿಗಳ ರವಿಯು ಭಾಗ್ಯದಲ್ಲಿದ್ದರೆ ಆ ಸ್ತ್ರೀಯರು ಧಾರ್ಮಿಕ ಪ್ರವೃತ್ತಿಯವರಿರುತ್ತಾರೆ.

ನೀಚ ಚಂದ್ರನು, ಅಥವಾ ಯಾವದೇ ರಾಶಿಯ ಬುಧನು, ಅಥವಾ ಶುಕ್ರ ಮಂಗಳರ ಅಶುಭ ಯೋಗವು ನವಮದಲ್ಲಿದ್ದ ಸ್ತ್ರೀಯರು ವ್ಯಭಿಚಾರಿಗಳಿರುತ್ತಾರೆ. ಅಲ್ಲದೆ ಅವರು ನೀತಿ-ಅನೀತಿಗಳ ಭೇದವನ್ನರಿಯರು.

## ತೀರ್ಥ ಯಾತ್ರಾ ಯೋಗ

ಗುರು, ರವಿ, ಶನಿ ಈ ಯಾವದೇ ಗ್ರಹಗಳು ಬಲಾಢ್ಯರಿದ್ದು ನವಮದಲ್ಲಿದ್ದ ಸ್ತ್ರೀಯರಿಗೆ ತೀರ್ಥಯಾತ್ರಾ ಸಂದರ್ಶನ ಯೋಗವಿರುತ್ತದೆ. ಚರರಾಶಿಯು ನವಮದಲ್ಲಿದ್ದು, ಗುರು-ಶುಕ್ರರ ಯುತಿಯು ನವಮದಲ್ಲಿದ್ದ ಸ್ತ್ರೀಯರು ತೀರ್ಥಯಾತ್ರೆಗಳನ್ನು ಕೈಕೊಳ್ಳುವರು. ಮಕರ, ತುಲಾ,

ಕುಂಭ ಈ ರಾಶಿಗಳು ನವಮದಲ್ಲಿದ್ದು, ಶನಿಯೂ ಕೂಡ ಅಲ್ಲಿಯೇ ಇದ್ದ ಸ್ತ್ರೀಯರಿಗೆ ತೀರ್ಥಯಾತ್ರಾ ಸಂದರ್ಶನದ ಲಾಭವಿರುತ್ತದೆ.

## ಭಾಗ್ಯ

ನವಮಸ್ಥಾನಕ್ಕೆ ಭಾಗ್ಯಸ್ಥಾನವೆನ್ನುತ್ತಾರೆ ಈ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ ಅಥವಾ ಭಾಗ್ಯೇಶನು ಬಲಾಢ್ಯನಿದ್ದರೆ ಆಯಾ ಗ್ರಹಗಳಿಗೆ ಅನುಗುಣವಾಗಿ, ಆಯಾ ವರ್ಷಗಳಲ್ಲಿ ಭಾಗ್ಯೋದಯವಾಗುತ್ತದೆ.

ಭಾಗ್ಯೇಶನು ಬಲಹೀನನಿದ್ದರೆ ಅಥವಾ ಭಾಗ್ಯಸ್ಥಾನದಲ್ಲಿ ಅನೇಕ ಪಾಪಗ್ರಹಗಳಿದ್ದರೆ ದಶಮಸ್ಥಾನವನ್ನಾಗಲಿ, ಇಲ್ಲವೆ ಲಾಭಸ್ಥಾನವನ್ನಾಗಲಿ ನೋಡಬೇಕು. ಭಾಗ್ಯೇಶು ನಿರ್ಬಲನಾಗಿ ೩, ೬, ೮ ಇಲ್ಲವೆ ೧೨ನೆಯ ಸ್ಥಾನದಲ್ಲಿದ್ದು; ದಶಮ ಮತ್ತು ಏಕಾದಶ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ ಇಂಥ ಸ್ತ್ರೀಯರು ಭಾಗ್ಯಹೀನರೆಂದು ತಿಳಿಯಬೇಕು.

ಗ್ರಹಗಳ ಭಾಗ್ಯಕಾರಕ ವರ್ಷಗಳೆಂದರೆ ರವಿಯು ೨೨ನೇ ವರ್ಷಕ್ಕೆ ಚಂದ್ರನು ೨೪ನೆಯ ವರ್ಷಕ್ಕೆ ಮಂಗಳನು ೨೮ನೆಯ ವರ್ಷಕ್ಕೆ, ಬುಧನು ೩೨ನೆಯ ವರ್ಷಕ್ಕೆ, ಗುರು ೧೬ನೆಯ ವರ್ಷಕ್ಕೆ ಶುಕ್ರನು ೨೫ನೆಯ ವರ್ಷಕ್ಕೆ, ಶನಿಯು ೩೬ನೆಯ ವರ್ಷಕ್ಕೆ, ರಾಹು ೪೨ನೆಯ ವರ್ಷಕ್ಕೆ ಭಾಗ್ಯಕಾರಕನು. ನವಮಸ್ಥಾನದಲ್ಲಿರುವ ಗ್ರಹಗಳ ದಶಾಂತರ್ದಶ, ಅಥವಾ ಭಾಗ್ಯೇಶನ ದಶಾಂತರ್ದಶ, ಮತ್ತು ಗೋಚರೀಯ ಗ್ರಹಗಳ ಶುಭಯೋಗ, ಇವುಗಳ ಮೇಲಿಂದ ಭಾಗ್ಯೋದಯವನ್ನು ಕಂಡುಹಿಡಿಯಬೇಕು.

## ಭಾಗ್ಯಶಾಲಿ ಸ್ತ್ರೀಯರು

(೧) ನವಮಸ್ಥಾನದಲ್ಲಿ ರವಿ, ಗುರು. ಶುಕ್ರ, ಚಂದ್ರ, ಶನಿ ಇವರು ಬಲಾಢ್ಯರಾಗಿದ್ದರೆ, ಅಥವಾ ಗುರು-ಚಂದ್ರ, ಗುರು-ಶುಕ್ರ, ಶುಕ್ರ-ಚಂದ್ರ ಇವರ ಯುತಿಯು ನವಮದಲ್ಲಿದ್ದರೆ (೨) ಸಪ್ತಮೇಶನು ಶುಭಗ್ರಹವಿದ್ದು, ಬಲಾಢ್ಯನಾಗಿ ೧, ೫. ೭. ೯. ೧೦, ೧೧ ಈ ಯಾವದೇ ಸ್ಥಾನದಲ್ಲಿದ್ದರೆ (೩) ನವಮೇಶನು ದಶಮದಲ್ಲಿದ್ದರೆ ಅಥವಾ ದಶಮೇಶನು ನವಮದಲ್ಲಿದ್ದರೆ (೪) ನವಮ, ದಶಮ, ಏಕಾದಶಗಳ ಯಾವದೇ ಎರಡು ಸ್ಥಾನಗಳಲ್ಲಿ

ಸ್ವಗ್ರಹ ಇಲ್ಲವೆ ಉಚ್ಚರಾಶಿಯ ಗ್ರಹಗಳಿದ್ದರೆ (೫) ಗುರು-ಶುಕ್ರ, ಇಲ್ಲವೆ ಗುರು-ಚಂದ್ರರ ನವಪಂಚಕವು ಕೇಂದ್ರ ತ್ರಿಕೋಣದಲ್ಲಿದ್ದರೆ (೬) ದಶಮ ಇಲ್ಲವೆ ಏಕಾದಶ ಸ್ಥಾನದಲ್ಲಿ ಅಧಿಕ ಶುಭಗ್ರಹಗದ್ದರೆ (೭) ಸ್ತ್ರೀ ರಾಶಿಯು ಲಗ್ನವಿದ್ದು, ಅಲ್ಲಿಯೇ ಎರಡು ಶುಭಗ್ರಹಗಳಿದ್ದರೆ (೮) ಲಗ್ನೇಶ ಹಾಗೂ ಧನೇಶರು ; ಶುಭಗ್ರಹಗಳಿದ್ದು, ಅನ್ಯೋನ್ಯ ಸ್ಥಾನದಲ್ಲಿದ್ದರೆ (೯) ಚತುರ್ಥೇಶನು ಶುಭಗ್ರಹವಿದ್ದು ೫, ೯, ೧೦, ೧೧ ಈ ಯಾವದೊಂದು ಸ್ಥಾನದಲ್ಲಿದ್ದರೆ (೧೦) ಧನೇಶನು ಲಾಭೇಶನೊಂದಿಗೆ ಲಾಭದಲ್ಲಿದ್ದರೆ (೧೧) ಲಗ್ನೇಶ ಹಾಗೂ ಪಂಚಮೇಶರು ಶುಭಗ್ರಹವಿದ್ದು ಅನ್ಯೋನ್ಯ ಸ್ಥಾನದಲ್ಲಿದ್ದರೆ.

ಮೇಲೆ ಹೇಳಲಾದ ಈ ಯೋಗಗಳು ಜನ್ಮಕುಂಡಲಿಯಲ್ಲಿದ್ದ ಸ್ತ್ರೀಯರು ಭಾಗ್ಯಶಾಲಿಗಳಾಗುತ್ತಾರೆ.

### ಭಾಗ್ಯಹೀನಯೋಗ

(೧) ಚತುರ್ಥೇಶನು ಕ್ರೂರಗ್ರಹವಿದ್ದು ಅಷ್ಟಮದಲ್ಲಿದ್ದರೆ (೨) ಲಗ್ನ ಧನ, ಸಪ್ತಮ ಈ ಮೂರೂ ಸ್ಥಾನಾಧೀಶರು ೩, ೬, ೮, ೧೨ ಈ ಯಾವದೊಂದು ಸ್ಥಾನದಲ್ಲಿದ್ದರೆ (೩) ಭಾಗ್ಯೇಶನು ಷಷ್ಠದಲ್ಲಿದ್ದರೆ (೪) ಲಗ್ನೇಶನು ೬, ೮, ಇಲ್ಲವೆ ೧೨ನೆಯ ಸ್ಥಾನದಲ್ಲಿದ್ದರೆ (೫) ಶನಿ-ಮಂಗಳ, ರವಿ-ಶನಿ, ರಾಹು-ಶನಿ ಇವರ ಯುತಿಯು ೪, ೭, ೯, ೧೦ ಈ ಯಾವದೇ ಸ್ಥಾನದಲ್ಲಿ ಆಗುತ್ತಿದ್ದರೆ (೬) ಶನಿ-ಮಂಗಳ, ಅಥವಾ ರವಿ-ಶನಿಯರ ಸಮಸಪ್ತಕವು ಲಗ್ನ-ಸಪ್ತಮ, ಪಂಚಮ-ಏಕಾದಶ, ಅಥವಾ ತೃತೀಯ-ನವಮದಲ್ಲಿ ಆಗುತ್ತಿದ್ದರೆ.

ಮೇಲೆ ತೋರಿಸಿದ ಯೋಗಗಳು ಜನ್ಮಕುಂಡಲಿಯಲ್ಲಿದ್ದ ಸ್ತ್ರೀಯರು ನಿರ್ಭಾಗ್ಯರಾಗುತ್ತಾರೆ.

### ಯಶಸ್ವೀಯೋಗ

(೧) ಚಂದ್ರನ ಮುಂದೆ, ಇಲ್ಲವೆ ಎದುರಿಗೆ ಶುಭಗ್ರಹಗಳಿದ್ದರೆ (೨) ರವಿ-ಚಂದ್ರರ ಸಮಸಪ್ತಕವು ಇದ್ದರೆ (೩) ಗುರು-ಚಂದ್ರ ಇಲ್ಲವೆ

ಗುರು-ಶುಕ್ರರ ನವಪಂಚಮ, ಇಲ್ಲವೆ ಸಮಸಪ್ತಕವು ಇದ್ದರೆ (೪) ಸುಖೇಶ ಹಾಗೂ ಲಾಭೇಶರ, ಅಥವಾ ಸುಖೇಶ ಮತ್ತು ಭಾಗ್ಯೇಶರ ಶುಭ ಸಂಬಂಧ ವಿದ್ದರೆ (೫) ಲಗ್ನೇಶ ಹಾಗೂ ಭಾಗ್ಯೇಶರ ಶುಭ ಸಂಬಂಧವಿದ್ದರೆ.

ಮೇಲೆ ತೋರಿಸಿದ ಯೋಗಗಳು ಜನ್ಮಕುಂಡಲಿಯಲ್ಲಿದ್ದ ಸ್ತ್ರೀಯರು ಎಲ್ಲ ಕಾರ್ಯಗಳಲ್ಲಿ ಯಶಸ್ವಿಗಳಾಗಿರುತ್ತಾರೆ

ಅಪಯಶಸ್ವೀಯೋಗ

೧) ಧನಸ್ಥಾನದಲ್ಲಿ ನಿರ್ಬಲ ಶನಿ ಇಲ್ಲವೆ ನಿರ್ಬಲ ರಾಹು ಇದ್ದರೆ
೨) ಚತುರ್ಥದಲ್ಲಿ ಮಂಗಳನೂ, ಧನಸ್ಥಾನದಲ್ಲಿ ಶನಿಯೂ ಇದ್ದರೆ
೩) ನಿರ್ಬಲ ಚಂದ್ರನು ೬, ೮ ಇಲ್ಲವೆ ೧೨ನೇ ಸ್ಥಾನದಲ್ಲಿದ್ದರೆ.

ಮೇಲೆ ಕಂಡ ಯೋಗಗಳು ಜನ್ಮ ಕುಂಡಲಿಯಲ್ಲಿದ್ದ ಸ್ತ್ರೀಯರು ಸಕಲ ಕಾರ್ಯಗಳಲ್ಲಿ ಅಪಯಶಸ್ವಿಗಳಾಗುವ ಸಂಭವವಿರುತ್ತದೆ.

ಭಾಗ್ಯಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ :— ಬಲಾಢ್ಯ ರವಿಯು ಲಗ್ನದಲ್ಲಿದ್ದ ಸ್ತ್ರೀಯರು ಆರೋಗ್ಯ ಮತರಿಯವರು. ತವರುಮನೆಯ ಸೌಖ್ಯ ಕಡಿಮೆ ಆದರೂ ಅತ್ತೆಯ ಮನೆಯ ಸೌಖ್ಯ ಚನ್ನಾಗಿರುತ್ತದೆ.

ಚಂದ್ರ :— ಬಲಾಢ್ಯ ಚಂದ್ರನು ಭಾಗ್ಯದಲ್ಲಿದ್ದ ಸ್ತ್ರೀಯರು ಮಾತಾ-ಪಿತರ ಭಕ್ತರಿದ್ದು, ಧಾರ್ಮಿಕರೂ ಇದ್ದು ತೀರ್ಥ ಯಾತ್ರೆಯನ್ನು ಕೈಕೊಳ್ಳುತ್ತಾರೆ. ಹಾಗೂ ಇವರ ವಿವಾಹವು ಬೇಗನಾಗುತ್ತದೆ.

ಮಂಗಳ :— ಧಾರ್ಮಿಕ ವಿಚಾರಗಳಲ್ಲಿ ಆಸಕ್ತಿ ಕಡಿಮೆ ಆದರೆ ಇವರು ಧೈರ್ಯಶಾಲಿಗಳೂ, ಸ್ವಾತಂತ್ರ್ಯಪ್ರಿಯರೂ, ಸ್ವಾವಲಂಬನದಿಂದ ಧನಾರ್ಜನೆಯನ್ನು ಕೈಕೊಳ್ಳುತ್ತಾರೆ.

ಬುಧ :— ಬುದ್ಧಿವಂತರೂ ವಾಕ್ಚತುರರೂ ಇದ್ದು ಧರ್ಮ ಅಥವಾ ನೀತಿ-ಅನೀತಿಗಳ ಬಗ್ಗೆ ವಿಚಾರಿಸದೆ ಪರಿಸ್ಥಿತಿಗನುಸಾರವಾಗಿ ನಡೆಯುತ್ತಾರೆ. ಅಗ್ನಿ ಹಾಗೂ ಜಲರಾಶಿಯ ಬುಧನು ಭಾಗ್ಯದಲ್ಲಿದ್ದ ಸ್ತ್ರೀಯರು " ಮಧು ತಿಷ್ಟತಿ ಜಿವ್ಹಾಗ್ರೆ " ಎಂಬಂತೆ ವರ್ತಿಸುತ್ತಾರೆ.

ಗುರು:— ಬಲಾಢ್ಯ ಗುರುವು ಭಾಗ್ಯದಲ್ಲಿದ್ದ ಸ್ತ್ರೀಯರ ವಿವಾಹವು ಬೇಗನೆ ಆಗುತ್ತದೆ. ವಿವಾಹದ ನಂತರ ಭಾಗ್ಯೋದಯ.

ಶುಕ್ರ:— ಬಲಾಢ್ಯ ಶುಕ್ರನು ಭಾಗ್ಯದಲ್ಲಿದ್ದ ಸ್ತ್ರೀಯರಿಗೆ ಸಂಗೀತ, ಸಾಹಿತ್ಯ, ಕಾವ್ಯಕಲೆಗಳಲ್ಲಿ ಪ್ರವೀಣತೆಯಿರುತ್ತದೆ ಇಂಥ ಸ್ತ್ರೀಯರ ವಿವಾಹವು ತೀವ್ರವಾಗುವದಲ್ಲದೆ, ವಿವಾಹದ ನಂತರ ಭಾಗ್ಯೋದಯ ವಾಗುತ್ತದೆ.

ಶನಿ:— ಬಲಾಢ್ಯ ಶನಿಯು ಭಾಗ್ಯದಲ್ಲಿದ್ದರೆ ಆ ಸ್ತ್ರೀಯರು ಧಾರ್ಮಿಕರೂ, ಸತ್ಯವಾದಿಗಳೂ, ನ್ಯಾಯಪ್ರಿಯರಿದ್ದು ಭಾಗ್ಯಹೀನರು ಇರುತ್ತಾರೆ.

ರಾಹು:— ಬಲಾಢ್ಯ ರಾಹು ಭಾಗ್ಯದಲ್ಲಿದ್ದರೆ ತೀರ್ಥಯಾತ್ರಾ ಸಂದರ್ಶನದ ಯೋಗವಿರುತ್ತದೆ.

ಕೇತು:— ಕೇತು ಭಾಗ್ಯದಲ್ಲಿದ್ದ ಸ್ತ್ರೀಯರು ಧಾರ್ಮಿಕರೂ, ಸತ್ಯವಾದಿಗಳೂ ಇರುತ್ತಾರೆ. ಇವರಿಗೆ ಪಿತೃಸೌಖ್ಯ ಕಡಿಮೆ.

ಭಾಗ್ಯೇಶನ ಫಲ

(೧) ಭಾಗ್ಯೇಶನು ಲಗ್ನದಲ್ಲಿದ್ದರೆ ಸದ್ಗುಣಗಳೂ, ಆರೋಗ್ಯವಂತರೂ ಸತ್ಯಪ್ರಿಯರೂ, ಇದ್ದು ಸಿರಿವಂತರಿರುತ್ತಾರೆ. (೨) ಭಾಗ್ಯೇಶನು ಧನ ಸ್ಥಾನದಲ್ಲಿದ್ದ ಸ್ತ್ರೀಯರ ಸಾಂಪತ್ತಿಕ ಸ್ಥಿತಿಯು ಚನ್ನಾಗಿರುತ್ತದೆ. ಇವರು ಪರೋಪಕಾರಗಳಿರುತ್ತಾರೆ. ಭಾಗ್ಯೇಶನು ಕ್ರೂರ ಗ್ರಹವಿದ್ದು ಧನಸ್ಥಾನ ದಲ್ಲಿ ಇದ್ದರೂ ಸಾಂಪತ್ತಿಕ ಸ್ಥಿತಿಯು ಚನ್ನಾಗಿರುತ್ತದೆ. ಆದರೆ ಇವರು ಮಿತಭಾಷಿಗಳು. (೩) ನವಮೇಶನು ತೃತೀಯದಲ್ಲಿದ್ದ ಸ್ತ್ರೀಯರಿಗೆ ಬಂಧು-ಭಗಿನಿಯರ ಸೌಖ್ಯ ಸಿಗುತ್ತದೆ. ಇವರಿಗೆ ಪ್ರವಾಸ ಬಹಳ ತೀರ್ಥ ಯಾತ್ರೆಗಳನ್ನು ಕೈಕೊಳ್ಳುವರು. (೪) ನವಮೇಶನು ಚತುರ್ಥದಲ್ಲಿದ್ದರೆ ಮಾತೃ ಸೌಖ್ಯ ಚನ್ನಾಗಿ ಲಭಿಸುತ್ತದೆ. ಆದರೆ ಕ್ರೂರ ಗ್ರಹವಿದ್ದರೆ ಸಿಗಲಾರದು. (೫) ನವಮೇಶನು ಪಂಚಮದಲ್ಲಿದ್ದರೆ ವಿದ್ಯೆ ಹಾಗೂ

ಸಂತತಿ ಸೌಖ್ಯ ಸಿಗುತ್ತದೆ. (೬) ಭಾಗ್ಯೇಶನು ಷಷ್ಠದಲ್ಲಿದ್ದರೆ ವಿದ್ಯಾ ರಹಿತನೂ, ಶತ್ರುಪೀಡಿತನೂ ಇರುತ್ತಾರೆ. (೭) ಭಾಗ್ಯೇಶನು ಸಪ್ತಮದಲ್ಲಿ ಇದ್ದರೆ ವಿವಾಹವು ಬೇಗವಾಗುವದಲ್ಲದೆ ವಿವಾಹದ ನಂತರ ಭಾಗ್ಯೋದಯ ವಾಗುತ್ತದೆ. (೮) ಭಾಗ್ಯೇಶನು ಅಷ್ಟಮದಲ್ಲಿದ್ದರೆ ದಾರಿದ್ರ್ಯಯೋಗವು. ಕ್ರೂರಗ್ರಹಗಳು ಭಾಗ್ಯೇಶರಾಗಿ ಅಷ್ಟಮದಲ್ಲಿದ್ದರೆ ಸ್ವಾವಲಂಬಿಗಳಿರುತ್ತಾರೆ. (೯) ಭಾಗ್ಯೇಶನು ಭಾಗ್ಯದಲ್ಲಿರುವದು ಎಲ್ಲ ರೀತಿಯಿಂದಲೂ ಅನುಕೂಲವು, (೧೦) ಭಾಗ್ಯೇಶನು ದಶಮದಲ್ಲಿದ್ದರೆ ಸ್ವಪರಾಕ್ರಮದಿಂದ ಧನಾರ್ಜನೆಯನ್ನು ಮಾಡುತ್ತಾರೆ. ಹಾಗೂ ಸಾರ್ವಜನಿಕ ಕಾರ್ಯಗಳಲ್ಲಿ ಪ್ರತಿಷ್ಠಿತರಾಗುತ್ತಾರೆ. (೧೧) ಭಾಗ್ಯೇಶನು ಏಕಾದಶ ಸ್ಥಾನದಲ್ಲಿದ್ದ ಅನೇಕ ಬಗೆಯಿಂದ ದ್ರವ್ಯ ಲಾಭವಾಗುತ್ತದೆ. (೧೨) ಭಾಗ್ಯೇಶನು ವ್ಯಯಸ್ಥಾನದಲ್ಲಿದ್ದರೆ ಪರ್ಯಟಕರು ಹಾಗೂ ತೀರ್ಥಯಾತ್ರೆಗಳನ್ನು ಸಂದರ್ಶಿಸುತ್ತಾರೆ.



# ದಶಮಸ್ಥಾನ

ಕುಂಡಲಿಯಲ್ಲಿಯ ಹತ್ತನೆಯ ಸ್ಥಾನಕ್ಕೆ ದಶಮಸ್ಥಾನ ಇಲ್ಲವೆ ಕರ್ಮಸ್ಥಾನ ಅನ್ನುತ್ತಾರೆ. ಈ ಸ್ಥಾನದಿಂದ ಪಿತೃಸುಖ, ನೌಕರಿ ಉದ್ಯೋಗ-ವ್ಯವಸಾಯಗಳಿಂದ ಧನಾರ್ಜನೆ, ಸಮಾಜದಲ್ಲಿ ಮಾನ-ಸನ್ಮಾನ ಮುಂತಾದ ಸಂಗತಿಗಳು ತಿಳಿಯುತ್ತವೆ. ಈ ಎಲ್ಲ ಸಂಗತಿಗಳನ್ನು ಈ ಪ್ರಕರಣದಲ್ಲಿ ವಿವೇಚಿಸಿದೆ

## ಪಿತೃಸುಖ

ಪಿತೃಕಾರಕ ಗ್ರಹ ಅಂದರೆ ರವಿ. ಪಿತೃಸ್ಥಾನವೆಂದರೆ ದಶಮಸ್ಥಾನ-ರಾಶಿ ಚಕ್ರದಲ್ಲಿ ಸಿಂಹರಾಶಿಯು ಪಿತೃಪೋಷಕ ರಾಶಿಯು. ಆದುದರಿಂದ ಪಿತೃಸುಖದ ಬಗ್ಗೆ ವಿಚಾರಿಸುವಾ ದಶಮಸ್ಥಾನ, ದಶಮಾಧಿಪ ದಶಮ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಯಾವದೇ ಲಗ್ನದ ಸಿಂಹ ರಾಶಿಯ ಬಲಾಬಲವನ್ನು ನೋಡಬೇಕು.

ಅಗ್ನಿ ತತ್ವದ ರಾಶಿಗಳು ಪಿತೃಪೋಷಕ ರಾಶಿಗಳು. ಸಿಂಹ ರಾಶಿಯ ರವಿಯು ೬, ೮, ೧೨ ಈ ಸ್ಥಾನಗಳನ್ನು ಹೊರತುಪಡಿಸಿ ಮಿಕ್ಕ ಯಾವದೇ ಸ್ಥಾನದಲ್ಲಿದ್ದರೂ ಪಿತೃಸೌಖ್ಯ ಸಿಗುತ್ತದೆ.

ಶನಿ, ಕೇತು ಇವು ಪಿತೃಸೌಖ್ಯನಾಶಕಾರಕ ಗ್ರಹಗಳು. ಈ ಗ್ರಹಗಳ ಅಶುಭ ಸಂಬಂಧ ರವಿಯೊಂದಿಗೆ ಇದ್ದರೆ ಪಿತೃಸೌಖ್ಯ ಮಾರಕವು. ಮಂಗಳನೊಬ್ಬನೇ ಬಲಾಢ್ಯನಾಗಿ ದಶಮದಲ್ಲಿದ್ದರೆ ಪಿತೃಸೌಖ್ಯ ಮಾರಕ ನಾಗಲಾರನು. ಆದರೆ ಮಂಗಳನು ಶನಿ, ರಾಹು, ಕೇತು ಇವರೊಂದಿಗೆ ಅಶುಭ ಯೋಗ ಮಾಡುತ್ತಿದ್ದರೆ ಮಾತ್ರ ಮಾರಕನಾಗುತಾರೆ.

ಚತುರ್ಥ ಸ್ಥಾನದಲ್ಲಿ ಇಲ್ಲವೇ ನವಮದಲ್ಲಿ ಅನೇಕ ಪಾಪಗ್ರಹಗಳು ಇದ್ದರೂ ಪಿತೃಸೌಖ್ಯಮಾರಕರಾಗುತ್ತಾರೆ.

## ಪಿತೃಸೌಖ್ಯದ ಯೋಗಗಳು

೧) ಬಲಾಢ್ಯ ರವಿಯು ದಶಮದಲ್ಲಿದ್ದರೆ ಅಥವಾ ಬಲಾಢ್ಯ ಗುರು ದಶಮದಲ್ಲಿದ್ದರೆ.

೨) ಯಾವದೇ ಎರಡು ಶುಭ ಗ್ರಹಗಳು ದಶಮದಲ್ಲಿ ಬಲಾಢ್ಯರಿದ್ದರೆ.

೩) ಗುರು-ಚಂದ್ರ, ಇಲ್ಲವೇ ರವಿ-ಗುರು ಇವರ ಸಮಸಪ್ತಕವು ಚತುರ್ಥ ದಶಮದಲ್ಲಿದ್ದರೆ ಅಥವಾ ದ್ವಿತೀಯ, ನವಮದಲ್ಲಿದ್ದರೆ.

೪, ವೃಶ್ಚಿಕ ಲಗ್ನದ ನವಮದಲ್ಲಿ ಗುರು ಹಾಗೂ ದಶಮದಲ್ಲಿ ರವಿಯು ಇದ್ದರೆ.

೫) ಸಿಂಹ ಲಗ್ನದ ನವಮದಲ್ಲಿ ರವಿಯು ಇದ್ದರೆ ಅಥವಾ ಕರ್ಕ ಲಗ್ನದ ದಶಮದಲ್ಲಿ ರವಿಯು ಇದ್ದರೆ.

೬) ದಶಮಾಧಿಪತಿಯು ಬಲಾಢ್ಯನಿದ್ದರೆ (ಶನಿಯ ಹೊರತಾಗಿ)

## ಅಲ್ಪ ಪಿತೃಸುಖ

೧) ಸುಖೇಶನು ಇಲ್ಲವೇ ದಶಮೇಶನು ನಿರ್ಬಲನಾಗಿ ೬, ೮, ೧೨ ಸ್ಥಾನಗಳಿದ್ದಳೆ ಅಗ್ನಿರಾಶಿಯ ಹೊರತಾಗಿ.

೨) ಅಗ್ನಿರಾಶಿಯನ್ನು ಹೊರತುಪಡಿಸಿ ಮಿಕ್ಕ ಯಾವದೇ ರಾಶಿಯು ರವಿ-ಮಂಗಳರ ಯುತಿಯು ನವಮ, ದಶಮದಲ್ಲಿದ ವಿವಾಹ ಪೂರ್ವದಲ್ಲಿಯೇ ಪಿತೃಸೌಖ್ಯ ನಾಶವಾಗುತ್ತವೆ.

೩) ಸಪ್ತಮದಲ್ಲಿ ಮಂಗಳನೂ ಅಷ್ಟಮದಲ್ಲಿ ಶನಿಯೂ ಇದ್ದರೆ ಬಾಲ್ಯಾವಸ್ಥೆಯಲ್ಲಿಯೇ ಪಿತೃಸೌಖ್ಯ ನಾಶವಾಗುತ್ತದೆ.

೪) ಅನೇಕ ಪಾಪಗ್ರಹಗಳು ದಶಮದಲ್ಲಿದ್ದರೆ ಪಿತೃಸೌಖ್ಯ ಸಿಗಲಾರದು.

## ಪಿತೃಸೌಖ್ಯದ ಅಭಾವ ಯೋಗಗಳು

೧) ಸಿಂಹ ರಾಶಿಯ ಚಂದ್ರನು ನವಮ ಇಲ್ಲವೆ ದಶಮದಲ್ಲಿದ್ದು, ಬಾಲಾವಸ್ಥೆಯಲ್ಲಿ ಸಾಡೇಸಾತಿ ಇದ್ದರೆ.

೨) ಶನಿ ಮಂಗಳ, ರವಿ-ಶನಿ, ರವಿ-ಕೇತು ಈ ಯಾವದೊಂದು ಜೋಡಿಗಳ ಯುತಿಯು ಚತುರ್ಥ ಇಲ್ಲವೆ ದಶಮದಲ್ಲಿದ್ದರೆ.

೩) ಶನಿ-ಮಂಗಳ ಇಲ್ಲವೆ ಶನಿ-ರವಿ ಇಲ್ಲವೆ ರವಿ-ಕೇತುಗಳ ಸಮ-ಸಪ್ತಕವು ಚತುರ್ಥ, ದಶಮದಲ್ಲಿದ್ದರೆ.

೪) ಅಶ್ವಿನಿ ಇಲ್ಲವೆ ಮೂಲಾ ನಕ್ಷತ್ರದ ಚಂದ್ರನು ರವಿಯೊಂದಿಗೆ ಲಗ್ನದಲ್ಲಿದ್ದರೆ.

೫) ಜನ್ಮತಃ ಸಾಡೇಸಾತಿ ಇದ್ದರೆ ಅಥವಾ ಚಂದ್ರ-ಮಂಗಳರ ಯುತಿ ಚತುರ್ಥ ಇಲ್ಲವೆ ದಶಮದಲ್ಲಿದ್ದು, ಬಾಲ್ಯಾವಸ್ಥೆಯಲ್ಲಿ ಶನಿಯ ಪರಿಭ್ರಮಣ ಇವರ ಮೇಲಿಂದ ಆಗುತ್ತಿದ್ದರೆ.

೬) ಸಿಂಹ ರಾಶಿಯಲ್ಲಿ ಶನಿ, ಮಂಗಳರಿದ್ದು, ರವಿಯು ನಿರ್ಬಲನಿದ್ದರೆ,

೭) ಜೇಷ್ಠಾ, ಮೂಲ, ಆಶ್ಲೇಷಾ, ನಕ್ಷತ್ರಗಳಲ್ಲಿ ಜನ್ಮಿಸಿದ್ದು, ಜನ್ಮತಃ ಸಾಡೇಸಾತಿ ಇದ್ದರೆ.

೮) ನೀಚ ರಾಶಿಯ ರವಿಯು ಶನಿಯೊಂದಿಗೆ ದಶಮ ಇಲ್ಲವೆ ಚತುರ್ಥದಲ್ಲಿದ್ದರೆ.

೯) ತೃತೀಯದಲ್ಲಿ ರಾಹು, ಚತುರ್ಥದಲ್ಲಿ ಮಂಗಳ, ದಶಮದಲ್ಲಿ ಶನಿ ಇದ್ದರೆ.

೧೦) ಧನಸ್ಥಾನದಲ್ಲಿ ಶನಿ ಚತುರ್ಥದಲ್ಲಿ ಮಂಗಳನಿದ್ದು ದಶಮದಲ್ಲಿ ಕೇತು ಇದ್ದರೆ.

ಮೇಲೆ ತೋರಿಸಿದ ಯೋಗಗಳಲ್ಲಿ ಜನ್ಮಿಸಿದ ಸ್ತ್ರೀಯರಿಗೆ ಪಿತೃ ಸೌಖ್ಯದ ಅಭಾವವಿರುತ್ತದೆ.

### ರಾಜಯೋಗ

ರಾಜಯೋಗದ ಬಗ್ಗೆ ವಿಚಾರಮಾಡುವಾಗ ಪುರುಷರ ಕುಂಡಲಿಗಳಲ್ಲಿ ರಾಜಯೋಗಗಳಿಗಿಂತ ಸ್ತ್ರೀಯರ ಕುಂಡಲಿಗಳಲ್ಲಿದ್ದ ರಾಜಯೋಗಗಳು ಭಿನ್ನ ಭಿನ್ನವಿರುತ್ತವೆ. ಭಾಗ್ಯಶಾಲಿ ಪುರುಷನ ಕೈ ಹಿಡಿಯುವ ಯೋಗವೇ ಸ್ತ್ರೀಯರ ಕುಂಡಲಿಯಲ್ಲಿಯ ರಾಜಯೋಗವು.

ರಾಷ್ಟ್ರಪತಿಯ ಪತ್ನಿಯಾಗುವದಾಗಲಿ, ಗವರ್ನರನ ಪತ್ನಿಯಾಗುವದಾಗಲಿ, ನ್ಯಾಯಾಧೀಶನ, ಕಲೆಕ್ಟರನ ಪತ್ನಿಯಾಗುವ ಸೌಭಾಗ್ಯವು ದೈವದ ಬೆಂಬಲವಿಲ್ಲದೆ ದೊರೆಯಲಾರದು.

ನ್ಯಾಯಾಧೀಶ, ಕಲೆಕ್ಟರ, ಗವರ್ನರ ಮುಂತಾದ ಅಧಿಕಾರಿಗಳ ಮನೆಯಲ್ಲಿ ಜನ್ಮಿಸಿದರೂ ಅಧಿಕಾರಿಗಳ ಪತ್ನಿಯರಾಗುತ್ತಾರೆ ಎಂಬುದು ಹೇಳಲು ಬಾರದು. ಆದುದರಿಂದ ಜಾತಕದಲ್ಲಿಯ ವಿದ್ಯಾ, ಬುದ್ಧಿ, ಕರ್ತವ್ಯ ದಕ್ಷತೆ, ರೂಪ, ಸೌಂದರ್ಯ, ಕಲಾಕೌಶಲ್ಯ ಇವೆಲ್ಲಕ್ಕಿಂತ ದೈವಬಲವೆ ಪ್ರಾಧಾನ್ಯವಾದದ್ದು ಎಂಬುದನ್ನು ನಿತ್ಯ ಜೀವನದಲ್ಲಿ ಕಾಣುತ್ತೇವೆ. ಉದಾ : ಒಂದೇ ತಾಯಿ-ತಂದೆಗಳಲ್ಲಿ ಜನ್ಮಿಸಿದ ಇಬ್ಬರು ಸಹೋದರಿಯರಲ್ಲಿ ಒಬ್ಬಳು ಸಾಮಾನ್ಯ ಗುಮಾಸ್ತನ ಪತ್ನಿಯು ಮತ್ತೊಬ್ಬಳು ಒಬ್ಬ ವರಿಷ್ಠ ಅಧಿಕಾರಿಯ ಪತ್ನಿಯಾಗುವಳು. ಇದಕ್ಕೆಲ್ಲ ದೈವ ಲೀಲೆಯೇ ಕಾರಣವಲ್ಲದೇ ಮತ್ತೇನು ?

ಪುರುಷರ ಕುಂಡಲಿಯಲ್ಲಿಯ ರಾಜಯೋಗ ಹಾಗೂ ಸ್ತ್ರೀಯರ ಕುಂಡಲಿಯಲ್ಲಿಯ ರಾಜಯೋಗಗಳಲ್ಲಿ ಸ್ಥಾನ ಹಾಗೂ ಗ್ರಹಗಳ ದೃಷ್ಟಿಯಿಂದ ಭೇದವು ಕಂಡುಬರುತ್ತದೆ. ಪುರುಷರ ಕುಂಡಲಿಗಳಲ್ಲಿ ರವಿ, ಮಂಗಳ, ಶನಿ ಇವರ ಬಲಾಬಲಗಳನ್ನು ನೋಡುತ್ತಾರೆ. ಸ್ತ್ರೀಯರ ಕುಂಡಲಿಗಳಲ್ಲಿ ಗುರು, ಚಂದ್ರ, ಶುಕ್ರ ಇವರ ಬಲಾಬಲಗಳನ್ನು ನೋಡಬೇಕು. ವಿದ್ಯೆ ಹಾಗೂ ಸಾಹಸಗಳಿಂದ ಪುರುಷ ಧನವಂತನಾಗಬಲ್ಲ. ಆದರೆ ಸ್ತ್ರೀಯರಿಗೆ ವಿದ್ಯೆಯೊಂದಿಗೆ ರೂಪ-ಸೌಂದರ್ಯ, ನಮ್ರತೆ, ಕೌಶಲ್ಯ, ಮುಂತಾದ ಗುಣಗಳು ರಾಜಯೋಗಕ್ಕೆ ಕಾರಣೀಭೂತ ಆಗುತ್ತವೆ

ಯಾವ ಸ್ತ್ರೀಯು ಸ್ವಪರಾಕ್ರಮದಿಂದ ಪ್ರಖ್ಯಾತಳಾಗಿರುತ್ತಾಳೆಯೋ ಅಂಥ ಸ್ತ್ರೀಯರ ಕುಂಡಲಿಯಲ್ಲಿ ವಿಷಮಲಗ್ನ ಹಾಗೂ ಪುರುಷ ರಾಶಿ. ಪುರುಷ ಗ್ರಹಗಳ ಪ್ರಾಬಲ್ಯವಿರುತ್ತದೆ. ಕಲಾಕೌಶಲ್ಯ ಅಥವಾ ಕಲಾ-ಲಾವಣ್ಯಗಳಿಂದ ಪ್ರಖ್ಯಾತರಾಗಿರುವ ಸ್ತ್ರೀಯರ ಕುಂಡಲಿಯಲ್ಲಿ ಸ್ತ್ರೀ ಗ್ರಹಗಳು ಸ್ತ್ರೀ ರಾಶಿಗಳ ಮತ್ತು ಸಮರಾಶಿಗಳ ಲಗ್ನ ಪ್ರಬಲವಿರುತ್ತವೆ. ಹಾಗೂ ವಾಯು ರಾಶಿಗಳು ಮತ್ತು ಗುರು ಕೂಡ ಪ್ರಬಲರಿರುತ್ತಾರೆ.

## ರಾಜಯೋಗಗಳು

ತ್ರಿಕೋಣದ ಹಾಗೂ ಕೇಂದ್ರಾಧಿಪರ (ವಿಶೇಷತಃ ಲಗ್ನಾಧಿಪ ಮತ್ತು ದಶಮಾಧಿಪರ) ಯೋಗವು ರಾಜಯೋಗಕಾರಕವು. ಇದರಲ್ಲಿ ತ್ರಿಕೋಣ ಸ್ಥಾನಗಳಿಗೆ (೫ ೯) ಲಕ್ಷ್ಮೀಸ್ಥಾನಗಳೆಂದು ಹಾಗೂ ಕೇಂದ್ರಸ್ಥಾನಗಳಿಗೆ (೧, ೪, ೭, ೧೦) ವಿಷ್ಣುಸ್ಥಾನಗಳೆಂಬ ಸಂಜ್ಞೆ. ಆದುದರಿಂದ ಇವೆರಡರ ಶುಭ ಯೋಗವು ರಾಜಯೋಗವು.

೧) ಪಂಚಮೇಶ ಬಲಾಢ್ಯನಾಗಿ ನವಮದಲ್ಲಿ ಇಲ್ಲವೆ ದಶಮದಲ್ಲಿ ಇದ್ದರೆ.

೨) ನವಮಾಧಿಪನು ನವಮದಲ್ಲಿದ್ದರೆ.

೩) ಲಗ್ನಾಧಿಪನು ಬಲಾಢ್ಯನಾಗಿ ದಶಮದಲ್ಲಿದ್ದರೆ.

೪) ಮೀನ ರಾಶಿಯ ಗುರು, ಚಂದ್ರ ಇಲ್ಲವೆ ಗುರು-ಶುಕ್ರರು ಸಪ್ತಮದಲ್ಲಿದ್ದು ಲಗ್ನಾಧಿಪನು ಲಗ್ನ ಇಲ್ಲವೇ ಭಾಗ್ಯದಲ್ಲಿದ್ದರೆ, ಕರ್ಕ ರಾಶಿಯ ಗುರು, ಚಂದ್ರರು ಲಗ್ನದಲ್ಲಿದ್ದರೆ ಅಥವಾ ಶುಕ್ರ, ಚಂದ್ರರು ಲಗ್ನದಲ್ಲಿದ್ದರೆ, ಅಥವಾ ಭಾಗ್ಯದಲ್ಲಿದ್ದರೆ.

೫) ನವಮೇಶನು ಬಲಾಢನಾಗಿ ದಶಮದಲ್ಲಿದ್ದರೆ.

೬) ಉಚ್ಚ ರವಿಯು ನವಮ ಇಲ್ಲವೇ ದಶಮದಲ್ಲಿದ್ದರೆ.

೭) ಗುರು ಒಬ್ಬನೇ ಬಲಾಢ್ಯನಾಗಿ ಲಗ್ನ, ದಶಮದಲ್ಲಿದ್ದರೆ.

೮) ಜಲ ಹಾಗೂ ವಾಯು ರಾಶಿಗಳ ಗುರುವು ಲಗ್ನ ಇಲ್ಲವೇ ದಶಮದಲ್ಲಿ ಇದ್ದರೆ.

೯) ತುಲಾ ರಾಶಿಯ ಶುಕ್ರನು ಸಪ್ತಮದಲ್ಲಿ ಹಾಗೂ ಚಂದ್ರನು ಚತುರ್ಥದಲ್ಲಿ ಇದ್ದರೆ ಅಥವಾ ಮೀನ ರಾಶಿಯ ಶುಕ್ರನು ಸಪ್ತಮದಲ್ಲಿ ಹಾಗೂ ಗುರು ಚತುರ್ಥದಲ್ಲಿ ಇದ್ದರೆ.

೧೦) ಧನು ರಾಶಿಯ ಗುರು ಸಪ್ತಮದಲ್ಲಿ ಹಾಗೂ ಶುಕ್ರನು ದಶಮದಲ್ಲಿದ್ದರೆ.

೧೧) ಕರ್ಕ ರಾಶಿಯಲ್ಲಿ ಗುರು-ಚಂದ್ರರ ಯುತಿಯು ೧, ೭, ೯, ೧೦ ಸ್ಥಾನಗಳಲ್ಲಿದ್ದರೆ.

೧೨) ಗುರು-ಶುಕ್ರರ ಯುತಿಯು ಮೀನದಲ್ಲಿದ್ದು ೧, ೭, ೯, ೧೦ ಸ್ಥಾನಗಳಲ್ಲಿದ್ದರೆ.

೧೩) ಚಂದ್ರ-ಶುಕ್ರರ ಯುತಿಯು ವೃಷಭದಲ್ಲಿ ೧, ೨, ೯, ೧೦ ಸ್ಥಾನಗಳಲ್ಲಿ ಆಗುತ್ತಿದ್ದರೆ.

೧೪) ಉಚ್ಚ ಮಂಗಳನು ತೃತೀಯ ಇಲ್ಲವೇ ದಶಮದಲ್ಲಿದ್ದರೆ

೧೫) ಯಾವದೇ ಜಾತಕದಲ್ಲಿ (ಕುಂಡಲಿಯ) ३ ಇಲ್ಲವೇ ಹೆಚ್ಚು ಗ್ರಹಗಳು ಸ್ವಗ್ರಹ ಇಲ್ಲವೇ ಉಚ್ಚ ರಾಶಿಗಳಲ್ಲಿದ್ದರೆ ಅದೂ ಕೂಡ ರಾಜಯೋಗವೇ ಸರಿ.

ರಾಜಯೋಗವೆಂದರೆ ರಾಜನಾಗುವ ಇಲ್ಲವೇ ರಾಣಿಯಾಗುವ ಯೋಗ ವೆಂದು ತಿಳಿಯಲಾರದು. ಭಾಗ್ಯ, ಐಶ್ವರ್ಯ, ಆರೋಗ್ಯ ಅಭಿವೃದ್ಧಿ ಎಂದು ತಿಳಿಯಬೇಕು.

### ದಶಮಸ್ಥಾನಗಳಲ್ಲಿಂದ ಗ್ರಹಗಳ ಪರಿಣಾಮ

ರವಿ:— ಬಲಾಢ್ಯ ರವಿಯು ದಶಮದಲ್ಲಿದ್ದರೆ ಹಾಗೂ ಪಿತೃ ಸೌಖ್ಯ ಚೆನ್ನಾಗಿರುತ್ತದೆ. ಅಲ್ಲದೆ ಇಂಥ ಸ್ತ್ರೀಯರು ವರಿಷ್ಠ ಅಧಿಕಾರಿಗಳ ಆಗುತ್ತಾರೆ. ಇಲ್ಲವೆ ವರಿಷ್ಠ ಅಧಿಕಾರಿಗಳ ಮಾತೆ ಇಲ್ಲವ ಪತ್ನಿಯರಾಗಿ ಇರುತಾರೆ.

ಚಂದ್ರ:— ದಶಮದಲ್ಲಿ ಉಚ್ಚ ಚಂದ್ರನಿದ್ದ, ಸ್ತ್ರೀಯರಿಗೆ ಪ್ರವಾಸವು ಹೆಚ್ಚು.

ಮಂಗಳ:— ಬಲಾಢ್ಯ ಮಂಗಳನು ದಶಮದಲ್ಲಿದ್ದ ಸ್ತ್ರೀಯರು ಸ್ವಪರಾಕ್ರಮಿಗಳೂ ಸ್ವಾವಲಂಬಿಗಳೂ ಆಗುತ್ತಾರೆ. ಅಂದರೆ ಸ್ವಪರಾಕ್ರಮ ದಿಂದ ಧನವನ್ನು ಗಳಿಸುವರು.

ಬುಧ:— ಬುಧನೊಬ್ಬನೇ ಬಲಾಢ್ಯನಾಗಿ ದಶಮದಲ್ಲಿದ್ದರೆ ಪತ್ರಿಕಾ ವ್ಯವಸಾಯ, ಟಾಯಿಪಿಸ್ಟ, ಗುಮಾಸ್ತವೃತ್ತಿ, ವ್ಯಾಪಾರ ಮುಂತಾದ ಕ್ಷೇತ್ರ ಗಳಲ್ಲಿ ಪ್ರವೀಣರಾಗುತ್ತಾರೆ.

ಗುರು :— ಗುರು ದಶಮದಲ್ಲಿ ಬಲಾಢ್ಯನಿದ್ದರೆ ವಕೀಲ, ನ್ಯಾಯಾಧೀಶ, ಪ್ರೊಫೆಸರ ಇಲ್ಲವೆ ವರಿಷ್ಠ ಅಧಿಕಾರಿಗಳಾಗುತ್ತಾರೆ.

ಶುಕ್ರ :— ದಶಮದಲ್ಲಿ ಶುಕ್ರನು ಉಚ್ಚನಾಗಿದ್ದರೆ ಕಲಾಕೌಶಲ್ಯದಲ್ಲಿ ಪ್ರವೀಣರಾಗುತ್ತಾರೆ. ಅಲ್ಲದೆ ಇಂಥ ಸ್ತ್ರೀಯರು ನೃತ್ಯ, ಸಂಗೀತ, ಸಾಹಿತ್ಯ, ಗಳಲ್ಲಿಯೂ ಪ್ರವೀಣರಾಗಿ ಧನಾರ್ಜನೆಯನ್ನು ಮಾಡುತ್ತಾರೆ.

ಶನಿ :— ಯಾವದೇ ರಾಶಿಯ ಶನಿಯು ದಶಮದಲ್ಲಿದ್ದರೂ ತವರು ಮನೆಯ ( ಅಂದರೆ ಪಿತೃಸೌಖ್ಯ ) ಸೌಖ್ಯ ಕಡಿಮೆ. ಇಂಥ ಸ್ತ್ರೀಯರು ಗೃಹ-ಉದ್ಯೋಗಗಳಲ್ಲಿ ಪಾರಂಗತರಿರುತ್ತಾರೆ. ತತ್ತ್ವಜ್ಞಾನಿಗಳೂ ಧಾರ್ಮಿಕ ವೃತ್ತಿಯವರೂ ಇರುತ್ತಾರೆ. ಇಂಥ ಸ್ತ್ರೀಯರು ಶಿಕ್ಷಕಿಯರು ನ್ಯಾಯಾಧೀಶರು, ಒಕ್ಕಲತನ ಶಾಖೆಯಲ್ಲಿ ಪ್ರವೀಣ ( Agriculturist ) ರಿರುತ್ತಾರೆ.

ರಾಹು :— ಮಿಥುನ ಹಾಗೂ ಕನ್ಯಾರಾಶಿಗಳನ್ನು ಹೊರತುಪಡಿಸಿ ಮಿಕ್ಕ ಯಾವದೇ ರಾಶಿಯ ರಾಹು ದಶಮದಲ್ಲಿದ್ದರೆ ಪ್ರತಿಕೂಲ.

ಕೇತು :— ಯಾವದೇ ರಾಶಿಯ ಕೇತು ದಶಮದಲ್ಲಿದ್ದರೂ ಪಿತೃ ಸೌಖ್ಯ ಕಡಿಮೆ. ಶನಿಯೊಂದಿಗೆ ಇದ್ದರೆ ಬಾಲ್ಯದಿಂದಲೇ ಪಿತೃಸೌಖ್ಯ ಕಡಿಮೆ.

## ಭಾವೇಶನ ಫಲ

೧) ದಶಮೇಶನು ತನುಸ್ಥಾನದಲ್ಲಿದ್ದರೆ ಭಾಗ್ಯಶಾಲೀನಿ.

೨) ದಶಮೇಶನು ಧನಸ್ಥಾನದಲ್ಲಿದ್ದ ಸ್ತ್ರೀಯರ ಸಾಂಪತ್ತಿಕ ಸ್ಥಿತಿಯು ಚೆನ್ನಾಗಿರುತ್ತದೆ

೩) ದಶಮೇಶನು ತೃತೀಯದಲ್ಲಿ ಇದ್ದರೆ ಗೃಹಕೃತ್ಯದಲ್ಲಿ ಪ್ರವೀಣರು ಇರುತ್ತಾರೆ.

೪) ದಶಮೇಶನು ಚತುರ್ಥದಲ್ಲಿದ್ದರೆ ಸುಖಿಗಳಿರುತ್ತಾರೆ.

೫) ದಶಮೇಶನು ಪಂಚಮದಲ್ಲಿದ್ದರೆ ವಿದ್ಯಾಭ್ಯಾಸ ಪೂರ್ಣ ಆಗುತ್ತದೆ.

೬) ದಶಮೇಶನು ಷಷ್ಠದಲ್ಲಿದ್ದರೆ ಪಿತೃಸೌಖ್ಯ ಕಡಿಮೆ.

೭) ದಶಮೇಶನು ಯಾವುದೇ ಗ್ರಹವಿದ್ದು ಸಪ್ತಮದಲ್ಲಿದ್ದರೂ ಪತಿಯ ಸೌಖ್ಯಸಿಗುತ್ತದೆ.

೮) ಸಿಂಹ ಹಾಗೂ ತುಲಾ ಲಗ್ನಗಳನ್ನು ಹೊರತುಪಡಿಸಿ ಮಿಕ್ಕ ಯಾವದೇ ಲಗ್ನದ ದಶಮೇಶನು ಅಷ್ಟಮ ಸ್ಥಾನದಲ್ಲಿರುವದು ಅಶುಭದಾಯಕವು.

೯) ದಶಮೇಶನು ಭಾಗ್ಯದಲ್ಲಿರುವದು ರಾಜಯೋಗಕಾರಕವು.

೧೦) ದಶಮೇಶನು ದಶಮದಲ್ಲಿರುವದು ರಾಜಯೋಗಕಾರಕವು.

೧೧) ದಶಮೇಶನು ಲಾಭದಲ್ಲಿದ್ದರೆ ಅನೇಕ ತರಹದಿಂದ ಸಂಪತ್ತು ದೊರೆಯುತ್ತದೆ.

೧೨) ದಶಮೇಶನು ವ್ಯಯಸ್ಥಾನದಲ್ಲಿದ್ದರೆ ಪಿತಾರ್ಜಿತ ಸಂಪತ್ತಿನ ಸೌಖ್ಯ ಸಿಗಲಾರದು.



# ಲಾಭಸ್ಥಾನ

ಲಾಭಸ್ಥಾನವೆಂದರೆ ಕುಂಡಲಿಯ ಏಕಾದಶ ಸ್ಥಾನವು. ಈ ಸ್ಥಾನದಿಂದ ಮಿತ್ರತ್ವ, ಸ್ಥಾವರ–ಜಂಗಮ ಆಸ್ತಿಗಳು, ಸಂತತಿ, ವಿದ್ಯೆ, ಬುದ್ಧಿ, ಅನೇಕ ತರಹದ ಲಾಭ, ಮುಂತಾದ ವಿಷಯಗಳನ್ನು ಕುರಿತು ಹೇಳಲು ಬರುತ್ತದೆ. ಈ ಎಲ್ಲ ವಿಷಯಗಳನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ಈ ಸ್ಥಾನದಲ್ಲಿ ಯಾವ ಗ್ರಹವಿದ್ದರೂ ಶುಭದಾಯಕವೇ. ಆದರೆ ಶನಿ, ರಾಹು ಮಂಗಳರಂತಹ ಪಾಪಗ್ರಹಗಳು ಇದ್ದರೆ ಸಂತತಿಗೆ ಅಪಾಯವು ಏಕಾದಶ ಸ್ಥಾನದಲ್ಲಿ ಶನಿ ಅಥವಾ ಅಥವಾ ರಾಹು ಇದ್ದರಂತೂ ಗರ್ಭ ಪತನದ ಭೀತಿಯು ಇರುತ್ತದೆ. ಜಲರಾಶಿಗಳು ಇಲ್ಲವೆ ಗುರು ಏಕಾದಶ ಸ್ಥಾನದಲ್ಲಿ ಇದ್ದರೆ ವಿಪುಲ ಸಂತತಿಯ ಪ್ರಾಪ್ತಿಯಾಗುತ್ತದೆ.

## ಲಾಭ

ನಿಜವಾದ ಸಾಂಪತ್ತಿಕ ಸ್ಥಿತಿಯನ್ನು ತೋರಿಸುವ ಸ್ಥಾನವೆಂದರೆ ಏಕಾದಶ ಸ್ಥಾನವು. ಸಾಂಪತ್ತಿಕ ವಿಚಾರ ಮಾಡುವಾಗ ಐದಾರು ಸ್ಥಾನಗಳನ್ನು ನೋಡಬೇಕಾಗುತ್ತದೆ.

(೧) ಧನಸ್ಥಾನದಿಂದ ಹಿರಿಯರು ಮಾಡಿಟ್ಟ ಸಂಪತ್ತಿನ ಬಗ್ಗೆ ತಿಳಿಯುತ್ತವೆ. (೨) ಪಂಚಮಸ್ಥಾನದಿಂದ ಕಲಾಕೌಶಲ್ಯದಿಂದ ಬರುವ ಹಣ, ಷೇರು, ಬ್ಯಾಂಕು, ಜಂಗಮ ಮುಂತಾದವುಗಳಲ್ಲಿ ಇಟ್ಟ ಠೇವಿನಿಂದ ಬರುವ ಬಡ್ಡಿಯ ಹಣ. (೩) ಚತುರ್ಥಸ್ಥಾನದಿಂದ ಸ್ಥಾವರ ಆಸ್ತಿ ಮತ್ತು ವಾಹನಗಳಿಂದ ಬರುವ ಸಂಪತ್ತು. (೪) ಸಪ್ತಮ ಹಾಗೂ ನವಮ ಸ್ಥಾನಗಳಿಂದ ಪತಿ ಇಲ್ಲವೆ ಪತ್ನಿಯ ಸಾಂಪತ್ತಿಕ ಸ್ಥಿತಿಯನ್ನೂ (೫) ಅಷ್ಟಮ ಸ್ಥಾನದಿಂದ ಲಿಲಾವು, ಸಟ್ಟಾ-ಲಾಟರಿ, ಮಂದ್ಯ, ಭೂಗತದ್ರವ್ಯ ಮುಂತಾದ ಆಕಸ್ಮಿಕ ಧನಲಾಭಗಳ ಬಗ್ಗೆ (೬) ದಶಮಸ್ಥಾನದಿಂದ ನೌಕರಿ, ಉದ್ಯೋಗ ವ್ಯವಸಾಯಗಳಿಂದ ಬರುವ ಸಂಪತ್ತಿನ ಬಗ್ಗೆ ತಿಳಿಯುತ್ತದೆ.

ಈ ಮೇಲೆ ವಿವರಿಸಿದ ಆಯಾ ಸ್ಥಾನಗಳ ಸಂಬಂಧವು ಏಕಾದಶ ಸ್ಥಾನದೊಂದಿಗೆ ಇದ್ದರೆ ಖರ್ಚು ಎಷ್ಟಾಗಿ ಶಿಲ್ಕು ಎಷ್ಟು ಉಳಿಯುತ್ತದೆಂಬುದನ್ನು ಮಾತ್ರ ಹೇಳಬಹುದು

ಈ ಸ್ಥಾನದಲ್ಲಿ ಯಾವ ಗ್ರಹವಿದ್ದರೂ ಲಾಭದಾಯಕವೇ. ಕ್ರೂರ ಗ್ರಹಗಳಿದ್ದರೆ ಅಕಸ್ಮಿಕವಾಗಿ ಲಾಭವೂ ಮತ್ತು ಅಕಸ್ಮಿಕವಾಗಿ ಹಾನಿಯೂ ಆಗುತ್ತದೆ. ಶುಭಗ್ರಹಗಳಿದ್ದರೆ ಕಾಲಾವಕಾಶದಿಂದ ಲಾಭಹಾನಿಗಳು ಒದಗುತ್ತವೆ.

### ಲಾಭಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ:— ಸಾಂಪತ್ತಿಕ ಸ್ಥಿತಿಯು ಉತ್ತಮ ಪುತ್ರ ಸೌಖ್ಯವೂ ಉತ್ತಮ. ಪರಿಷ್ಕೃತ, ಹಾಗೂ ರಾಜಕೀಯ ವರ್ಗದವರಿಂದ ಲಾಭ ಒದಗುವ ಸಂಭವ.

ಚಂದ್ರ:— ಸಾಂಪತ್ತಿಕ ಸ್ಥಿತಿಯು ಉತ್ತಮ. ಕನ್ಯಾ ಸಂತತಿಯು ಅಧಿಕ. ಮಾನಸನ್ಮಾನ ಕೀರ್ತಿಗಳು ಲಭಿಸುತ್ತವೆ.

ಮಂಗಳ:— ಹಣದ ಬಗ್ಗೆ ಯಾವಾಗಲೂ ಚಿಂತೆ. ಸಂತತಿ ಸೌಖ್ಯ ಕಡಿಮೆ.

ಬುಧ:— ಅನೇಕ ಕಲಾಕೌಶಲ್ಯಗಳಲ್ಲಿ ಪ್ರವೀಣರು. ಸಾಂಪತ್ತಿಕ ಸ್ಥಿತಿಯು ತಕ್ಕಮಟ್ಟಿಗೆ.

ಗುರು:— ವಿದ್ಯೆ, ಸಂತತಿ, ಹಾಗೂ ಸಾಂಪತ್ತಿಕ ಸ್ಥಿತಿಯು ಅನುಕೂಲವಿರುತ್ತದೆ. ಅನೇಕ ಪ್ರತಿಷ್ಠಿತ ಜನರಿಂದ ಸಹಾಯ ಲಭಿಸುತ್ತದೆ. ಪುತ್ರಿ-ಪುತ್ರರಿಂದ ಸೌಖ್ಯವು

ಶುಕ್ರ:— ನೃತ್ಯ, ಸಂಗೀತ ಮುಂತಾದ ಕಲಾಕೌಶಲ್ಯಗಳಲ್ಲಿ ಪ್ರವೀಣರಿದ್ದು, ಭೋಗ-ವಿಲಾಸಗಳಲ್ಲಿ ಕಾಲವನ್ನು ಕಳೆಯುತ್ತಾರೆ. ಕನ್ಯಾ ಸಂತತಿಯು ಅಧಿಕ.

ಶನಿ:— ಆಯುಷ್ಯದ ಉತ್ತರಾರ್ಧದಲ್ಲಿ ಸಾಂಪತ್ತಿಕ ಸ್ಥಿತಿಯು. ಉತ್ತಮವು. ಸಂತತಿಯ ಸೌಖ್ಯ ಕಡಿಮೆ. ಲಗ್ನ ರಾಶಿಯು ಶನಿ ಇದ್ದರಂತೂ ವಂಧ್ಯಾಯೋಗವು ಪ್ರಾಪ್ತಿಯಾಗುತ್ತದೆ.

**ರಾಹು-ಕೇತು :—** ಮಿಥುನ ಕನ್ಯಾ ರಾಶಿಗಳ ರಾಹು, ಮತ್ತು ಧನು-ಮೀನಗಳ ಕೇತು ಈ ಸ್ಥಾನದಲ್ಲಿ ಇದ್ದರೆ ಸಾಂಪತ್ತಿಕ ಸ್ಥಿತಿಯು ನೆಟ್ಟಗೆ. ಉಳಿದ ಯಾವದೇ ರಾಶಿಯ ರಾಹು, ಕೇತು ಇದ್ದರೆ ವಿದ್ಯೆ, ಹಾಗೂ ಸಂತತಿಗೆ ಮಾರಕವು.

## ಲಾಭೇಶನ ಫಲ

(೧) ಲಾಭೇಶನು ಲಗ್ನದಲ್ಲಿದ್ದ ಸ್ತ್ರೀಯರು ಆರೋಗ್ಯವಂತರೂ, ಸುಶಿಕ್ಷಿತರೂ ಇದ್ದು. ಪುತ್ರ-ಪೌತ್ರರ ಸೌಖ್ಯದಿಂದ ಕೂಡಿದವರಿರುತ್ತಾರೆ. (೨) ಲಾಭೇಶನು ಧನಸ್ಥಾನದಲ್ಲಿದ್ದರೆ ಪತಿಯ ಗೃಹದ ಸಾಂಪತ್ತಿಕ ಸ್ಥಿತಿಯು ಉತ್ತಮವಿರುತ್ತದೆ ಇವರು ಆರೋಗ್ಯವಂತರಿದ್ದು ಲೋಭಿಗಳಿರುತ್ತಾರೆ. (೩) ಲಾಭೇಶನು ತೃತೀಯದಲ್ಲಿದ್ದರೆ ಸಾಂಪತ್ತಿಕ ಸ್ಥಿತಿಯು ತಕ್ಕಮಟ್ಟಿಗೆ. ಕ್ರೂರ ಗ್ರಹಗಳಿದ್ದರೆ ಆಪ್ತೇಷ್ಟರಲ್ಲಿ ವೈಮನಸ್ಸಿರುತ್ತದೆ. (೪) ಲಾಭೇಶನು ಚತುರ್ಥದಲ್ಲಿದ್ದರೆ ಸ್ಥಾವರ ಆಸ್ತಿಯ ಸೌಖ್ಯ ಸಿಗುತ್ತದೆ. ಶನಿ ಇದ್ದರೆ ಗಂಡು ಸಂತತಿ ಕಡಿಮೆ. (೫) ಲಾಭೇಶನು ಪಂಚಮದಲ್ಲಿದ್ದರೆ ವಿದ್ಯೆ ಹಾಗೂ ಸಂತತೀ ಸೌಖ್ಯ ಸಿಗುತ್ತದೆ. (೬) ಲಾಭೇಶನು ಷಷ್ಠದಲ್ಲಿದ್ದ ಸ್ತ್ರೀಯರ ಆರೋಗ್ಯವು ಚೆನ್ನಾಗಿರುವದಿಲ್ಲ ಹಾಗೂ ಕಳವು. ದರೋಡೆಗಳಿಂದ ಹಾನಿ ಒದಗುವ ಸಂಭವ. ಆದರೆ ಹೈನದ ವ್ಯಾಪಾರದಿಂದ ಲಾಭ. (೭) ಲಾಭೇಶನು ಸಪ್ತಮದಲ್ಲಿದ್ದರೆ ವಿವಾಹದ ನಂತರ ಸೌಖ್ಯ ಸಿಗುತ್ತದೆ. (೮) ಲಾಭೇಶನು ಅಷ್ಟಮದಲ್ಲಿದ್ದರೆ ಅನೇಕ ತರದ ಗಂಡಾಂತರಗಳು ಮತ್ತು ಅಪಘಾತಗಳು ಒದಗುತ್ತವೆ. ಕೋರ್ಟ, ಕಚೇರಿ, ಜಾಮೀನ, ವತ್ತಿ ಮುಂತಾದ ಕೆಲಸಗಳಿಗಾಗಿ ಹಣದ ಅಪವ್ಯಯ. (೯) ಲಾಭೇಶನು ನವಮದಲ್ಲಿದ್ದರೆ ಅನೇಕ ಬಗೆಯ ತೀರ್ಥಯಾತ್ರಾ ಸಂದರ್ಶನದ ಯೋಗವಿರುತ್ತದೆ. (೧೦) ಲಾಭೇಶನು ದಶಮದಲ್ಲಿದ್ದರೆ ಸಮಾಜದ ಧುರೀಣರೂ, ರಾಜಕೀಯ ಪಟುಗಳೂ ಇರುತ್ತಾರೆ. (೧೧) ಲಾಭೇಶನು ಲಾಭದಲ್ಲಿದ್ದರೆ ಎಲ್ಲ ತರಹದ ಸೌಖ್ಯವು ಸಿಗುತ್ತದೆ (೧೨) ಲಾಭೇಶನು ವ್ಯಯದಲ್ಲಿದ್ದರೆ ವಿನಾಕಾರಣ ಖರ್ಚು. ಕಳವು, ದರೋಡೆ. ಬಂದೀವಾಸ, ಕೋರ್ಟು. ಕಚೇರಿ. ಜಾಮೀನ ಮುಂತಾದವುಗಳಿಗಾಗಿ ಧನದ ಅಪವ್ಯಯ.

# ೧೨

# ವ್ಯಯಸ್ಥಾನ

ಕುಂಡಲಿಯ ದ್ವಾದಶ ಸ್ಥಾನಕ್ಕೆ ವ್ಯಯಸ್ಥಾನವೆನ್ನುತ್ತಾರೆ. ಈ ಸ್ಥಾನದಿಂದ ಪೂರ್ವಜನ್ಮದ ವಾಸನೆ, ಅಧ್ಯಾತ್ಮಜ್ಞಾನ, ದಾನ-ಧರ್ಮಗಳಿಗೋಸುಗ ಖರ್ಚು, ಹೂದ-ಅಡಚಣೆ, ವ್ಯಾಪಾರ ಉದ್ಯೋಗಗಳಲ್ಲಿ ಹಾನಿ, ಸಾಲ, ರಾಜಕೀಯ ಸಂಕಟ, ಜೇಲು ಕಾರಾಗೃಹವಾಸ, ಮರಣದಂಡನೆ, ಚಿಕ್ಕಪ್ಪ ದೊಡ್ಡಪ್ಪರಿಂದ ಲಾಭ-ಹಾನಿ, ಕಣ್ಣು, ಈ ಸಂಗತಿಗಳನ್ನು ಕುರಿತು ಹೇಳಲು ಬರುತ್ತದೆ.

ಈ ಸ್ಥಾನದಲ್ಲಿ ಗುರು, ಶನಿ, ರಾಹು, ಕೇತು ಈ ಗ್ರಹಗಳಿದ್ದರೆ ಪಾರಮಾರ್ಥಿಕ, ಅಧ್ಯಾತ್ಮಿಕ ಜ್ಞಾನಿಗಳಿದ್ದು ಸನ್ಯಾಸಿಗಳಾಗುತ್ತಾರೆ. ಈ ಸ್ಥಾನದಲ್ಲಿ ರವಿ ಇದ್ದರೆ ಜೀವನದ ಉತ್ತರಾರ್ಧವು ಸುಖದಿಂದ ಕೂಡಿರುತ್ತದೆ. ಶುಕ್ರ, ಚಂದ್ರರು ಈ ಸ್ಥಾನದಲ್ಲಿದ್ದರೆ ವಿಷಯವಾಸನೆಯು ಅತಿರೇಕದಿಂದ ಕೂಡಿದವರಿರುತ್ತಾರೆ ಆದರೆ ಕಕ್ಕಂದಿರಿಂದ ಧನದ ಹಾನಿಯಿರುತ್ತದೆ

ಶುಕ್ರ, ಚಂದ್ರ, ರವಿ ಈ ಯಾವುದೇ ಎರಡು ಗ್ರಹಗಳು ಈ ಸ್ಥಾನದಲ್ಲಿದ್ದರೆ ಕಣ್ಣಿನ ದೋಷವಿರುತ್ತದೆ. ಶುಕ್ರ-ಮಂಗಳ, ಶುಕ್ರ-ರವಿ, ಶುಕ್ರ-ರಾಹು ಈ ಯುತಿಗಳು ದ್ವಾದಶ ಸ್ಥಾನದಲ್ಲಿದ್ದರೂ ಕಣ್ಣಿನ ದೋಷ ವಿರುತ್ತದೆ.

ಶನಿ-ಮಂಗಳ, ಶನಿ-ರವಿ ರವಿ-ಕೇತು, ರಾಹು-ಮಂಗಳ, ರಾಹು-ಶನಿ, ಚಂದ್ರ-ಶನಿ, ಚಂದ್ರ-ರಾಹು ಈ ಯಾವುದೊಂದು ಯುತಿ ಈ ಸ್ಥಾನದಲ್ಲಿದ್ದರೆ ರಾಜಕೀಯ ಸಂಕಟ, ಕಾರಾಗೃಹದಭೀತಿ, ದ್ವೇಷ, ಸುಲಿಗೆಗಳಿಂದ ಹಾನಿ ಮುಂತಾದ ಸಂಕಟಗಳನ್ನು ಎದುರಿಸಬೇಕಾಗುತ್ತದೆ.

## ದ್ವಾದಶ ಸ್ಥಾನದಲ್ಲಿರುವ ಗ್ರಹಗಳ ಪರಿಣಾಮ

ರವಿ :— ಖರ್ಚಿನವರೂ, ಧೈರ್ಯಶಾಲಿಗಳೂ ಇದ್ದು, ಕಣ್ಣಿನ ದೋಷದಿಂದ ಯುಕ್ತರಿರುತ್ತಾರೆ. ಪ್ರವಾಸ ಬಹಳ.

ಚಂದ್ರ :— ಕಣ್ಣಿನ ದೋಷವಿರುತ್ತದೆ. ಜನ್ಮಸ್ಥಾನದಿಂದ ದೂರ ವಿರುವ ಸಂಭವವಿರುತ್ತದೆ. ಪ್ರವಾಸ ಬಹಳ, ವಿದೇಶ ಪ್ರಯಾಣವನ್ನು ಕೈಕೊಳ್ಳುವ ಸಂಭವವೂ ಇರುತ್ತದೆ.

ಮಂಗಳ :— ಖರ್ಚಿಕರು, ನಿರ್ಧನಯೋಗ, ಅಪಘಾತದಭಯ ಹಾಗೂ ರಾಜಕೀಯ ಸಂಕಟಗಳು ಒದಗುತ್ತವೆ.

ಬುಧ :— ಸಹೋದರನೊಂದಿಗೆ ಮನಸ್ತಾಪ. ಬುದ್ಧಿವಂತರೂ, ಚಾಣಾಕ್ಷರೂ ಇರುತ್ತಾನೆ.

ಗುರು :— ಪಾರಮಾರ್ಥದ ಕಡೆಗೆ ಒಲವು ಖರ್ಚಿಕರು ದಾನಿ, ತೀರ್ಥಯಾತ್ರಾ ಯೋಗ.

ಶುಕ್ರ :— ವಿಷಯ ವಾಸನೆಯು ಅಧಿಕ. ಕಣ್ಣಿನ ದೋಷ. ಖರ್ಚಿಕರು. ಶುಕ್ರ-ಮಂಗಳ ಇಲ್ಲವೆ ಶುಕ್ರ-ಚಂದ್ರರ ಯುತಿಯು ಈ ಸ್ಥಾನ ದಲ್ಲಿದ್ದರೆ ನೈತಿಕ ಅಧಃಪತನ (ಜಲರಾಶಿ)

ಶನಿ :— ದಾನ, ಧರ್ಮಗಳಿಂದ ಕೂಡಿದವರಿದ್ದು ಪರೋಪಕಾರಿಗಳೂ, ವಿರಕ್ತಿಗಳೂ ಆಧ್ಯಾತ್ಮಿಗಳೂ ಇರುತ್ತಾರೆ.

ರಾಹು :— ಸಮರಾಶಿಯ ರಾಹು ಈ ಸ್ಥಾನದಲ್ಲಿದ್ದರೆ ಸಾಂಪತ್ತಿಕ ಸ್ಥಿತಿಯು ಉತ್ತಮವಿದ್ದು ಕೀರ್ತಿವಂತರು ಇರುತ್ತಾರೆ.

ಕೇತು :— ಜೀವನದಲ್ಲಿ ಅನೇಕ ಬಗೆಯ ಅಪಘಾತಗಳು ಒದಗು ತ್ತವೆ. ಮಿತಿಮೀರಿ ಖರ್ಚು ಮಾಡುವವರೂ ಆಧ್ಯಾತ್ಮಿಗಳೂ, ವೈರಾಗ್ಯರೂ ಇರುತ್ತಾರೆ.

## ಭಾವೇಶನ ಫಲ

(೧) ವ್ಯಯೇಶನು ಲಗ್ನದಲ್ಲಿದ್ದರೆ ಜನ್ಮಸ್ಥಳದಿಂದ ದೂರವಿರುತ್ತಾರೆ. ಇವರು ಮಿತಭಾಷಿಗಳಿದ್ದು, ಪ್ರವಾಸಮಯ ಜೀವನದಿಂದ ಕೂಡಿದವರಿರು ತ್ತಾರೆ (೨) ವ್ಯಯೇಶನು ಧನದಲ್ಲಿದ್ದರೆ ಸಾಂಪತ್ತಿಕ ಸ್ಥಿತಿಯು ಉತ್ತಮ. ಆದರೆ ಕೃಪಣರು. (೩) ವ್ಯಯೇಶನು ಕ್ರೂರ ಗ್ರಹವಿದ್ದು ತೃತೀಯದಲ್ಲಿ

ಇದ್ದರೆ ಬಂಧು ಭಗಿನಿಯರ ಸೌಖ್ಯ ಕಡಿಮೆ. (೪) ವ್ಯಯೇಶನು ಚತುರ್ಥ ದಲ್ಲಿದ್ದರೆ ಸ್ಥಾವರ ಆಸ್ತಿಯ ಸೌಖ್ಯ ಕಡಿಮೆ. (೫) ವ್ಯಯೇಶನು ಪಂಚಮ ದಲ್ಲಿದ್ದರೆ ಸಂತತೀ-ಸೌಖ್ಯ ಕಡಿಮೆ. (೬) ವ್ಯಯೇಶನು ಷಷ್ಠದಲ್ಲಿದ್ದರೆ ಅನೇಕ ಬಗೆಯ ವಿಪತ್ತುಗಳು ಒದಗುತ್ತವೆ. ಆರೋಗ್ಯಕ್ಕೆ ಅಶುಭದಾಯೀವು. ಚೋರಭಯ ಹಾಗೂ ಶತೃಭಯ. (೭) ವ್ಯಯೇಶನು ಸಪ್ತಮದಲ್ಲಿದ್ದರೆ ವಿಷಯವಾಸನೆ ಬಹಳ ಮತ್ತೂ ದೂರದ ಪ್ರವಾಸ ಹಾಗೂ ತೀರ್ಥಯಾತ್ರಾ ಸಂದರ್ಶನವನ್ನು ಕೈಕೊಳ್ಳುತ್ತಾರೆ. . (೮) ವ್ಯಯೇಶನು ಅಷ್ಟಮದಲ್ಲಿದ್ದರೆ ಕರ್ತವ್ಯದಕ್ಷರೂ ಸಾಹಸಿಗಳೂ ಇದ್ದು ಅಶಕ್ತರಿರುತ್ತಾರೆ. (೯) ವ್ಯಯೇಶನು ನವಮದಲ್ಲಿದ್ದರೆ ತೀರ್ಥಯಾತ್ರಾ, ಪ್ರೇಕ್ಷಣೀಯ ಸ್ಥಳಗಳ ಸಂದರ್ಶನದ ಯೋಗವಿದ್ದು, ಪ್ರವಾಸಮಯ ಜೀವನದಿಂದ ಕೂಡಿದವರಿರುತ್ತಾರೆ. (೧೦) ವ್ಯಯೇಶನು ದಶಮದಲ್ಲಿದ್ದರೆ ಸಮಾಜದಲ್ಲಿ ಪ್ರತಿಷ್ಠಿತರಿರುತ್ತಾರೆ. (೧೧) ವ್ಯಯೇಶನು ಲಾಭದಲ್ಲಿದ್ದರೆ ಸಾಂಪತ್ತಿಕ ಸ್ಥಿತಿಯು ಉತ್ತಮವಿರುತ್ತದೆ. ಆದರೆ ಇವರು ಕೃಪಣರು (೧೨) ವ್ಯಯೇಶನು ವ್ಯಯದಲ್ಲಿದ್ದರೆ ಸಾಂಪತ್ತಿಕ ಸ್ಥಿತಿಯು ಉತ್ತಮವಿರುತ್ತದೆ. ಆದರೆ ಇವರು ಜಿಪುಣರು.

